# ಕನ್ನಡ ಭಾಷಾಧ್ಯಯನದ ಪರಂಪರೆಯ ನೆಲೆಗಳು

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ



ಸಂಶೋಧಕರು
ನಾಗಣ್ಣ

ಮಾರ್ಗದರ್ಶಕರು
ಡಾ. ಅಶೋಕಕುಮಾರ ರಂಜೇರೆ
ಸಹ ಪ್ರಾಧ್ಯಾಪಕರು



ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ



೨೦೧೨

# ಕನ್ನಡ ಭಾಷಾಧ್ಯಯನದ ಪರಂಪರೆಯ ನೆಲೆಗಳು

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಸಂಶೋಧನಾ ಮಹಾಪ್ರಬಂಧ

ಸಂಶೋಧನಾ ವಿದ್ಯಾರ್ಥಿ
**ನಾಗಣ್ಣ**

ಮಾರ್ಗದರ್ಶಕರು
**ಡಾ. ಅಶೋಕಕುಮಾರ ರಂಜೇರೆ**
ಸಹ ಪ್ರಾಧ್ಯಾಪಕರು



ಕನ್ನಡ ಭಾಷಾಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೨

# ಮಾರ್ಗದರ್ಶಕರ ಪ್ರಮಾಣ ಪತ್ರ

**ನಾಗಣ್ಣ** ಅವರು **ಕನ್ನಡ ಭಾಷಾಧ್ಯಯನದ ಪರಂಪರೆಯ ನೆಲೆಗಳು** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ. ಅಶೋಕಕುಮಾರ ರಂಜೇರೆ**
ಸಹ ಪ್ರಾಧ್ಯಾಪಕರು ಮತ್ತು ಮಾರ್ಗದರ್ಶಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ :
ಸ್ಥಳ : ವಿದ್ಯಾರಣ್ಯ

# ಸಂಶೋಧಕರ ಪ್ರಮಾಣ ಪತ್ರ

**ನಾಗಣ್ಣ** ಆದ ನಾನು **ಕನ್ನಡ ಭಾಷಾಧ್ಯಯನದ ಪರಂಪರೆಯ ನೆಲೆಗಳು** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು **ಡಾ. ಅಶೋಕಕುಮಾರ ರಂಜೇರೆ** ಸಹ ಪ್ರಾಧ್ಯಾಪಕರು ಕನ್ನಡ ಭಾಷಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೧೬.೦೮.೨೦೧೨
ಸ್ಥಳ : ವಿದ್ಯಾರಣ್ಯ

**ನಾಗಣ್ಣ**
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

# ಅಧ್ಯಾಯ : ೧

## ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

### ಪೀಠಿಕೆ

ಈ ಇಪ್ಪತ್ತೊಂದನೆ ಶತಮಾನದ ಹೊಸ್ತಿಲಲಿ ನಿಂತು ಕನ್ನಡ ಭಾಷೆಯನ್ನು ಕುರಿತು ವಿವೇಚಿಸಿದಾಗ ಹಲವು ಆತಂಕದ ಮಧ್ಯ ಕನ್ನಡ ಭಾಷೆಯ ವೈವಿಧ್ಯತೆಯು ಕಾಣಿಸಿಕೊಳ್ಳುವುದು. ಹಾಗೆಯೇ ಆತಂಕಗಳನ್ನು ಎದುರಿಸುತ್ತಿರುವುದು ಗೋಚರಿಸದೆ ಇರಲಾರದು. ಈ ಭಾಷಿಕ ನೆಲೆಗಟ್ಟಿನ ಮೇಲೆ ನಿಂತು ಹಿಂತಿರುಗಿ ನೋಡಿದಾಗ ಕನ್ನಡ ಭಾಷೆಯ ತೊರೆಯು ಹರಿದು ಬಂದ ಜಾಡು ಸಹ ಕಾಣಿಸುತ್ತದೆ. ಭಾಷೆಯ ಈ ತೊರೆಯು ಹೇಗೇಗೋ ಹರಿದು, ನುಸುಳಿ ಚಲಿಸಿ ಬಂದಿರುವುದು ಕಾಣಬರುತ್ತದೆ. ಹಾಗೆ ಚಲಿಸಿದ ಭಾಷೆ ತನ್ನದೇ ಆದ ಒಂದು ಚರಿತ್ರೆಯನ್ನು ದಾಖಲು ಜಾಡನ್ನಾಗಿ ಪರಿವರ್ತಿಸುತ್ತದೆ. ಭಾಷೆ ಕೇವಲ ಭಾಷೆಯಾಗಿ ಮಾತ್ರ ಬದುಕುವುದಿಲ್ಲ ಅಥವಾ ಹಾಗೆ ಬದುಕಲು ಆಗದು. ಮಾನವನ ಒಟ್ಟು ವರ್ತನೆ, ಚಟುವಟಿಕೆ ವ್ಯಾಪಾರ - ವಹಿವಾಟು, ಸಂಸ್ಕೃತಿಯ ಮೊತ್ತವನ್ನು ಗರ್ಭೀಕರಿಸಿಕೊಂಡಿರುತ್ತದೆ. ಹಾಗೆಯೇ ಸಂಘಟನಾ, ಪ್ರಭಾವ, ದಾಳಿಕೋರತನಗಳನ್ನು ಸಹ ಕಾಲಾಂತರವೂ ಮಾನವನ ಹೆಜ್ಜೆ ಗುರುತಿಗೂ, ಹೆಜ್ಜೆಗೂ ಭಾಷೆ ಕಾರಣವಾಗಿರಲು ಸಾಧ್ಯ. ಮಾನವನ ಪರಿವರ್ತನೆ ಕಾಲದೊಂದಿಗೆ ಹೆಣೆದುಕೊಂಡ ಹಾಗೆ, ಭಾಷೆಯ ಮೇಲೆಯೂ ಅದರ ಪರಿಣಾಮ ಬೀರುತ್ತಿರುತ್ತದೆ ಅಥವಾ ಭಾಷೆ ಹಾಗೆ ವರ್ತಿಸುತ್ತದೆ. ಹೀಗೆ ಸ್ಪಂದಿಸುವ ಕಾರಣ ಭಾಷೆಯಲ್ಲಿ ಹಲವು ಆಯಾಮಗಳು ಪರಿವರ್ತನೆಗಳನ್ನು ವ್ಯತ್ಯಾಸಗಳನ್ನು ಯಾವುದೇ ಒಂದು ಭಾಷೆ ತನ್ನೊಳಗೆ ನಡೆಸಿಕೊಳ್ಳುವುದು. ಹೀಗೆ ಆಯಾ ಕಾಲದಲ್ಲಿ, ಆಯಾ ಕಾಲದ ಸ್ಪಂದನೆಯ ನಿಮಿತ್ತವಾಗಿ ಮಾಡಿಕೊಳ್ಳುವ ಬದಲಾವಣೆಗಳು ಚಾರಿತ್ರಿಕ ಒಡಲೊಳಗೆ ಸೇರಿಕೊಂಡು ಉಸಿರಾಡುತ್ತವೆ.

ಆಯಾ ಕಾಲದ ಭಾಷಾತಜ್ಞರು ಭಾಷೆಯಲ್ಲಾಗುವ ಪರಿಣಾಮಗಳನ್ನು ಗಮನಿಸಿ ಕಾರಣ ಸಮೇತ ಮಂಡಿಸಲು ಪ್ರಯತ್ನಿಸಿದ್ದಾರೆ. ಮತ್ತು ಆ ಕಾರ್ಯವು ಭಾಷೆಯ ಮುಂದುವರಿಕೆಯಂತೆ ನಿರಂತರವಾಗಿ ನಡೆದದ್ದೂ ಆಗಿದೆ. ಅಂದರೆ ಭಾಷೆಯನ್ನು ಕುರಿತು ಕಾಲಕಾಲಕ್ಕೆ ಅಥವಾ ಅನಂತರದಲ್ಲೋ ಅಧ್ಯಯನಗಳು

ನಡೆಯುವುದು ಇದೆ. ಹೀಗೆ ನಡೆದ ಅಧ್ಯಯನಗಳ ಚರಿತ್ರೆ ದೀರ್ಘವಾಗಿಯೇ ಇದೆ. ಕನ್ನಡ ಭಾಷೆ ಸುಮಾರು ಒಂದೂವರೆ ಸಾವಿರ ವರ್ಷಗಳ ಚಾರಿತ್ರಿಕ ದಾಖಲು ಚಹರೆಗಳನ್ನು ಹೊಂದಿದೆ. ಹಳಗನ್ನಡ, ನಡುಗನ್ನಡ, ಹೊಸಗನ್ನಡ, ಪ್ರಾದೇಶಿಕ, ಸಾಮಾಜಿಕ ವೈವಿಧ್ಯತೆ.. ಹೀಗೆ ಭಾಷೆಗೆ ಇರುವ ಆಯಾಮದಂತೆ ಭಾಷಾಧ್ಯಯನಕ್ಕೆ ಆಯಾಮಗಳು ಇಲ್ಲವೇ? ಇದ್ದರೆ ಅವು ಯಾವುವು? ಮತ್ತು ಕಾರಣಗಳೇನು? ಭಾಷಾಧ್ಯಯನ ತನ್ನೊಳಗೆ ರೂಪಿಸಿಕೊಂಡ ಎಳೆಗಳಾವುವು? ಅವುಗಳ ಹಿಂದಿನ ಮನಸ್ಸು ಎಂತಹದು? ಎಂಬುದನ್ನು ತಿಳಿದುಕೊಳ್ಳುವ ಅಗತ್ಯ ಕೂಡ ಇದೆ ಎಂದು ಭಾವಿಸುವೆ.

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಆಯಾ ಕಾಲದ ಅಧ್ಯಯನವು ಬಿಡಿ ಬಿಡಿ ಹೂವುಗಳಂತೆ ಮೇಲ್ನೋಟಕ್ಕೆ ಕಾಣಿಸಿದರೂ, ಅದೊಂದು ಆಂತರಿಕ ಹಾರದ ದಾರ ಅಥವಾ ತಂತು ಒಂದಕ್ಕೊಂದು ಸಂಬಂಧವನ್ನು ಹೆಣೆದಿರಲಿಕ್ಕುಂಟು. ಹಾಗೆ ಹೆಣೆದಿರಬಹುದಾದ ಬಗೆಯನ್ನು, ಕಾರಣವನ್ನು ಪರಿಶೀಲಿಸಿ ಕನ್ನಡ ಭಾಷಾ ಅಧ್ಯಯನದ ಚಾರಿತ್ರಿಕ ಚಹರೆಗಳು ಹೆಣೆದಿರುವ ಹೆಣಿಗೆಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಶೋಧಿಸಲಾಗುವುದು.

ಕನ್ನಡ ಭಾಷೆಯ ಚರಿತ್ರೆಯನ್ನು ಕಟ್ಟಿಕೊಳ್ಳುವ ಪ್ರಯತ್ನಗಳು ಸಾಕಷ್ಟು ನಡೆದಿವೆ. ಕನ್ನಡ ಸಾಹಿತ್ಯ ಚರಿತ್ರೆ, ಕನ್ನಡ ಭಾಷೆಯ ಚರಿತ್ರೆ ಸಂಕ್ಷಿಪ್ತವಾಗಿಯೋ, ಸಮಗ್ರವಾಗಿಯೋ ನಡೆದಿವೆ. ಹೀಗೆ ನಡೆದ ಅಧ್ಯಯನಗಳಲ್ಲಿ ಕನ್ನಡ ಭಾಷೆಯ ರಚನೆ ಮತ್ತು ಬಳಕೆಯ ಹಿನ್ನೆಲೆಯಲ್ಲಿ ಕೆಲವು ಅಧ್ಯಯನ ನಡೆದರೂ ಅದರ ಹಿಂದಿನ ಅನನ್ಯತೆ ಮತ್ತು ರಾಜಕೀಯವನ್ನು ಗುರುತಿಸುವ ಭಾಷಾಧ್ಯಯನದ ಈ ಬಗೆಯ ಅಧ್ಯಯನಗಳು ಈವರೆಗೆ ಕ್ರಮಬದ್ಧವಾಗಿ ಮತ್ತು ಸಮಗ್ರವಾಗಿ ನಡೆದಿಲ್ಲ.

ಜಾಗತೀಕರಣ ಮಾರುಕಟ್ಟೆಯ ಮಿದುಳಿನ ಇವತ್ತಿನ ಸನ್ನಿವೇಶದಲ್ಲಿ ಸಂವಹನದ ಸಾಮಾಜಿಕ ಅಧಿಕೃತ ಭಾಷೆಯಾಗಿ ಯಾವುದೋ ಒಂದು ಚಾಲ್ತಿಗೆ ಬರುತ್ತಿದ್ದರೆ, ಅಸಂಖ್ಯೆ ಭಾಷೆಗಳು ಸಾವಿನತ್ತ ಹೆಜ್ಜೆ ಹಾಕುತ್ತಿವೆ ಮತ್ತು ಕನ್ನಡದ ಸನ್ನಿವೇಶದಲ್ಲಿ ಶ್ರೀಮಂತವಾದ ಭಾರತೀಯ ಭಾಷೆಗಳಲ್ಲಿ ಒಂದು ಎನ್ನುತ್ತಿರುವಾಗ ಶಾಸ್ತ್ರೀಯ ಸ್ಥಾನಮಾನದ ಸಂಘರ್ಷದ ಕೂಗು, ಹಾಗೆ ಕನ್ನಡ ಭಾಷೆಯ ಲಿಪಿ ಮತ್ತು

ಮೌಖಿಕತೆಯ ನಡುವೆ ಕಂದರವನ್ನು ಪ್ರಸ್ತುತದಲ್ಲಿ ತೋರಿಸಿಕೊಡಲಾಗುತ್ತದೆ. ಇಂತಹ ಹಲವು ಸಮಸ್ಯೆಗಳಿಗೆ ಇರಬಹುದಾದ ಕಾರಣಗಳೇನು?

ಕನ್ನಡ ಭಾಷೆಯನ್ನು ಒಂದು ಅಧ್ಯಯನದ ವಸ್ತುವಾಗಿ ಆಯ್ದುಕೊಂಡು ಹಲವು ಶತಮಾನಗಳೇ ಕಳೆದಿವೆ. ಆದರೆ ಅದೊಂದು ಪ್ರತ್ಯೇಕ ಅಧ್ಯಯನದ ಶಿಸ್ತಾಗಿ ಕಳೆದ ಶತಮಾನದಿಂದ ಅಥವಾ ಒಂದು ಶತಮಾನವಾಗುತ್ತಿದೆಯೆಂದು ಕಾಣುತ್ತದೆ. ಕನ್ನಡ ಭಾಷೆಯ ಲಿಖಿತ ದಾಖಲೆ ಅಥವಾ ಲಿಪಿ ಕಾಣಿಸಿಕೊಳ್ಳೋದು ಕ್ರಿ. ಶ. ೪೫೦ ಅಥವಾ ಅದಕ್ಕೂ ಪೂರ್ವದಲ್ಲೂ ಅಲ್ಲೊಂದು ಇಲ್ಲೊಂದು ಶಬ್ದದಂತೆ. ಆದರೆ ಮೌಖಿಕವಾಗಿ ತೆಗೆದುಕೊಂಡರೆ ಅದರ ಪರಂಪರೆಯನ್ನು ಕ್ರಿ. ಪೂರ್ವಕ್ಕೂ ಹೋಗಬಹುದು. ಅದೊಂದು ಕೈಗೆ ಸಿಕ್ಕದ್ದು, ಕಣ್ಣಿಗೆ ಕಾಣದ್ದು. ಚಾಕ್ಷುಷರೂಪದ ಬರಹ ಮತ್ತು ಕನ್ನಡ ಭಾಷೆಯ ಚಿಂತನೆ ಕನ್ನಡ ನಾಡನ್ನು ಕಟ್ಟಿಕೊಳ್ಳುವ ಪ್ರಜ್ಞೆಯಿಂದಲೇ ಜನಿಸಿದ್ದು ಆಗಿದೆ ಎಂದು ಕಾಣುತ್ತದೆ. ಹತ್ತನೇ ಶತಮಾನ ಕನ್ನಡ ಭಾಷೆಯ ಸನ್ನಿವೇಶದಲ್ಲಿಯೂ ಮುಖ್ಯವಾಗುವಂತೆ ಅದೊಂದು ರಾಜಕೀಯ ದೃಷ್ಟಿಯಿಂದಲೂ ಮುಖ್ಯವೇ. ಅಥವಾ ರಾಜಮನೆತನಗಳು ನಡೆಸುವ ಆಳ್ವಿಕೆ, ಅಭಿಮಾನ, ಪ್ರೋತ್ಸಾಹ, ರಾಜಕೀಯದ ಸಹಜವಾದ ಗತ್ತು, ಇಂತಹ ಕೆಲ ಕಾರಣಗಳೂ ಆಳ್ವಿಕೆಯ ದೃಷ್ಟಿಯಿಂದ ಪ್ರಮುಖವಾಗಿರುವಂತೆ ಭಾಷೆಯ ಬಗೆಗೂ ಬೆಳಕು ಚೆಲ್ಲುತ್ತವೆ. ಹೀಗಾಗಿ ಕವಿರಾಜಮಾರ್ಗದಿಂದಲೇ ಭಾಷೆಯ ಕುರಿತ ಆಲೋಚನೆ ಕಾಣಬರುತ್ತದೆ. ಈಗಾಗಲೇ ಸ್ಪಷ್ಟಪಡಿಸಿದಂತೆ ಅದೊಂದು ಆಧುನಿಕ ಕಾಲಘಟ್ಟದ ಅಥವಾ ಪಾಶ್ಚಾತ್ಯ ಪ್ರಣೀತ ಅಧ್ಯಯನದ ಶಿಸ್ತಿನಂತೆ ಮೈಗೂಡಿಸಿಕೊಂಡು ಆರಂಭವಾದದ್ದಲ್ಲ. ಭಾರತೀಯ ಸನ್ನಿವೇಶದಲ್ಲಿ ಆರಂಭವಾದ ಹಲ ಬಗೆಗಳಿದ್ದವು. ವೇದ, ಉಪನಿಷತ್ತು, ನಾಟ್ಯಶಾಸ್ತ್ರ ಮುಂತಾದವುಗಳ ಒಡಲಿನಿಂದಲೇ ಭಾಷಿಕ ಎಳೆಗಳ ಕುರಿತು ಚಿಂತನೆ ಮೂಡಿದ್ದು. ಇದರ ಮುಂದುವರಿಕೆಯಾಗಿ ಅಷ್ಟಾಧ್ಯಾಯಿ ಬರೆದ ಪಾಣಿನಿ, ಲೌಕಿಕ ಸಂಸ್ಕೃತಕ್ಕಾಗಿ ಚಾಂದ್ರವ್ಯಾಕರಣ ಬರೆದ ಬೌದ್ಧ ಚಂದ್ರಗೋಮಿ ಮುಂತಾದವರು ಆರಂಭಿಸಿದ ಸಂಸ್ಕೃತ ಭಾಷೆಯ ಕುರಿತ ವ್ಯಾಕರಣಗಳು. ಅಲ್ಲದೆ ಪ್ರಾಕೃತ ವ್ಯಾಕರಣಗಳು, ವರರುಚಿಯ ಪ್ರಾಕೃತ ಪ್ರಣೀತ ವ್ಯಾಕರಣ, ಇದೇ ತೆರನಾಗಿ ಬೋಧಿಸುತ್ತ, ಕಜ್ಜಾಯನ, ಸಬ್ಬಗುಣಕರ, ಪಾಲಿ ವ್ಯಾಕರಣಗಳ ಪರಂಪರೆಯೂ ಇದೆ. ಸಂಸ್ಕೃತ ಭಾಷೆ ಇಂತಹದೊಂದು ವ್ಯಾಕರಣಾಧ್ಯಯನ ಒಂದು ಶಿಸ್ತಿನಂತೆ ಕಾರ್ಯ ನಿರ್ವಹಿಸಿರುವುದು ಮಾತ್ರವಲ್ಲ ಇತರೆ ಭಾರತೀಯ ಭಾಷೆಗಳ ಮೇಲೆಲ್ಲ ತನ್ನ ಪ್ರಭಾವವನ್ನು ಬೀರಿದೆ. ಈ ಪ್ರಭಾವಕ್ಕೆ ಇನ್ನೂ ಬೇರೆಯ ಕಾರಣಗಳೂ ಇಲ್ಲವೆಂದು ಹೇಳಲಾಗದು. ಅದೊಂದು ದೇವನಾಗರಿ ಭಾಷೆ, ಶ್ರೇಷ್ಠಭಾಷೆ, ಅತ್ಯಂತ ಪ್ರಾಚೀನ

ಭಾಷೆ. ಅಲ್ಲದೆ ಕನ್ನಡ ಭಾಷೆ ಸಂಸ್ಕೃತದಿಂದಲೇ ವಿಕೃತಗೊಂಡು ಬೆಳೆದದ್ದು ಎಂಬ ಅಪಕಲ್ಪನೆಯ ಪರಂಪರೆಯೂ ಇದೆ. ಅದೇನೆ ಇರಲಿ ಕನ್ನಡ ಭಾಷೆಯ ಮೇಲೆ ಸಂಸ್ಕೃತದ ಪ್ರಭಾವವಂತೂ ತಳ್ಳಿ ಹಾಕಲಾಗದು.

ಕನ್ನಡ ಭಾಷೆ ಮತ್ತು ಬರಹ ಕುರಿತು ಆರಂಭದಲ್ಲಿ ಆಲೋಚಿಸಿದವರಿಗೆ ಕಾಣಿಸಿಕೊಂಡ ದಾರಿದೀಪ ಸಂಸ್ಕೃತವೇ ಆಗಿತ್ತು. ಏಕೆಂದರೆ ಒಂದು ಭಾಷೆ ಮತ್ತೊಂದು ಭಾಷೆಯಿಂದ ಎಷ್ಟೇ ಭಿನ್ನವೆಂದು ಹೇಳಿದಾಗಲೂ ಲಿಪಿಯ ಅಥವಾ ದಾಖಲೆಯ ಪರಿಕರಗಳ ಮಾರ್ಗ ಪ್ರತ್ಯೇಕ ಹೊಸದು. ಉದಾಹರಣೆ ತುಳು ಭಾಷೆ ಲಿಪಿಯನ್ನು ಕಂಡುಕೊಳ್ಳುವುದು ಅಷ್ಟು ಸುಲಭವೇನು ಅಲ್ಲವೆಂಬುದಕ್ಕೆ ಸಾಕ್ಷಿ ಎಂಬಂತೆ ಈಗಲೂ ಅಸಾಧ್ಯವಾಗಿದೆ. ಮತ್ತು ಅದಾಗಲೇ ಅಂತಹದೊಂದು ಕಾರ್ಯವನ್ನು ಮಾಡಿದ್ದರ ಪ್ರಭಾವ ಇದ್ದಾಗ ತಪ್ಪಿಸಿಕೊಳ್ಳುವುದೂ ಸಹ ಅಷ್ಟೇ ಕಷ್ಟದ ದಾರಿಯೇ ಸರಿ. ಏಕೆಂದರೆ ಕನ್ನಡದ ಆರಂಭದ ಲಿಪಿಕಾರರಿಗೆ ಅಥವಾ ಕವಿಗಳಿಗೆ ಕನ್ನಡದಲ್ಲಿ ಬರೆಯುವುದಕ್ಕಿಂತ ಸಂಸ್ಕೃತದಲ್ಲಿ ಬರೆಯುವುದೊಂದು ಗೌರವದ ಹೆಮ್ಮೆಯ ಪ್ರಕಾರವಾಗಿತ್ತು. ಕನ್ನಡ ಭಾಷೆಯನ್ನು ಕುರಿತು ಸಹ ಸಂಸ್ಕೃತದಲ್ಲಿ ಬರೆದ ನಿದರ್ಶನಗಳು ಇಲ್ಲದಿಲ್ಲ.

ಹೀಗಾಗಿ ರಾಜರುಗಳ ಹಂಗು, ಭಾಷೆಯ ಅಭಿಮಾನ, ಅನ್ಯ ಭಾಷೆಯ ಪ್ರಭಾವ ಮುಂತಾದ ಕಾರಣಗಳ ಸನ್ನಿವೇಶದಲ್ಲಿ ಕನ್ನಡ ಭಾಷೆಯನ್ನು ಕುರಿತು ಬೆಳಕು ಚೆಲ್ಲಲು ಪ್ರಯತ್ನಿಸುತ್ತವೆ. ಅಲ್ಲದೆ ಕನ್ನಡದ ಪ್ರಾಚೀನ ಕವಿಗಳಿಗೆ ಕಾವ್ಯರಚನೆಗೆ ಹಲವು ಒತ್ತಡಗಳು ಇದ್ದವು ಎಂಬುದು ಈಗಾಗಲೇ ಸ್ಪಷ್ಟಗೊಂಡಿರುವ ವಿಚಾರ. ಧರ್ಮ, ರಾಜಕೀಯ ಮುಂತಾಗಿ ಪಂಪ ಕಾವ್ಯ ಬರೆಯುತ್ತಿದ್ದಾಗ ರಾಜ, ಧರ್ಮ, ಭಾಷೆಯ ಕುರಿತ ಚಿಂತನೆ ಇವು ಒಂದಕ್ಕೊಂದು ಬೆಸೆದುಕೊಂಡು ಬೆಳೆಯಬೇಕಾದದ್ದು ಅನಿವಾರ್ಯವಾಗಿತ್ತು. ಆಗ ಬಗಹದ ಕಷ್ಟ, ಓದುಗರ ಸಂಖ್ಯೆ ಅಥವಾ ಬಗೆ ಮುಂತಾಗಿ. ಹೀಗೆ ನಾವು ಕನ್ನಡ ಭಾಷೆಯನ್ನು ಕುರಿತ ಅಧ್ಯಯನಗಳ ಬಗ್ಗೆ ಆಲೋಚಿಸುವಾಗ ಕಾಲಘಟ್ಟ, ಕಾಲಘಟ್ಟದ ಒತ್ತಡಗಳು, ಅನಿವಾರ್ಯತೆಗಳು ಮುಂತಾದ ಸಾಂಸ್ಕೃತಿಕ ವಹಿವಾಟನ್ನು ಕುರಿತು ನಾವು ಯೋಚಿಸಲೇಬೇಕಾಗುತ್ತದೆ. ಒಂದು ಭಾಷೆಯ ಪರಿವರ್ತನೆ, ಬೆಳವಣಿಗೆ, ಮುಂತಾಗಿ ಏನೆಲ್ಲ ನಡೆಯಬಹುದೋ ಅದಕ್ಕೆಲ್ಲ ಕೇವಲ ಭಾಷಿಕರ ಒಳಗೆ ಕಾರಣಗಳು ಅಡಗಿರುವುದಿಲ್ಲ. ಅವು ಅನ್ಯ ಒತ್ತಡಗಳೇ ಬಲವಾದ ಕಾರ್ಯವನ್ನು ನಿರ್ವಹಿಸಿರುತ್ತವೆ ಎನ್ನುವುದರಲ್ಲಿ ಅನುಮಾನವಿಲ್ಲ ಮತ್ತು ಆರಂಭದಲ್ಲಿ ಲಿಂಗ್ವಿಸ್ಟಿಕ್ ಸೊಸೈಟಿ ಆಫ್ ಅಮೆರಿಕದಂತಹವುಗಳು ವಹಿಸಿದ ಅಧ್ಯಯನದ ಶಿಸ್ತನ್ನು ನಿರ್ಲಕ್ಷಿಸಲಾಗದು. ಅಥವಾ

ಹಾಗೆ ಅಂತಹದೊಂದು ಕನ್ನಡಕವನ್ನು ಧರಿಸಿ ಕನ್ನಡ ಭಾಷೆಯ ಪೂರ್ವದತ್ತ ನೋಡಿದರೆ ದಾರಿ ತಪ್ಪುವುದು ಖಚಿತ. ಹೀಗಾಗಿ ಕನ್ನಡ ಭಾಷಾಧ್ಯಯನದ ನೆಲೆಗಳನ್ನು ಗುರುತಿಸುವಾಗ ಇಂತಹದೊಂದು ಸೂಕ್ಷ್ಮತೆಯ ಮೂಲಕವೇ ನಾವು ಹಿಂತಿರುಗಿ ಕಾಣಬೇಕಾಗಿದೆ. ಮತ್ತು ಪ್ರಸ್ತುತದ ಸನ್ನಿವೇಶದ ನೆಲೆಯನ್ನು ಅರ್ಥಮಾಡಿಕೊಳ್ಳಬೇಕಿದೆ. ಇಂತಹ ಸನ್ನಿವೇಶದಲ್ಲಿ ಒಂದು ಸಿದ್ಧಮಾದರಿಯಲ್ಲಿ ಸಿದ್ಧಾಂತವೊಂದರ ಸವಾರಿ ಮಾಡಲಾಗದು. ೯, ೧೦ನೇ ಶತಮಾನದಲ್ಲಿ ಕಾವ್ಯದ ಒಳಗೆ ಕಾಣಿಸಿಕೊಂಡ ಭಾಷಿಕ ಚಿಂತನೆಗಳೂ ೨೦ನೇ ಶತಮಾನದ ಆರಂಭದಲ್ಲಿ ಸ್ವಾತಂತ್ರ್ಯದ ನಿಮಿತ್ತವಾಗಿ ಕಟ್ಟಿಕೊಳ್ಳುವ ಹಲವು ಮಗ್ಗಲುಗಳನ್ನು ಕಾಣಬಹುದಾಗಿದೆ. ಸ್ವಾತಂತ್ರ್ಯದ ಪ್ರಜ್ಞೆಯಲ್ಲಿ ಕಾಣಿಸಿಕೊಂಡ ಈ ಭಾಷಿಕ ಚಿಂತನೆ ಸ್ವಾಭಿಮಾನ, ಅಭಿಮಾನ, ಚರಿತ್ರೆಯನ್ನು ಕಟ್ಟಿಕೊಳ್ಳುವ ಕಾತರ ಮುಂತಾದವು. ಏಕೀಕರಣದ ಅಂಗವಾಗಿಯೇ ನಡೆದ ಪಾಡು ಹತ್ತು ಹಲವು ಬಗೆಯಲ್ಲಿ ಆಲೋಚಿಸುವ, ಕಟ್ಟಿಕೊಳ್ಳುವ ಬಗೆಗಳು ತುರ್ತಾಗಿ ನಡೆಯುತ್ತವೆ. ಅಂತಹ ಕಾರ್ಯದಲ್ಲಿ ಭಾಷೆಯನ್ನು ಕುರಿತದ್ದು ಸಹ ಆಗಿದೆ. ಹಾಗೆ ನಡೆದಾಗಲೂ ಪ್ರಾಚೀನತೆಯನ್ನು ಕುರಿತ ಆಲೋಚನೆ ಮತ್ತು ಅಧ್ಯಯನಗಳೂ ನಡೆದವು. ಹಿಂದಿನ ಕಾವ್ಯಗಳನ್ನು ಒಟ್ಟುಗೂಡಿಸುವ ಮತ್ತು ಸಾಧ್ಯವಾದಷ್ಟು ಅವುಗಳನ್ನು ವಿಶ್ಲೇಷಿಸುವ, ವಿತರಿಸುವ ಮೂಲಕ ಒಂದು ಚರಿತ್ರೆಯನ್ನು ಕಟ್ಟಿಕೊಳ್ಳುವುದು, ಆ ಮೂಲಕ ಚಳುವಳಿಗೆ ಶಕ್ತಿಯಾಗಿ ಮಾರ್ಪಡಿಸುವುದು ಮೂಲ ಉದ್ದೇಶ ಆಗಿತ್ತು.

ಸ್ವಾತಂತ್ರ್ಯ ನಂತರ ಮತ್ತು ಏಕೀಕರಣೋತ್ತರ ಸನ್ನಿವೇಶದಲ್ಲಿ ಇದು ಮುಂದುವರೆದರೂ ಪ್ರಾಚೀನತೆಯನ್ನು ಕುರಿತ, ಕೃತಿಗಳನ್ನು ಆಧರಿಸಿ ಭಾಷೆ ಹೀಗೆ ಇತ್ತು ಎಂದು ಒಂದು ನಾಡಿನ ಚರಿತ್ರೆಯನ್ನು ಹೇಳುವ ಬಗೆಯಲ್ಲಿ ಸಹಜವಾಗಿಯೇ ಸಾಗಿತು. ಅಷ್ಟೊತ್ತಿಗಾಗಲೇ ಪಾಶ್ಚಾತ್ಯತೆ, ಶಿಕ್ಷಣ, ಸಿದ್ಧಾಂತಗಳ ಪ್ರಭಾವ ಇದ್ದರೂ ಅವುಗಳನ್ನು ಸಂಪೂರ್ಣವಾಗಿ ಬಳಸಿಕೊಳ್ಳದೆ ಅಥವಾ ನಿರ್ಲಕ್ಷಿಸಲಾಗದೆ ಭಾಷೆಯನ್ನು ಕುರಿತು ಪ್ರತ್ಯೇಕ ಶಾಖೆಯಾಗಿ ಅಧ್ಯಯನ ಮಾಡಲಾಗದ ದ್ವಂದ್ವದಲ್ಲೇ ಇತ್ತು ಎಂದು ಕಾಣುತ್ತದೆ. ಆದರೆ ಅದುವರೆಗೆ ಲಭ್ಯವಿದ್ದ ಆಕರ ಸಾಮಾಗ್ರಿಗಳನ್ನು ಪ್ರಶ್ನಿಸದೆ ಹೀಗೆ ಇದೆ ಎಂದು ಕಾಣಲಾಯಿತು. ಆ ಮೂಲಕ ಪ್ರಾಚೀನತೆಯನ್ನು ಮತ್ತು ಪ್ರಸ್ತುತ ಭಾಷೆಯ ವೈವಿಧ್ಯತೆಯನ್ನು ಕಾಣುವುದು ಮಾತ್ರವಾದಂತಿದೆ. ಒಂದು ಭಾಷೆಯ ಪ್ರಾಚೀನತೆಯನ್ನು ಕಟ್ಟಿಕೊಳ್ಳುವವರಿಗೆ ಕೇವಲ ಲಿಖಿತ ಚಾರಿತ್ರಿಕ ದಾಖಲೆಗಳು ಮಾತ್ರ ಸಾಕ್ಷಿಗಳಾಗಿ ನಿಂತು ಅವುಗಳು ತೋರುವ ದಿಕ್ಕಿನಲ್ಲಿ ಅಥವಾ ಆಯಾಮದಲ್ಲಿ ಚಲನೆಯನ್ನು ಆಯ್ದುಕೊಳ್ಳುವ ಅನಿವಾರ್ಯತೆ ಏರ್ಪಡುತ್ತದೆ. ಅಲ್ಲದೆ ವ್ಯಾಕರಣ

ಪರಂಪರೆಯೊಂದು ಸಹ ಜೊತೆಯಾಗಿ ಹೆಜ್ಜೆ ಹಾಕಿದ್ದೂ ಇದೆ. ಅದರಲ್ಲಿ ಮುಖ್ಯವಾಗಿ ಕರ್ನಾಟಕ ಭಾಷಾಭೂಷಣ, ಕಾವ್ಯಾವಲೋಕನ, ಶಬ್ದಮಣಿದರ್ಪಣ, ಕರ್ನಾಟಕ ಶಬ್ದಾನುಶಾಸನ ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದಾಗಿದೆ. ಆದರೆ ಇವುಗಳು ಭಾಷೆಯ ಪ್ರಭಾವದ ಬಗ್ಗೆ ಹೇಳಿದಂತೆ ಇವುಗಳೂ ಸಹ ಸಂಸ್ಕೃತದ ನೆರಳಿನಲ್ಲಿ ಅರಳಿದವುಗಳಾಗಿವೆ. ವ್ಯಾಕರಣ ಬಗೆಯನ್ನು ಮತ್ತು ಹೀಗೆ ಬರೆಯುವ ಮನಸ್ಥಿತಿಯನ್ನು ರೂಪಿಸಿದ್ದು ಪ್ರಾಯಶಃ ಸಂಸ್ಕೃತವೇ ಆಗಿದೆ. ಹೀಗಾಗಿ ಇವುಗಳ ಮಿದುಳು ಸಂಸ್ಕೃತವೇ ಆಗಿದೆ. ಆದರೆ ಕನ್ನಡ ಭಾಷೆಯನ್ನು ಕುರಿತು ಆಲೋಚಿಸಲು ಯತ್ನಿಸುತ್ತವೆ. ಆದರೆ ಅದು ಅತ್ಯಲ್ಪ. ನಮ್ಮಲ್ಲಿ ಒಂದು ವಿಚಿತ್ರವಾದ ಅಖಂಡತೆಯ ಕಲ್ಪನೆ ಅಘೋಷಿತವಾಗಿ, ಕಡ್ಡಾಯವೆಂಬಂತೆ ಇದೆ. ಅದು ಕಾವ್ಯದ ಸನ್ನಿವೇಶದಲ್ಲೂ ಸಹ ಈ ಮಾತು ಸತ್ಯವೇ. ಭಾರತೀಯ ಕಾವ್ಯಮೀಮಾಂಸೆ ಎಂದಾಗ ಕನ್ನಡವೂ ಅದರ ಒಳಗೆ ಅಡಕವಾಗಿರುತ್ತದೆ ಎಂದೇ ತಿಳಿಯುವುದು. ಪ್ರತ್ಯೇಕವಾದ ಪ್ರಜ್ಞೆಯ ಬಗ್ಗೆ ತಿಳಿಯುವ ಪ್ರಯತ್ನವನ್ನು ಅಷ್ಟಾಗಿ ಸೃಷ್ಟಿಸುವುದಿಲ್ಲ ಅಥವಾ ಅಂತಹದೊಂದು ಯೋಚನೆ ಮಾಡುವುದು ತಪ್ಪು ಎಂಬಂತೆ ವಾತಾವರಣವನ್ನು ನಿರ್ಮಾಣಮಾಡಲ್ಪಟ್ಟಿದೆ.

ಹೀಗಾಗಿ ಕನ್ನಡ ಭಾಷೆಯ ಕುರಿತು ವ್ಯಾಕರಣ ನಿಯಮಗಳನ್ನು ಕಾಣುವಾಗ ಈಗಾಗಲೇ ರಚಿಸಲ್ಪಟ್ಟ ಸಂಸ್ಕೃತ ನಿಯಮಗಳಿಗಿಂತ ಅಷ್ಟೇನು ಭಿನ್ನವಲ್ಲ ಎಂಬ ಅರಿವು ಇದೆ. ಈ ಅರಿವು ಈಗಲೂ ಹಲವರಲ್ಲಿ ಇದ್ದೇ ಇದೆ. ಕನ್ನಡ ವರ್ಣಮಾಲೆಯ 'ಋ' ವಿಚಾರ ಬಂದಾಗ ಎದ್ದ ಅಲೆಗಳೇ ಇದಕ್ಕೊಂದು ದೊಡ್ಡ ಸಾಕ್ಷಿ. ಹೀಗಾಗಿ ಕನ್ನಡದ ಅಸ್ಮಿತೆಯನ್ನು ಕಾಣುವಲ್ಲಿ ಇನ್ನೂ ಸೋಲುತ್ತಿದ್ದೇವೆಂದು ಕಾಣುತ್ತದೆ. ಅಲ್ಲದೆ ಶಬ್ದಮಣಿದರ್ಪಣದಂತಹ ವ್ಯಾಕರಣಗಳು ಕನ್ನಡ ವೈಶಿಷ್ಟ್ಯತೆಯನ್ನು ಹೇಳಲೆತ್ನಿಸಿದರೂ ಅದರ ಸತ್ಯಾಸತ್ಯೆಯನ್ನು ಅಥವಾ ಹಾಗೆ ಇರಲು ಕಾರಣವೇನು? ಮುಂತಾದ ಪ್ರಶ್ನೆಗಳ ಗೊಡವೆಗೆ ಹೋಗಿಲ್ಲ. ಹೀಗೆ ಹೇಳಿದಾಗಲೂ ಸಹ ಅಂದರೆ ಕನ್ನಡ ಭಾಷೆಯ ವೈಶಿಷ್ಟ್ಯವನ್ನು ಕುರಿತು ಹೇಳಿದಾಗಲೂ, ಒಂದು ಭಾಷೆ ಕಾಲಾಂತರದ ಸ್ಥಿತಿಯಿಂದಾಗಿ ತನ್ನ ಒಡಲಿನಿಂದಲೇ ಇನ್ನೊಂದು ಭಾಷಾ ರೂಪವನ್ನು ಬಿಟ್ಟುಕೊಡುತ್ತದೆಂದೂ ಅದು ಕಾಲಾನುಕ್ರಮಣಿಕೆಯಲ್ಲಿ ಒಂದು ಭಾಷೆಯ ಚರಿತ್ರೆ ನಿರ್ಮಾಣವಾಗುತ್ತೆಂದೂ ಬಲವಾಗಿ ನಂಬಿರುವುದಾಗಿದೆ. ಹಾಗಾಗಿ ಭಿನ್ನತೆಗಳು ಸಹ ಅಂತಹದೊಂದು ಹ್ಯಾಂಗರ್‌ನಲ್ಲೇ ಇವೆ. ಪ್ರಾಚೀನತೆಯ ಕಲ್ಪನೆಯೂ ಚರಿತ್ರೆಯ ಕಲ್ಪನೆಯೊಡನೆ ಹೆಣೆದುಕೊಂಡಿರುತ್ತದೆ. ಕಾಲದ ಆಧಾರದಲ್ಲಿ ಕವಿಗಳನ್ನು ನೆಚ್ಚಿಕೊಂಡು, ಧರ್ಮವನ್ನು ಅವಲಂಬಿಸಿ ಘಟ್ಟಗಳನ್ನು ಅಥವಾ ಪೂರ್ವದ

ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡವೆಂದು ಅಧ್ಯಯನದ ಅನುಕೂಲತೆಯ ಒಂದು ಬಾಲಿಶರೂಪವನ್ನು ಕೊಡಲಾಗಿದ್ದೂ ಇದೆ. ಈ ಎಲ್ಲಾ ವಿಶ್ವಾಸರ್ಹತೆಯಲ್ಲೇ ಮುಂದುವರೆದಿದ್ದಾರೆ. ಆದರೆ ಅಂತಹ ವಿಭಜನೆಯನ್ನು ಖಚಿತವಾಗಿ ಹೇಳಲಾಗದು. ಏಕೆಂದರೆ ಇವುಗಳ ನಂಬಿಕೆಯಾಗುವ ಖಚಿತವಾದ ವಿಭಜನಾ ರೇಖೆ ಇದೆಯೇ ಎಂಬುದು. ನಾವು ನಡುಗನ್ನಡವೆಂದು ಹೇಳುವ ಕಾಲಘಟ್ಟದಲ್ಲಿ ಹೊಸಗನ್ನಡ ಬಗೆಯ ಅಥವಾ ಹಳೆಗನ್ನಡ ಬರೆಹಗಳು ಬಂದಿಲ್ಲವೇ ಎಂಬ ಪ್ರಶ್ನೆಗೆ ಈ ಬಗೆಯ ಅಧ್ಯಯನಗಳು ಉತ್ತರ ಹೇಳುವಲ್ಲಿ ಸೋಲುತ್ತವೆ. ಏಕೆಂದರೆ ಈ ಎಲ್ಲಾ ಬಗೆಯ ಅಧ್ಯಯನಗಳು ಒಂದು ಹಾಸಿನಲ್ಲಿವೆ. ಎಂದರೆ ಇದು ಹೀಗಿದೆ ಎಂಬ ವಿವರಣೆ ಮಾತ್ರ. ಆದರೆ ಇದು ಏಕೆ ಹೀಗಿದೆ ಎಂಬ ಪ್ರಶ್ನೆ ನಮ್ಮ ಭಾಷೆಯ ಚರಿತ್ರೆಗೆ ಪ್ರಮುಖವೆನ್ನಿಸುವುದೇ ಇಲ್ಲ. ಉದಾಹರಣೆಗೆ ಹಳಗನ್ನಡದಲ್ಲಿ ಶಬ್ದಗಳು ಕ್, ಚ್ ಟ್, ತ್, ಪ್, ಪದ ಮತ್ತು ಸ್ ಇಂತಹ ವ್ಯಂಜನಗಳನ್ನು ಅಂತ್ಯದಲ್ಲಿ ಪಡೆಯದಿದ್ದರೂ ನ್, ಮ್, ಯ್, ರ್, ೞ್, ಳ್, ಮೊದಲಾದ ವ್ಯಂಜನಗಳನ್ನು ಕಡೆಯಲ್ಲಿ ಪಡೆಯುತ್ತಿದ್ದವು. (ನೇಸರ್, ಬಸಿರ್ ಮೊದಲಾದ ಪದಗಳಲ್ಲಿ ಕಾಣುವಂತೆ ರ್ ಕೂಡ ಕೆಲವೆಡೆ ಅಂತ್ಯ ವ್ಯಂಜನವಾಗಿರುತ್ತಿತ್ತು) ಆದರೆ ನಡುಗನ್ನಡದಲ್ಲಿ ಈ ವೈಲಕ್ಷಣ್ಯ ಮಾಯವಾಗಿ ಪ್ರತಿ ಶಬ್ದವೂ ಅಂತ್ಯದಲ್ಲಿ ಸ್ವರವನ್ನು ವಿಶೇಷವಾಗಿ 'ಉ' ಕಾರವನ್ನು ಪಡೆಯತೊಡಗಿತು. ಈ ಕೆಲವು ನಿದರ್ಶನಗಳನ್ನು ಹೋಲಿಸಿ ನೋಡಬಹುದು. ಕಣ್ - ಕಣ್ಣು, ಕಾಣ್ - ಕಾಣು, ಪೊನ್ - ಹೊನ್ನು, ಮೀನ್ - ಮೀನು, ಕಲ್ - ಕಲ್ಲು, ಕಾಲ್ - ಕಾಲು ಇತ್ಯಾದಿ. ಇಂತಹ ಬಗೆಯಲ್ಲಿ ಹಲವುಗಳನ್ನು ಮುಂದಿಡುತ್ತಲೇ ಇದೆ. ಭಾಷಿಕದೊಳಗೆ ನಡೆಯುವ ಇಂತಹ ಕೆಲವು ವೈಶಿಷ್ಟ್ಯತೆ ಕೊಡುವ ಉತ್ತರಗಳು ಭಾಷಿಕವಾದ ಉತ್ತರವನ್ನು ಕೊಡದೆ. ಸೌಲಭ್ಯಾಕಾಂಕ್ಷೆ ಎಂಬ ಸುಲಭದ ಉತ್ತರಗಳನ್ನು ನೀಡುತ್ತವೆ. ಇಂತಹ ಉತ್ತರಗಳನ್ನು ಭಾಷಾಶಾಸ್ತ್ರಜ್ಞರು, ವಿಶ್ವವಿದ್ಯಾಲಯದ ಭಾಷಾಶಾಸ್ತ್ರದ ಕೇಂದ್ರಗಳೂ ಅಂತಹದೇ ಪ್ರಯತ್ನದಲ್ಲಿ ಮುಂದುವರೆದಿವೆ. ಆದರೆ ಈ ಮಾತಿಗೆ ಅಪವಾದವಾಗಿ ಡಾ. ಡಿ. ಎನ್. ಶಂಕರಭಟ್, ಡಾ. ಕೆ. ವಿ. ನಾರಾಯಣ ಮತ್ತು ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ ವಿಭಾಗ ಕಾರ್ಯಪ್ರವೃತ್ತವಾಗಿದ್ದು ಇದೆ. ಡಾ. ಡಿ. ಎನ್. ಶಂಕರಭಟ್ ಸೇರಿದಂತೆ ಈ ಅಧ್ಯಯನಕಾರರು ಭಾಷಾಧ್ಯಯನ ವಲಯವನ್ನು ಹಲವು ಆಯಾಮಗಳಲ್ಲಿ ನೋಡಿದ್ದು ಮಾತ್ರವಲ್ಲ ಬಹಳ ಮುಖ್ಯವಾಗಿ ಲಿಖಿತ ದಾಖಲೆಗಳನ್ನು ಮಾತ್ರ ಅವಲಂಬಿಸದೆ ಮೌಖಿಕ ಅಥವಾ ಆಡು ರೂಪಗಳನ್ನು ಕೂಡ ಪರಿಗಣಿಸಬೇಕೆಂದೂ, ಅವುಗಳ ವೈವಿಧ್ಯತೆಗೆ ಇರುವ ಕಾರಣಗಳನ್ನು ಪ್ರಶ್ನಿಸಿಕೊಂಡು

ಇರುವ ತೊಡಕುಗಳನ್ನು ಬಿಡಿಸಲು ಪ್ರಯತ್ನಿಸುತ್ತಾರೆ. ಪ್ರಸ್ತುತದಲ್ಲಿ ಕಾಣಬರುವ ಸಾಮಾಜಿಕ ಮತ್ತು ಪ್ರಾದೇಶಿಕ ಪ್ರಭೇದಗಳನ್ನು ಗುರುತಿಸಿ ಅವುಗಳು ಹುಟ್ಟಿಕೊಂಡಿರಬಹುದಾದ ಕಾಲದ ಒತ್ತಡ, ಸನ್ನಿವೇಶಗಳು, ಪ್ರಸ್ತುತದಲ್ಲಿ ಬಳಕೆಯಾಗುತ್ತಿರುವ ವೈವಿಧ್ಯತೆಗಳು, ಅವುಗಳಿಗೆ ಇರುವ ಕಾರಣ ಅಥವಾ ಹಾಗಾಗಲೂ ಪ್ರಸ್ತುತತೆಯ ಸನ್ನಿವೇಶ ಮಾತ್ರ ಕಾರಣವಲ್ಲ ಎಂಬುದು. ಅಲ್ಲದೆ ಆ ಪ್ರಭೇದಗಳ ಒಳಗೆ ಕನ್ನಡ ತನ್ನದೇ ಆದ ಲಕ್ಷಣಗಳನ್ನು ಹೊಂದಿರುತ್ತದೆ. ಅವುಗಳನ್ನು ಸಮಕಾಲೀನ ಸನ್ನಿವೇಶದಲ್ಲಿ ವಿಶ್ಲೇಷಿಸುತ್ತ ಚಾರಿತ್ರಿಕ ಆಯಾಮಗಳನ್ನು ಅಥವಾ ಪದರುಗಳನ್ನು ತೆಗೆಯುವ ಕೆಲಸವನ್ನು ಮಾಡಲಾಗುತ್ತದೆ. ಸ್ಪಷ್ಟವಾಗಿ ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಸೇರಿದಂತೆ ಹಲವು ನಿದರ್ಶನಗಳಾಗಿ ನೋಡಬಹುದಾಗಿದೆ. ಭಾಷಾವಂಶ, ಚಾರಿತ್ರಿಕತೆ ಮುಂತಾದವನ್ನು ಹೊಸ ಬಗೆಯಲ್ಲಿ ಸ್ಪಷ್ಟವಾಗಿ ಕಟ್ಟಲು ಯತ್ನಿಸುತ್ತವೆ.

ಡಾ. ಡಿ. ಎನ್. ಶಂಕರಭಟ್ ಅವರ 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ'ಯನ್ನು ಕುರಿತು ಈ ರೀತಿಯಾಗಿ ಡಾ. ಕೆ. ವಿ. ನಾರಾಯಣ ಅವರು ವಿವರಿಸುತ್ತಾರೆ. "ಈ ವರೆಗೆ ಕನ್ನಡ ಭಾಷೆ ಮೊದಲು ಉತ್ತರ ಮತ್ತು ದಕ್ಷಿಣ ಪ್ರದೇಶಗಳ ಪ್ರಭೇದವಾಗಿ ವಿಭಜನೆಗೊಂಡಿತ್ತು ಎಂದು ನಿರೂಪಿಸುತ್ತ ಬಂದಿದ್ದೇವೆ. ಕವಿರಾಜಮಾರ್ಗಕಾರನ ದಕ್ಷಿಣೋತ್ತರ ಮಾರ್ಗಗಳ ಚಿಂತನೆಯನ್ನು ಒಪ್ಪಿಕೊಂಡಿದ್ದೇವೆ. ಈಗಲೂ ಈ ವಿಭಜನೆ ಧ್ವನಿರಚನೆ ಮತ್ತು ಪದಕೋಶಗಳ ನೆಲೆಯಲ್ಲಿ ಕೋರಿಕೆಗೆ ಸರಿ ಎಂದು ಅನಿಸುತ್ತದೆ. ನಡುವೆ ಹರಿಯುವ ತುಂಗಭದ್ರ ನದಿಯು ಗಡಿಗೆರೆಯಾಗಿ ಕನ್ನಡದ ಎರಡು ಪ್ರಭೇದಗಳು ಮೈದಳೆದಿರುವುದನ್ನು ಒಪ್ಪಿದ್ದೇವೆ. ಆದರೆ ಈ ವಿಭಜನೆ ಆಗುವ ಮೊದಲೇ ಕನ್ನಡ ಪೂರ್ವ ಪಶ್ಚಿಮ ಪ್ರಭೇದವಾಗಿ ವಿಭಜನೆಗೊಂಡಿದೆ ಎಂಬ ಸಾಧ್ಯತೆಯನ್ನು ಡಾ. ಭಟ್ ಮುಂದಿಡುತ್ತಾರೆ. ಕನ್ನಡದ ಅತೀ ಪ್ರಾಚೀನ ಧ್ವನಿ ರೂಪಗಳು, ಪದರೂಪಗಳು ಕರಾವಳಿಯ ಇಂದಿನ ಕೆಲವು ಪ್ರಭೇದಗಳಲ್ಲಿ ಉಳಿದಿರುವುದನ್ನು ಅವರು ಗುರುತಿಸುತ್ತಾರೆ. ಈ ಮೂಲಕ ಕನ್ನಡ ಭಾಷೆಯ ಚರಿತ್ರೆಯ ಇನ್ನೊಂದು ಘಟ್ಟವನ್ನು ಅವರು ನಿರೂಪಿಸಿದ್ದಾರೆ.

ಭಟ್ ಅವರ ಈ ಚರಿತ್ರೆ ಒಂದು ಕಲ್ಪಿತ ಚರಿತ್ರೆ. ಏಕೆಂದರೆ ಭಾಷಾ ಚರಿತ್ರೆಯನ್ನು ನಾವು ಪುನರ್ ರಚಿಸುತ್ತೇವೆ. ಹೀಗೆ ಆಗಿದೆ ಎಂದು ಹೇಳಲು ನಮ್ಮಲ್ಲಿ ಆಧಾರಗಳಿಲ್ಲ. ಹೀಗೆ ಆಗಿರಲು ಸಾಧ್ಯ ಎಂದು ನಾವು ಊಹಿಸುತ್ತೇವೆ. ಆದ್ದರಿಂದ ಇದು ರಚಿತ ಮತ್ತು ಕಲ್ಪಿತ. ಡಾ. ಭಟ್ ಅವರು ಕನ್ನಡ ಭಾಷಾ ಚರಿತ್ರೆಯ

ಅಧ್ಯಯನಕ್ಕೆ ಈ ದೃಷ್ಟಿಯಿಂದ ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ಹೊಸ ರೂಪವನ್ನು ನೀಡಿದ್ದಾರೆ ಎಂದು ಡಾ. ಕೆ. ವಿ. ನಾರಾಯಣ ಅವರು ಗುರುತಿಸುತ್ತಾರೆ.

ಭಾಷಾಶಾಸ್ತ್ರ ಕುರಿತು ಪಾಶ್ಚಾತ್ಯ ಚಿಂತನೆಗಳು ತರಬೇತಿಗಳು ಸಾಕಷ್ಟು ನಡೆದದ್ದು ಮತ್ತು ಕೆಲವು ಕನ್ನಡ ವಿದ್ವಾಂಸರು ಭಾಗವಹಿಸಿ ತರಬೇತಿಯನ್ನು ಪಡೆದರು. ೧೯೫೭ರಲ್ಲಿ 'ಲಿಂಗ್ವಿಸ್ಟಿಕ್ ಸೊಸೈಟಿ ಆಫ್ ಅಮೆರಿಕ' ಇವರು ನಡೆಸಿದ ಭಾಷಾಶಾಸ್ತ್ರದ ಬೇಸಿಗೆ ಶಾಲೆಯಲ್ಲಿ ಕೆಲವು ಕನ್ನಡ ವಿದ್ವಾಂಸರು ಭಾಗವಹಿಸಿ ತರಬೇತಿಯನ್ನು ಪಡೆದರು. ೧೯೫೭ರಲ್ಲಿ ಲಿಂಗ್ವಿಸ್ಟಿಕ್ ಸೊಸೈಟಿ ಆಫ್ ಅಮೆರಿಕ ಇವರು ನಡೆಸಿದ ಭಾಷಾಶಾಸ್ತ್ರದ ಬೇಸಿಗೆ ಶಾಲೆಯ ತರಗತಿ ಮತ್ತು ತರಬೇತಿಯು ಸಾಕಷ್ಟು ಪ್ರಭಾವವನ್ನು ಬೀರಿತು. 'ಭಾಷಾವಿಜ್ಞಾನದ ಮೂಲತತ್ವಗಳು' ಪುಸ್ತಕವನ್ನು ಬರೆಯಲು ಚಿದಾನಂದಮೂರ್ತಿ ಅವರಿಗೆ ಇಂತಹದೊಂದು ತರಬೇತಿ ಕಾರಣವಾಯಿತೆಂದು ಅವರೇ ಹೇಳುತ್ತಾರೆ. ಹಾಗೇನೆ ಡಾ. ಡಿ. ಎನ್. ಶಂಕರ ಭಟ್ ಅವರು ಸಹ ಇಂತಹ ಶಾಲೆಯ ಬೇಸಿಗೆ ತರಗತಿಗಳಿಗೆ ಹೋದವರೇ. ಇವು ಪಾಶ್ಚಾತ್ಯರು ಭಾಷಾಧ್ಯಯನ ಕುರಿತು ನಡೆಸಿದ ಅಧ್ಯಯನಗಳು, ಸಿದ್ಧಾಂತಗಳು, ಸಾಧ್ಯತೆಗಳು ಕುರಿತವುಗಳಾಗಿರುವ ಮಾದರಿಗಳಾಗಿರುವುದರಿಂದ ಅವುಗಳ ಮೂಲಕ ಕನ್ನಡ ಭಾಷೆಯನ್ನು ಕುರಿತು ಆಲೋಚಿಸಲು ಹೊಸಬಗೆಯ ಪ್ರೇರಣೆಯೂ ಆಗಿದ್ದುದು ಇದೆ. ಆಗ ಪ್ರಚಲಿತವಿದ್ದ ಭಾಷಾಶಾಸ್ತ್ರದ ಸಿದ್ಧಾಂತಗಳನ್ನು ಅನ್ವಯಿಸುವ ಪ್ರಯತ್ನಗಳನ್ನು ಮಾಡಿದರು. ಮುಖ್ಯವಾಗಿ ವರ್ಣನಾತ್ಮಕ ಭಾಷಾಶಾಸ್ತ್ರ ಚಾರಿತ್ರಿಕ ಭಾಷಾಶಾಸ್ತ್ರ ಮತ್ತು ತೌಲನಿಕ ಭಾಷಾಶಾಸ್ತ್ರದಲ್ಲಿ ಆಸಕ್ತಿ ತಳೆದುದು. ಅಲ್ಲದೆ ಅಂತಹ ಅಧ್ಯಯನಗಳು ಕಾಣಿಸಿಕೊಂಡವು. ವರ್ಣನಾತ್ಮಕ ಭಾಷಾಶಾಸ್ತ್ರವು ಮುಖ್ಯವಾಗಿ ಸಾಮಾಜಿಕ ಪ್ರಾದೇಶಿಕ, ಅಂದರೆ ಸಾಮಾಜಿಕ ಪ್ರಭೇದ ಮತ್ತು ಚಾರಿತ್ರಿಕ ಪ್ರಭೇದಗಳನ್ನು ಕುರಿತು ಆಸಕ್ತಿಗೊಂಡದ್ದು ಇದೆ. ಚಾರಿತ್ರಿಕ ಪ್ರಭೇದದ ಸನ್ನಿವೇಶದಲ್ಲಿ ಸಾಹಿತ್ಯಿಕ ಕೃತಿಗಳು ಮಾತ್ರ ಆಕರ ಸಾಮಗ್ರಿಗಳಾಗಿದ್ದವು.

ಕನ್ನಡವನ್ನು ಕುರಿತ ಅಧ್ಯಯನಗಳು ಪ್ರಸ್ತುತ ಮೂರು ದಿಕ್ಕಿನ ಧಾರೆಯನ್ನು ನೋಡಬಹುದಾಗಿದೆ. ಆಧುನಿಕ ತಾತ್ವಿಕತೆಯನ್ನು ಆಧರಿಸಿದ ಅಧ್ಯಯನಗಳು ಮತ್ತು ಪಾರಂಪರಿಕ ನೆಲೆಯ ಅಧ್ಯಯನಗಳು. ಇವೆರಡರ ಜೊತೆಯಲ್ಲಿ ಮತ್ತೊಂದು ನೆಲೆ ಕಾಣಿಸಿಕೊಂಡಿತು ಅದು 'ಕನ್ನಡಕ್ಕೆ ಕನ್ನಡದ್ದೆ ಆದ ಅಧ್ಯಯನ' ಮಾದರಿ.

ಪಾಶ್ಚಾತ್ಯದ ಭಾಷಾಧ್ಯಯನ ಸಿದ್ಧಾಂತ ಮಾದರಿಗಳ ಮೂಲಕ ಕನ್ನಡ ಭಾಷೆಯನ್ನು ಕುರಿತು ನಡೆದ' ಅಧ್ಯಯನಗಳು. ಇವು ಸಹಜವಾಗಿಯೇ

ಅಂತರಾಷ್ಟ್ರೀಯ ಮಟ್ಟದ ಮನ್ನಣೆಯನ್ನು ಪಡೆದಿರುವವುಗಳಾಗಿರುವುದರಿಂದ ಮತ್ತು ಈ ಅಧ್ಯಯನವನ್ನು ಆರಂಭಮಾಡಿದವರು ಪಾಶ್ಚಾತ್ಯರು, ಮಿಷನರಿಗಳು. ಅಲ್ಲದೆ ಈ ಅಧ್ಯಯನಗಳು ಬಹುಪಾಲು ಇಂಗ್ಲಿಷ್‌ನಲ್ಲೇ ರಚಿತವಾಗಿವೆ. ಈಗಾಗಿ ಇವುಗಳು ಕನ್ನಡಿಗರಿಗೆ ಅಷ್ಟಾಗಿ ಪರಿಚಿತವಾಗದೆ ಉಳಿದಿವೆ. ಎಂ. ಬಿ. ಎಮಿನೋ, ಟಿ. ಬರೋ, ಉಲ್‌ರೀಜ್, ಸಸೂರ್ ಬಿನ್, ಜಾನ್ ಗುಂಪರ್ಜ್ ಮುಂತಾದವರನ್ನು ಇಲ್ಲಿ ಹೆಸರಿಸಬಹುದಾಗಿದೆ. ಇವರು ಕನ್ನಡವನ್ನು ಆಕರವಾಗಿ ಬಳಸುವ ಅಂತರಾಷ್ಟ್ರೀಯ ನೆಲೆಯ ಈ ಅಧ್ಯಯನಗಳು ಕನ್ನಡದಾಚೆಗೆ ಉಳಿದವು. ಇವು ಕನ್ನಡವನ್ನು ಕೇವಲ ನಿದರ್ಶನವಾಗಿ ಪಡೆದವು. ಕನ್ನಡ ಭಾಷೆ ಮತ್ತು ಅಧ್ಯಯನ ಮಾದರಿಗಳ ಸಾಧ್ಯತೆಯ ಪರಿಚಯದ ವಿಚಾರದಲ್ಲಿ ಮುಖ್ಯವಾದವುಗಳಾಗಿವೆ ಎನ್ನುವುದರಲ್ಲಿ ಅನುಮಾನವಿಲ್ಲ. ಅಂದರೆ ಇಂತಹ ಅಧ್ಯಯನಗಳು ನೇರವಾಗಿ ಕನ್ನಡವನ್ನು ವಿಶ್ಲೇಷಿಸುವುದು ಆಗಿರುವುದಿಲ್ಲ. ಕನ್ನಡ ಭಾಷಾಧ್ಯಯನಕ್ಕೆ ಇವು ಖಚಿತತೆಯನ್ನು ನೀಡುವುದರಲ್ಲಿ ನೆರವಾಗಬಲ್ಲವು.

ಪಾರಂಪರಿಕ ನೆಲೆಯ ಅಧ್ಯಯನಗಳನ್ನು ಕುರಿತು ಈಗಾಗಲೆ ವಿವರಿಸಲಾಗಿದೆ. ಈ ಪಾರಂಪರಿಕ ನೆಲೆಯ ಅಧ್ಯಯನಗಳು ಹೊಸ ಪ್ರಶ್ನೆಗಳನ್ನು ಎದುರಿಸುವುದಿಲ್ಲ. ಹೊಸ ಚಿಂತನೆಗಳನ್ನು ಎದುರಿಸುವ ಗೊಡವೆಗೆ ಹೋಗದೆ ಮತ್ತು ಅಂತಹ ಭಿನ್ನ ಪ್ರಯತ್ನಗಳನ್ನು ಒಪ್ಪುವುದಿರಲಿ ಹಾಗೆ ಆಲೋಚಿಸುವುದೇ ಒಂದು ಅಪರಾಧವೆನ್ನುವಂತೆ ವರ್ತಿಸುತ್ತವೆ. ಇದಕ್ಕೆ ಈಗಾಗಲೇ ಹೇಳಿದ ನಿದರ್ಶನವನ್ನೇ ಮುಂದುವರಿಸುವುದಾದರೆ ಕನ್ನಡ ವರ್ಣಮಾಲೆಯ 'ಋ' ವಿಚಾರ. ಈ ಪಾರಂಪರಿಕ ಮಾದರಿಯ ಅಧ್ಯಯನಕಾರರು ಕನ್ನಡಕ್ಕೆ ಅಗತ್ಯವಿಲ್ಲದ ಈ 'ಋ' ವರ್ಣಮಾಲೆಯಿಂದ ಕೈ ಬಿಡುವ ವಿಚಾರಕ್ಕೆ ಉಗ್ರವಿರೋಧವನ್ನೇ ತೋರಿದರು. ಈ ಕುರಿತು ಡಾ. ಕೆ. ವಿ. ನಾರಾಯಣ ಅವರ ವಿವರಣೆಯನ್ನು ಗಮನಿಸಬಹುದಾಗಿದೆ.

"..... ಕನ್ನಡ ವರ್ಣಮಾಲೆಯಲ್ಲಿ ಸೇರಿಸಲಾದ 'ಋ' ಸ್ವರದ ಚಿಂತನೆಯನ್ನು ಕುರಿತಿದೆ. ಸಂಸ್ಕೃತರ ಈ ಚಿಹ್ನೆಯ ಅಗತ್ಯ ಉಂಟಾದುದಕ್ಕೆ ಕಾರಣವಿದೆ. 'ರ' ಕಾರವು ಒಂದು ವ್ಯಂಜನವಾದರೂ ಪ್ರಸಂಗವಶಾತ್ ಅದು ಅಕ್ಷರದ ರಚನೆಯ ಕೇಂದ್ರವಾದಾಗ ಅದಕ್ಕೆ ಸ್ವರ ಲಕ್ಷಣ ಬರುತ್ತದೆ. ಹೀಗಾಗಿ ವ್ಯಂಜನ ಮತ್ತು 'ಋ' ಸ್ವರ ಒಂದೇ ಧ್ವನಿಯ ಎರಡು ನಿಯೋಗಗಳನ್ನು ಪ್ರತಿನಿಧಿಸುತ್ತವೆ. ಕನ್ನಡದಲ್ಲಿ ಅಕ್ಷರ ರಚನೆಯ ಕೇಂದ್ರವಾಗಿ 'ರ' ಕಾರ ಬರುವುದು ಸಾಧ್ಯವಿಲ್ಲವಾದ್ದರಿಂದ ಅದು ಯಾವಾಗಲೂ 'ರ್' ಎಂಬ ವ್ಯಂಜನವನ್ನು ಮಾತ್ರ ಒಪ್ಪಿಕೊಳ್ಳುತ್ತದೆ. ಸಹಜವಾಗಿಯೇ ಕನ್ನಡ ಧ್ವನಿ ರಚನೆಯಾಗಿ 'ಋ' ಎಂಬ ಸ್ವರಕ್ಕೆ ಸ್ಥಾನವಿಲ್ಲ. ಈ ವಿಶ್ಲೇಷಣೆ ನೆಲೆಯನ್ನು ಪಾರಂಪರಿಕ

ವಿದ್ವಾಂಸರು ಎಷ್ಟು ಕಟುವಾಗಿ ಟೀಕಿಸಿದರೆಂದರೆ ತುಮಕೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಋ' ಕಾರವನ್ನು ಒಂದು ಲಿಪಿ ಚಿಹ್ನೆಯನ್ನಾಗಿ ಕನ್ನಡದಲ್ಲಿ ಉಳಿಸಿಕೊಳ್ಳಬೇಕು ಎಂಬ ನಿರ್ಣಯವನ್ನು ಮಾಡಲಾಯಿತು.'[೧] ಇದರಿಂದ ತಿಳಿದು ಬರುವುದೆಂದರೆ ಈ ಪಾರಂಪರಿಕ ಅಧ್ಯಯನ ಮಾದರಿಯ ಅಗತ್ಯವಿರುವ ಹೊಸಬಗೆಯ ಮಾದರಿಯನ್ನು ಅಳವಡಿಸಿಕೊಳ್ಳಲು ತಯಾರಿಲ್ಲ ಎಂಬುದು. ಈ ಪಾರಂಪರಿಕ ಮಾದರಿಯು ವ್ಯಾಕರಣ ರಚನೆಯಲ್ಲೂ ಮತ್ತು ಹೊರಗಿನಿಂದ ಬಂದ ಕ್ರಿಶ್ಚಿಯನ್ ಮಿಷನರಿಗಳು ೧೯ನೇ ಶತಮಾನದಲ್ಲಿ ತಮ್ಮ ಅಗತ್ಯಕ್ಕಾಗಿ ಕನ್ನಡವನ್ನು ಕುರಿತು ವ್ಯಾಕರಣವನ್ನು ರಚಿಸಲು ಪ್ರಯತ್ನಿಸಿದರು. ಈ ರಚನೆಯ ವ್ಯಾಕರಣ ಮೂಲಧಾತುವನ್ನು ಸಂಸ್ಕೃತದ ಹೂರಣವನ್ನೇ ಬಿಡಸಲಾಯಿತು. ಆದರೂ ಇವು ಕನ್ನಡ ಭಾಷೆಯ ವ್ಯಾಕರಣಗಳು. ಆದರೆ ಈ ಮಿಷನರಿಗಳು ಲ್ಯಾಟಿನ್ ಭಾಷೆಯ ನಿಯಮಗಳನ್ನು, ರಚನೆಯ ಬಲವಾದ ಪ್ರಭಾವ ಇದ್ದುದರಿಂದ ಕನ್ನಡದ ಸ್ವರೂಪವನ್ನು ಗುರುತಿಸುವಲ್ಲಿ ಅವು ಪ್ರಬಲವಾದ ಕೆಲಸ ಮಾಡಿವೆ ಎಂಬುದರಲ್ಲಿ ಅನುಮಾನವಿಲ್ಲ. ಇಂತೆಲ್ಲ ಕನ್ನಡದ ನೈಜ ವ್ಯಾಕರಣವಲ್ಲದ ವ್ಯಾಕರಣ ಪರಂಪರೆಯನ್ನು ಕಂಡ ವಸ್ತುಸ್ಥಿತಿಯ ಈ ಎರಡು ನೆಲೆಗಳನ್ನು ಚೆನ್ನಾಗಿ ಬಲ್ಲ ಡಾ. ಡಿ. ಎನ್. ಶಂಕರಭಟ್ ಅವರು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಮತ್ತು ಅಧ್ಯಯನದ ಶಿಸ್ತೊಂದನ್ನು ಕಂಡುಕೊಂಡರು. ಮಾತ್ರವಲ್ಲ ಈ ನೆಲೆಯಲ್ಲಿ ಮುಂದುವರಿದಿದ್ದಾರೆ. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ನಿಜಕ್ಕೂ ಹಳಗನ್ನಡ ವ್ಯಾಕರಣ ಎಂತಹದು? ಕನ್ನಡ ಬರಹವನ್ನು ಸರಿಪಡಿಸೋಣ, ಕನ್ನಡಕ್ಕೆ ಕನ್ನಡದ್ದೇ ಪದಗಳು, ಕನ್ನಡ ನುಡಿ ನಡೆದು ಬಂದ ದಾರಿ ಕನ್ನಡ ಸೊಲ್ಲರಿಮೆ – ೧, ೨, ಮಾತು ಮತ್ತು ಬರಹದ ನಡುವಿನ ಗೊಂದಲ. ಹೀಗೆ ಕನ್ನಡ ಭಾಷೆಯನ್ನು ಕನ್ನಡದ್ದೇ ದೃಷ್ಟಿಕೋನವನ್ನು ಸ್ಪಷ್ಟಪಡಿಸಿಕೊಂಡು ಹಿಂತಿರುಗಿ ನೋಡಿದ್ದು ಮಾತ್ರವಲ್ಲ. ಪ್ರಸ್ತುತ ಕನ್ನಡ ಭಾಷೆಯು ಎದುರಿಸುವ ಸವಾಲುಗಳು ಹಾಗೂ ಕನ್ನಡದ ಗತಿಯನ್ನು ಕುರಿತು ಒಂದು ಹೊಸಪ್ರಯತ್ನವನ್ನು ಮಾಡುತ್ತಾರೆ. ಇದಕ್ಕೆ ಸ್ಪಷ್ಟವಾಗಿ ಕಾಣುವ ಹೊಸ ಯತ್ನವಾಗಿ ಡಾ. ಕೆ. ವಿ. ನಾರಾಯಣ. ಮತ್ತು ಕನ್ನಡ ವಿಶ್ವವಿದ್ಯಾಲಯದ, ಭಾಷಾಧ್ಯಯನ ವಿಭಾಗದ ಕೆಲಸಗಳು ಕೂಡ ಇವೆ. ನಮ್ಮೊಡನೆ ನಮ್ಮ ನುಡಿ, ಕನ್ನಡ ಜಗತ್ತು : ಅರ್ಧಶತಮಾನ, ಭಾಷೆಯ ಸುತ್ತಮುತ್ತ, ಮತ್ತೆ ಭಾಷೆಯ ಸುತ್ತಮುತ್ತ, ಕನ್ನಡ ಆಡು ನುಡಿಯ ಸೊಲ್ಲರಿಮೆ–೧ ಶಾಲೆಗಳಲ್ಲಿ ಕನ್ನಡ ಭಾಷೆಯ ಕಲಿಕೆಯಲ್ಲಿ ಉಂಟಾಗುತ್ತಿರುವ ತೊಡಕುಗಳನ್ನು ತೋರಿಸುತ್ತಿರುವುದು, ನುಡಿನೋಟ, ಭಾಷೆ ಮತ್ತು ಶಿಕ್ಷಣ, ಭಾಷೆ ವಿಶ್ವಕೋಶ, ತೊಂಡುಮೇವು (ಒಂಬತ್ತು) ಸಂಪುಟಗಳು ಕನ್ನಡ

ಮತ್ತು ಜನತೆ... ಹೀಗೆ ವಿಶಾಲ ವ್ಯಾಪ್ತಿ ಮತ್ತು ಒಂದು ಭಾಷೆಯ ಮೂಲಭೂತ ಶಕ್ತಿಯನ್ನು ಕುರಿತು ಚಿಕಿತ್ಸಕ ದೃಷ್ಟಿಕೋನದಲ್ಲಿ ಭಾಷಾಧ್ಯಯನದ ನೆಲೆಯನ್ನು ಕಾಣತೊಡಗಿರುವುದನ್ನು ಸ್ಪಷ್ಟಪಡಿಸುತ್ತವೆ.

ಈವರೆಗಿನ ಅಧ್ಯಯನಗಳಲ್ಲಿ 'ಕನ್ನಡದ್ದೇ' ವ್ಯಾಕರಣ ಅಥವಾ ಭಾಷಾಧ್ಯಯನದ ಬದಲಾಗಿ ಪೂರ್ವ ನಿರ್ಧಾರಿತ ಸೂತ್ರಗಳ ಮೂಲಕವೇ ಚರ್ಚೆಗಳು ಸಾಗಿರುವುದನ್ನು ಗಮನಿಸಬಹುದಾಗಿದೆ. ಆದರೆ ಕನ್ನಡ ಭಾಷೆಯಿಂದಲೇ ಕಂಡುಕೊಳ್ಳುವ ಪ್ರಯತ್ನದ ಕಾರ್ಯದ ಬಗ್ಗೆ ಆರೋಗ್ಯಪೂರ್ಣ ಚರ್ಚೆ, ಒಮ್ಮತಗಳಿಲ್ಲದೆ ರಾಜಕಾರಣ ನಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ಆ ಎರಡು ಸ್ಥಿತಿಗಳನ್ನು ಒಂದು ತಟಸ್ಥ ನಿಲುವಿನಲ್ಲಿ ನಿಂತು ಕನ್ನಡ ವ್ಯಾಕರಣ ಮತ್ತು ಭಾಷಾಧ್ಯಯನದ ಬಗೆಗೆ ಒಂದು ನಿರ್ಣಯವನ್ನು ಮಂಡಿಸುವ ಪ್ರಯತ್ನಮಾಡದೆ ಒಂದು ಪರಿಕಲ್ಪನೆಯನ್ನು ವಿವರಿಸುವ ವಿಧಾನವನ್ನು ಹೊಂದಲಾಗಿದೆ.

ಕನ್ನಡ ಭಾಷೆಯ ತಾಳಿಕೆ ಬಾಳಿಕೆಯನ್ನು ಕುರಿತು ಮೇಲಿಂದ ಮೇಲೆ ಚರ್ಚೆಗಳಾಗುತ್ತಲೇ ಇವೆ. ಹಿಂದೆ ಸಂಸ್ಕೃತದ ಪ್ರಭಾವ ನಮಗೆ ಆತಂಕವನ್ನುಂಟುಮಾಡಿತ್ತು. ಆದರೆ ಮುಂದೆ ಸಂಸ್ಕೃತವೇ ಮೃತಾವಸ್ಥೆಗೆ ನಡೆದು, ತನ್ನ ಅಸ್ತಿತ್ವವನ್ನು ಈಗಲಾದರು ಕಂಡುಕೊಳ್ಳಬೇಕಿತ್ತು. ಆದರೆ ಇಂದು ಅದಕ್ಕಿಂತ ಪ್ರಭಲವಾದ ಆತಂಕ ಎದುರಾಗಿರುವುದು ಇಂಗ್ಲೀಷ್ ಭಾಷೆಯಿಂದ. ಈ ಆತಂಕ ಎಷ್ಟರಮಟ್ಟಿಗೆ ನಮಗೆ ಎದುರಾಗಿದೆ ಎಂದರೆ ಇಂದು ಕನ್ನಡದ ಅಸ್ತಿತ್ವದ ಬಗೆಗೆ ಕೆಲವರು ಅನುಮಾನ ವ್ಯಕ್ತಪಡಿಸುತ್ತಾರೆ. ಅನ್ಯ ಭಾಷೆಯ ಪ್ರಭಾವವನ್ನು ತಡೆದುಕೊಳ್ಳುವ ಸಮಸ್ಯೆಯುಂಟಾದಾಗ ಕನ್ನಡ ಭಾಷಾತಜ್ಞರು ಹೇಗೆ ಮುಖಾಮುಖಿಯಾಗುತ್ತಾರೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನವೂ ಮಾಡಲಾಗಿದೆ.

ಭಾಷೆಯನ್ನು ಕುರಿತ ಚಿಂತನೆಯು ಕವಿರಾಜಮಾರ್ಗಕಾರನಿಂದಲೇ ನಡೆದಿದೆ. ಅಂದರೆ ಸುಮಾರು ಒಂದು ಸಾವಿರ ವರ್ಷಗಳೇ ಸಂದಿವೆ. ಈ ಕಾಲಘಟ್ಟದಲ್ಲಿ ಕನ್ನಡ ಭಾಷೆಯನ್ನು ತಿಳಿಯುವ, ವಿಶ್ಲೇಷಿಸುವ, ಸಮಾಜವನ್ನು ಅರ್ಥೈಸುವ, ಸಂಸ್ಕೃತಿಯನ್ನು ನಿರ್ವಚಿಸುವ, ಚರಿತ್ರೆಯನ್ನು ಭಿನ್ನವಾಗಿ ಗ್ರಹಿಸುವ, ಅನೇಕ ಆಯಾಮಗಳಲ್ಲಿ ಹಲವು ಸ್ಥಿತ್ಯಂತರಗಳು ಸಂಭವಿಸಿವೆ. ಭಾರತೀಯ ಮತ್ತು ಜಾಗತಿಕ ಸನ್ನಿವೇಶದ ಭಾಷೆಯನ್ನು ಕುರಿತ ಚಿಂತನೆಗಳೂ ಅಗತ್ಯಕ್ಕಿಂತ ಹೆಚ್ಚೇ ಪ್ರಭಾವಿಸಿವೆ. ಇಂತಹ ಹಲವು ದಿಕ್ಕಿನ

ಬೆಳಕನ್ನು ಕನ್ನಡ ಭಾಷೆಯು ಪಡೆದುಕೊಂಡ ತಿಳುವಳಿಕೆಯ ಜಿಗಿತವನ್ನು ಶೋಧಿಸುವ ಅಗತ್ಯವಿದೆ. ಈ ಅಧ್ಯಯನ ಅಂತಹ ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡಿದೆ.

ಭಾರತೀಯವೆನ್ನಿಸಿಕೊಂಡ ಸಂಸ್ಕೃತ ಮತ್ತು ಪಶ್ಚಿಮದ ಪರಿಕಲ್ಪನೆಗಳು, ಸಿದ್ಧಾಂತಗಳು ಕನ್ನಡ ಭಾಷಾಧ್ಯಯನವನ್ನು ನಿರ್ದೇಶಿಸಿದವು. ಈ ಆಲೋಚನಾ ಕ್ರಮಗಳು ಕನ್ನಡ ಭಾಷಾಧ್ಯಯನವನ್ನು ಹಲವು ದಿಕ್ಕುಗಳಿಂದ ಪ್ರವೇಶಿಸಲು ಅನುವುಮಾಡಿಕೊಟ್ಟವು. ವರ್ಣನಾತ್ಮಕ, ತೌಲನಿಕ, ಚಾರಿತ್ರಿಕ ಮುಂತಾದ ಆಯಾಮಗಳ ಮೂಲಕವೂ ಕನ್ನಡ ಭಾಷೆಯನ್ನು ಪರಿಶೀಲಿಸಲಾಯಿತು. ಕನ್ನಡ ಭಾಷಾಧ್ಯಯನಕಾರರು ಹಲವು ಪರಿಕಲ್ಪನೆ, ಸಿದ್ಧಾಂತಗಳ ಜೊತೆ ಭಿನ್ನ ನೆಲೆಯಲ್ಲಿ ಮುಖಾಮುಖಿಯಾದರು. ಇಲ್ಲಿ ಅನ್ಯರ ಪ್ರಭಾವವಿರುವಂತೆಯೇ ಸ್ವಂತಿಕೆಯ ಹುಡುಕಾಟವೂ ಇದೆ.

ಭಾರತೀಯ ಭಾಷಾಧ್ಯಯನದ ಅಥವಾ ಸಂಸ್ಕೃತದ ನೆರಳಿನಲ್ಲಿಯೇ ಪೋಷಿಸಿದ ಕಂಡುಕೊಂಡ ಚಿಂತನೆಗಳು ಕನ್ನಡ ಭಾಷಾಧ್ಯಯನವನ್ನು ಈಗಲೂ ನಿರ್ದೇಶಿಸುತ್ತಿರುವಂತ್ತಿದೆ. ಈಗಾಗಲೇ ನಡೆದ ಕೆಲವು ಅಧ್ಯಯನಗಳು ಇದನ್ನು ಸ್ಪಷ್ಟಪಡಿಸಿವೆ. ಈ ಅಧ್ಯಾಯದಲ್ಲಿ ಇಂತಹ ಸಮಸ್ಯಗಳ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನೂ ಕಂಡುಕೊಳ್ಳುವುದು. ಇನ್ನಾದರು ಅದನ್ನು ಮೀರುವ ಮತ್ತು 'ಕನ್ನಡದ್ದೇ' ಮಾದರಿಯನ್ನು ಕಂಡುಕೊಳ್ಳುತ್ತಿರುವ ಅಧ್ಯಯನ, ಚಿಂತನೆಗಳನ್ನು ವೈಜ್ಞಾನಿಕವಾಗಿ ಕಂಡುಕೊಳ್ಳುವುದು.

ಒಂದು ಸ್ತರದ, ಒಂದು ವರ್ಗದ ಕನ್ನಡವನ್ನು ಆತ್ಯಂತಿಕವಾಗಿ ತೆಗೆದುಕೊಂಡು, ಇನ್ನುಳಿದ ಜಾತಿ, ಧರ್ಮ, ಪ್ರದೇಶ ಮುಂತಾದ ಆಯಾಮದ ಕನ್ನಡವನ್ನು ನಿರ್ಲಕ್ಷಿಸುವ ಮನಸ್ಥಿತಿಯ ಹಿಂದಿನ ದೃಷ್ಟಿಯನ್ನು ಸ್ಪಷ್ಟಪಡಿಸಿಕೊಳ್ಳುವುದು. ಇದರಿಂದ 'ಎಲ್ಲರ ಕನ್ನಡ' ಹೇಗೆ ಎಲ್ಲರನ್ನೂ ಒಳಗೊಳ್ಳುವ ವ್ಯಾಪಕವಾದ ಕನ್ನಡವನ್ನು ನಿರ್ಲಕ್ಷಿಸಲಾಗುತ್ತಿದೆ ಎಂಬುದನ್ನು ಶೋಧಿಸುವುದು. ಅಂದರೆ ಭಾಷೆಯೆಂದರೆ ನಮ್ಮ ಲಿಖಿತವಾದದ್ದು ಮಾತ್ರವೇ ಅಲ್ಲ. ಅದರೊಂದಿಗೆ ನಮ್ಮ ಸಾಮಾಜಿಕ ಸಾಂಸ್ಕೃತಿಕ ಮತ್ತು ಬದುಕಿನ ಬೌದ್ಧಿಕವಲಯಗಳನ್ನು ಸೇರಿದಂತೆ ಮೌಖಿಕವಾದ ಮಾತನ್ನು ಕುರಿತು ಚಿಂತಿಸುವ ಕುರಿತು ಪ್ರಾಧಾನ್ಯತೆ ಮತ್ತು ಆ ಕುರಿತು ಯೋಚಿಸದ ನಮ್ಮ ಅಧ್ಯಯನದ ಮಿತಿಗಳನ್ನು ಅಧ್ಯಯನದ ಪರಂಪರೆಯನ್ನು ಕಟ್ಟಿಕೊಳ್ಳುತ್ತಲೇ ಇಂತಹ ಸಮಸ್ಯಗಳನ್ನು ಎದುರಿಸುವುದು.

೧. ಕನ್ನಡ ಭಾಷಾಧ್ಯಯನವು ಪರಂಪರೆಯುದ್ದಕ್ಕೂ ತನ್ನ ಚಹರೆಗಳನ್ನು ರೂಪಿಸಿಕೊಳ್ಳುತ್ತ ಬೆಳೆದುಬಂದ ಬಗೆಯನ್ನು ಅರ್ಥಮಾಡಿಕೊಳ್ಳುವುದು.

೨. ಕನ್ನಡ ಭಾಷಾಧ್ಯಯನದ ಚಾರಿತ್ರಿಕತೆಯನ್ನು ಗುರುತಿಸುವ ಕೆಲಸ ಬಿಡಿ ಬಿಡಿಯಾಗಿ ಬೇರೆಯದೇ ಆದ ಆಯಾ ಕಾಲದ ತುರ್ತುಗಳ ನಿಮಿತ್ತವಾಗಿ, ಅಂದರೆ ಏಕೀಕರಣದಂತಹ ಸನ್ನಿವೇಶದಲ್ಲಿ ಕನ್ನಡ ಭಾಷೆಯ ಪ್ರಾಚೀನತೆ ಮತ್ತು ಸ್ವರೂಪವನ್ನು ತಿಳಿಸಲು ಮತ್ತು ತಿಳಿಯಲು ಪ್ರಯತ್ನಿಸಲಾಯಿತು. ಹಾಗೆಯೇ ಶಾಸ್ತ್ರೀಯ ಭಾಷೆ ಸ್ಥಾನ ಪಡೆಯಲೋಸುಗವಾಗಿ... ಇಂತಹ ಕೆಲವು ಕಾರಣಗಳ ನಿಮಿತ್ತವಾಗಿ ಕಂಡುಕೊಂಡದ್ದು ಇದೆ. ಆದರೆ ಕ್ರಮಬದ್ಧವಾದ ಮತ್ತು ಸಮಗ್ರ ಅಧ್ಯಯನ ನಡೆದಿಲ್ಲ. ಅಂತಹದೊಂದು ಕೊರತೆಯನ್ನು ನೀಗಿಸುವುದು ಈ ಅಧ್ಯಯನದ ಉದ್ದೇಶವಾಗಿರುವಂತೆಯೇ, ಈಗಾಗಲೆ ನಡೆದ ಅಧ್ಯಯನಗಳ ಹಿಂದಿನ ಚಿಂತನೆ ಪ್ರಭಾವವೆಂತಹದ್ದು ಎಂಬುದನ್ನು ಸಹ ಕಂಡುಕೊಳ್ಳುವುದೂ ಆಗಿದೆ.

೩. ಸಂಸ್ಕೃತ, ಪ್ರಾಕೃತ ಮತ್ತು ಪಾಶ್ಚಾತ್ಯ ಭಾಷಾಧ್ಯಯನದ ಮಾದರಿಗಳ ಸ್ವರೂಪ, ಅನುಕರಣೆ, ಪ್ರಭಾವ ಮತ್ತು ರಾಜಕಾರಣವನ್ನು ಕಂಡುಕೊಳ್ಳುವುದು.

೪. ಪರಂಪರೆಯುದ್ದಕ್ಕೂ ಅಧ್ಯಯನವನ್ನು ನಡೆಸಿದ ಕನ್ನಡ ಭಾಷಾಧ್ಯಯನಕಾರರಿಗೆ ಲಿಖಿತ ಭಾಷೆ ಮಾತ್ರವೇ ಮುಖ್ಯವಾಗಿತ್ತು. ಬರಹ ಮತ್ತು ಮಾತ(ಮೌಖಿಕತೆ)ನ್ನು ಹೊಂದಿರುವ ಕನ್ನಡ ಭಾಷೆಯನ್ನು ಒಂದು ಮಗ್ಗಲಿನಿಂದ ಕಂಡ ಕನ್ನಡ ಭಾಷಾಧ್ಯಯನದ ಪರಂಪರೆಯ ನಷ್ಟ ಮತ್ತು ಕನ್ನಡ ಭಾಷೆಯಲ್ಲಿ ಮಾತು ಮತ್ತು ಬರಹದ ನಡುವಿನ ಕಂದರ, ಅದರ ಬಿಕ್ಕಟ್ಟನ್ನು ಕಾಣುವುದು.

೫. 'ಕನ್ನಡಂಗಳ್' ಎಂದು ಹೇಳಲಾಗುವ ಹಲವು ಕನ್ನಡಗಳನ್ನು ನಿಜವಾಗಿಯೂ ಈವರೆಗೆ ಭಾಷಾವಿಜ್ಞಾನದ ನೆಲೆಯಿಂದ ಅಧ್ಯಯನ ಮಾಡಲಾಗಿದೆಯೇ, ಅದರ ಸ್ವರೂಪವೆಂತಹದ್ದು.

೬. ಕನ್ನಡ ಭಾಷೆಯ ವ್ಯಾಕರಣವನ್ನು ಕನ್ನಡ ಭಾಷೆಯ ಒಳಗಿನಿಂದಲೇ ಕಂಡುಕೊಳ್ಳಬೇಕು ಎಂದು ಹೇಳುತ್ತಿರುವ ಮತ್ತು ಆ ಮುಖೇನ 'ಎಲ್ಲರ

ಕನ್ನಡ'ವನ್ನು ಕುರಿತು ಚಿಂತಿಸುತ್ತಿರುವ ಡಾ. ಡಿ. ಎನ್. ಶಂಕರ ಭಟ್ ಅವರ ಚಿಂತನೆಗಳು ಮುಖ್ಯವೆನ್ನಿಸಿದರೂ ಅಳವಡಿಸಿಕೊಳ್ಳುವಲ್ಲಿ ಆಸಕ್ತಿ ತೋರದೆ, ಹಳೇ ದಾರಿಯಲ್ಲಿ ನಡೆಯುತ್ತಿರಲು ಇರಬಹುದಾದ ಕಾರಣಗಳು.

೭. ಕನ್ನಡ ವರ್ಣಮಾಲೆಯನ್ನು ಕುರಿತು ಇವತ್ತಿಗೂ ಒಮ್ಮತದ ವೈಜ್ಞಾನಿಕ ನಿಲುವು ಇಲ್ಲ. ಕನ್ನಡ ವರ್ಣಮಾಲೆಯೆಂದು ಕಲಿಸಲಾಗುವ ಕೆಲವು ವರ್ಣಗಳು ಕನ್ನಡದಲ್ಲಿ ಬಳಕೆಯಿಲ್ಲದಿದ್ದರೂ ಉಳಿಸಿಕೊಳ್ಳಲಾಗಿದೆ. ಅವುಗಳನ್ನು ಕುರಿತು ಯೋಚಿಸುವುದೇ ಒಂದು ದ್ರೋಹದಂತೆ ಪರಂಪರೆಯ ಸಾಂಪ್ರದಾಯಿಕ ಚಿಂತಕರಿಗೆ ತೋಚುತ್ತಿದೆ. ಹಾಗಾಗಿ ವರ್ಣಮಾಲೆಯಿಂದ ವ್ಯಾಕರಣದ ಹಲವು ನೆಲೆಯವರೆಗೂ ಸಂಸ್ಕೃತದ ಮಾದರಿಯನ್ನೇ ಕನ್ನಡದ ಅಧಿಕೃತ ವ್ಯಾಕರಣವೆಂದು ಸಾರಲಾಗುತ್ತಿದೆ. ಸಂಸ್ಕೃತದ ನೆರಳಿನಲ್ಲಿ ಬೆಳೆದುಬಂದ ಚಿಂತನೆಗಳು ಇವತ್ತೂ ಕನ್ನಡದ ಕಣ್ಣಿಗೆ ಬಣ್ಣದ ಕನ್ನಡವಾಗಿರುವುದನ್ನು ಅರಿಯುವುದು.

೮. ಸಂಸ್ಕೃತ, ಪ್ರಾಕೃತ ಮತ್ತು ಪಾಶ್ಚಾತ್ಯ ಮುಂತಾದ ಭಾಷೆಗಳೊಂದಿಗೆ ಕೊಡುಕೊಳ್ಳುತ್ತ, ವ್ಯಹರಿಸುತ್ತ, ಸಂಘರ್ಷಿಸುತ್ತ, ಬೆಳೆದು ಬಂದ ಕನ್ನಡ ಭಾಷಾಧ್ಯಯನಕ್ಕೆ ತನ್ನದೇ ಆದ ಎಳೆಗಳು ಉಂಟು. ಅಂತಹ ಎಳೆಗಳು ಪರಂಪರೆಯುದ್ದಕ್ಕೂ ಸಾಗಿಬಂದ ಬಗೆಯನ್ನು ಕಂಡುಕೊಳ್ಳುವುದು.

೯. ಶ್ರೀವಿಜಯನ ಕವಿರಾಜಮಾರ್ಗದಿಂದ ಆರಂಭವಾಗಿ ಇವತ್ತು ಕನ್ನಡ ಭಾಷಾಧ್ಯಯನ ಕ್ಷೇತ್ರದಲ್ಲಿ ಹೊಸ ಬಗೆಯ ಸಂಚಲನವನ್ನುಂಟುಮಾಡಿರುವ ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರ ವರೆಗೆ ಕನ್ನಡ ಬಾಷಾಧ್ಯಯನದ ಸ್ವರೂಪ, ಅನನ್ಯತೆ, ಪ್ರಾಭಾವಗಳನ್ನು ಅರ್ಥಮಾಡಿಕೊಳ್ಳುವುದು.

ಈ ಅಧ್ಯಯನದಲ್ಲಿ ನಡೆಸಿರುವ ಸಂಶೋಧನೆಯ ಸ್ವರೂಪವನ್ನು ಸಂಕ್ಷಿಪ್ತವಾಗಿ ಪ್ರತಿ ಅಧ್ಯಾಯದ ಸ್ವರೂಪವನ್ನು ಈ ಮುಂದೆ ಕೊಡಲಾಗಿದೆ. ಈ ಅಧ್ಯಯನದ ಸ್ವರೂಪವನ್ನು ಕುರುತು ತೋರ್ಪಡಿಸುವ ಪಕ್ಷಿನೋಟ.

ಅಧ್ಯಾಯ – ೧. ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆಯನ್ನು ಸ್ಪಷ್ಟಪಡಿಸುವುದು ಈ ಅಧ್ಯಾಯದ ಭಾಗವಾಗಿರುತ್ತದೆ. ಯಾಕೆ ಈ ಅಧ್ಯಯನವನ್ನು ಕೈಗೊಂಡೆ, ಇದರ ಆಯ್ಕೆಗೆ ಕಾರಣಗಳೇನು? ಉದ್ದೇಶಗಳು ಏನನ್ನು ಇಟ್ಟುಕೊಳ್ಳಲಾಗಿದೆ; ಈ ಅಧ್ಯಯನದ ವ್ಯಾಪ್ತಿಯನ್ನು ಸ್ಪಷ್ಟಪಡಿಸಿಕೊಳ್ಳುವುದು. ಅಂದರೆ ಕಾಲ, ಕೃತಿ, ಅಧ್ಯಯನಕಾರರು (ಇದು ಅಧ್ಯಯನ ಕೇಂದ್ರವಾದುದರಿಂದ) ಮುಂತಾದ ಕೆಲವು ಅಂಶಗಳು ಮುಖ್ಯವಾಗಿ ಖಚಿತಪಡಿಸಿಕೊಂಡಿರುವುದು. ಇದು ಅಧ್ಯಯನದ ಮಿತಿಯೂ ಕಾರಣವಿರಲುಂಟು. ಹಾಗೆಯೇ ಈ ಅಧ್ಯಯನದ ವಿಧಾನವು ವ್ಯಾಪ್ತಿ, ಸ್ವರೂಪ, ಚಾರಿತ್ರಿಕತೆ, ಸಂಘರ್ಷ, ಅನಿವಾರ್ಯತೆ ಮುಂತಾದ ಸಂಗತಿಗಳೊಂದಿಗೆ ಹೆಜ್ಜೆ ಹಾಕುವಾಗ ಎರಡು ಕವಲುಗಳು ಸಹಜವಾಗಿಯೇ ಎದುರಿರುತ್ತವೆ. ಈ ಎರಡನ್ನೂ ಒಳಗೊಂಡ ಅಧ್ಯಯನದ ಉದ್ದೇಶದ ಹುಡುಕಾಟವನ್ನು ಮಾಡಬೇಕಿರುತ್ತದೆ. ಆ ಕಾರಣವಾಗಿ ಇಲ್ಲಿ ದ್ವಂದ್ವಾತ್ಮಕ ಅಧ್ಯಯನ, ಅನುಸಂಧಾನ, ವಿಶ್ಲೇಷಣಾತ್ಮಕ ವಿಧಾನ, ತೌಲನಿಕ ವಿಧಾನಗಳನ್ನು ಅಳವಡಿಸಿಕೊಳ್ಳಲಾಗಿದೆ. ಇದು ಮೊದಲ ಅಧ್ಯಾಯದಲ್ಲಿ ಸ್ಪಷ್ಟಪಡಿಸಿಕೊಳ್ಳಲಾದ ಸೂಚಿಯಾಗಿದೆ.

ಅಧ್ಯಾಯ – ೨. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ಈ ಅಧ್ಯಾಯವು ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಒಳಗೊಂಡಿದೆ. ಭಾರತೀಯ ಮತ್ತು ಕನ್ನಡ ವ್ಯಾಕರಣ ರಚನೆಯ ಹೆಜ್ಜೆ ಜಾಡನ್ನು ಸಂಕ್ಷಿಪ್ತವಾಗಿ ಪರಿಚಯಿಸಿಕೊಂಡ ಅನಂತರ ಕೆಲವು ಕೃತಿಗಳನ್ನು ವಿಶ್ಲೇಷಿಸಲಾಗಿದೆ. ಮತ್ತು ಹಾಗೆ ವಿಶ್ಲೇಷಿಸುವಾಗಲೂ ಅಧ್ಯಯನದ ಆಕೃತಿಯನ್ನು ರೂಪಿಸಿಕೊಳ್ಳಲಾಗಿದೆ. ಭಾಷಾವಿಜ್ಞಾನದ ಮೂಲ ತತ್ವಗಳು, ನುಡಿ ನೋಟ, ನಮ್ಮ ಕನ್ನಡ, ಇಂದಿನ ಕನ್ನಡ: ರಚನೆ ಮತ್ತು ಬಳಕೆ, ಭಾಷಾತಂತ್ರಜ್ಞಾನ, ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು, ದ್ವಿಭಾಷಿಕರು, ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ, ನಮ್ಮೊಡನೆ ನಮ್ಮ ನುಡಿ ಕೃತಿಗಳನ್ನು ವಿಶ್ಲೇಷಿಸಿದ್ದುದಲ್ಲದೆ, ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಇವರ ಒಟ್ಟು ಚಿಂತನೆಯನ್ನು ಸಂಕ್ಷಿಪ್ತವಾಗಿ ಸಮೀಕ್ಷೆ ಮಾಡಲಾಗಿದೆ.

ಅಧ್ಯಾಯ – ೩. ಜಾಗತಿಕ ಮತ್ತು ಭಾರತೀಯ ಸಂದರ್ಭದಲ್ಲಿ ನಡೆದ ಅಧ್ಯಯನದ ಸಂಕ್ಷಿಪ್ತ ಚರಿತ್ರೆ

ಜಾಗತಿಕ ಮತ್ತು ಭಾರತೀಯ ಸಂದರ್ಭದಲ್ಲಿ ನಡೆದ ಅಧ್ಯಯನದ ಸಮೀಕ್ಷೆ. ಈ ಅಧ್ಯಾಯದ ಹೆಸರೇ ಸೂಚಿಸುವಂತೆ ಇದೊಂದು ಸಂಕ್ಷಿಪ್ತವಾಗಿ ಜಾಗತಿಕ ಭಾಷಾವಿಜ್ಞಾನ ನಡೆದು ಬಂದ ದಾರಿಯನ್ನು ಕಾಣುವ ಬಗೆಯದು. ಭಾಷಾವಿಜ್ಞಾನದ ಚರಿತ್ರೆಯನ್ನು ಕಟ್ಟುವುದಲ್ಲ, ಹಕ್ಕಿ ನೋಟದಂತೆ ಕಂಡುಕೊಳ್ಳುವುದು ಈ ಅಧ್ಯಾಯದ ತುರ್ತು. ಮುಂದಿನ ಅಧ್ಯಾಯಕ್ಕೆ ಇದೊಂದು ಪೂರಕವಾದ ಅಧ್ಯಾಯ. ಹಾಗಾಗಿ ಈ ಅಧ್ಯಾಯದಲ್ಲಿ ಕಾಣಿಸಿಕೊಳ್ಳುವ ಅನೇಕ ಸಂಗತಿಗಳನ್ನು ವಿವರವಾಗಿಯಾಗಲಿ, ವಿಮರ್ಶಾತ್ಮಕವಾಗಿಯಾಗಲಿ ಚರ್ಚೆಯನ್ನು ಮಾಡುವುದಿಲ್ಲ. ಪೂರಕವಾದ ಅಧ್ಯಾಯವಾಗಿರುವುದರಿಂದ ಮುಖ್ಯವಾದ ಅಧ್ಯಾಯಕ್ಕೆ ಪ್ರವೇಶಿಕೆಯಾಗಿ ಬಾಗಿಲು ಕಿಟಕಿಗಳನ್ನು ಕಂಡುಕೊಳ್ಳುವ ಬಗೆಯದು. ಆದ್ದರಿಂದಲೆ ಇಲ್ಲಿ ಬರುವ ಭಾಷಾವಿಜ್ಞಾನದ ಅನೇಕ ಮಾದರಿಗಳಾಗಲಿ, ಅಸಂಖ್ಯಾತ ಭಾಷಾಧ್ಯಯನ ಕಾರರನ್ನಾಗಲಿ ಸಂಪೂರ್ಣವಾಗಿ ಎಳೆ ಎಳೆಯಾಗಿ ಕಂಡುಕೊಳ್ಳಲಾಗಿಲ್ಲ. ಒಂದೊಂದು ಭಾಗದಿಂದ ಒಬ್ಬೊಬ್ಬರನ್ನು ಅಥವಾ ಕೆಲವು ಉದಾಹರಣೆಗಳನ್ನು ಹೇಳಲಾಗಿದೆ. ಆ ಮೂಲಕ ಜಾಗತಿಕ ಮತ್ತು ಭಾರತೀಯ ಸಂದರ್ಭದಲ್ಲಿ ನಡೆದ ಅಧ್ಯಯನದ ಸಂಕ್ಷಿಪ್ತ ಚರಿತ್ರೆಯನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ – ೪. ಕನ್ನಡದಲ್ಲಿ ಭಾಷಾಧ್ಯಯನ ನಡೆದು ಬಂದ ಬಗೆ

ಕನ್ನಡದಲ್ಲಿ ಭಾಷಾಧ್ಯಯನ ನಡೆದು ಬಂದ ಬಗೆಯನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಪ್ರಾಚೀನತೆಯ ಅಂಶಗಳು, ಶಾಸನಗಳು, ಭಾರತೀಯ ವ್ಯಾಕರಣ ಪರಂಪರೆಯು ಕನ್ನಡದೊಂದಿಗಿನ ಸಖ್ಯ, ಕನ್ನಡ ವ್ಯಾಕರಣ ಪರಂಪರೆ, ಕವಿರಾಜಮಾರ್ಗ, ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನಗಳ ಸ್ವರೂಪ, ಪರಿಚಯ, ವಿಶ್ಲೇಷಣಾತ್ಮಕ ಮತ್ತು ತೌಲನಿಕ ವಿಧಾನದಲ್ಲಿ ನೋಡಲಾಗಿದೆ. ಅಲ್ಲದೆ ೧೮–೧೯ನೇ ಶತಮಾನದ ನಂತರ ಮಿಷಿನರಿಗಳು, ಪಾಶ್ಚಾತ್ಯರು ಮತ್ತು ಕನ್ನಡಿಗರು ವ್ಯಾಕರಣ ಹಾಗೂ ಕನ್ನಡ ಭಾಷೆಯ ಲೋಕವನ್ನು ಪ್ರವೇಶಿಸಿ ನಡೆಸಿದ ಚಿಂತನೆಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ.

ಅಧ್ಯಾಯ – ೫. ಕನ್ನಡ ಭಾಷಾಧ್ಯಯನದ ಮಾದರಿಗಳು.

ಕನ್ನಡ ಭಾಷಾಧ್ಯಯನದ ಮಾದರಿಗಳು ಎಂಬ ಈ ಅಧ್ಯಾಯದಲ್ಲಿ 'ಭಾರತೀಯ' ಎಂಬ ಹೆಸರಿನಲ್ಲಿ ಕನ್ನಡವೂ ಸೇರಿದಂತೆ ಇತರ ದೇಶೀಯ ಭಾಷೆಗಳು ಮತ್ತು ತಮ್ಮ ಅಸ್ತಿತ್ವದ, ಅಸ್ಮಿತೆಯ ಭಾಗವಾಗಿ ಸೆಟೆದು ನಿಲ್ಲಲು ಪ್ರಯತ್ನಿಸಿದ ಸಂಗತಿಗಳ ಸಂಘರ್ಷವನ್ನು ಕಂಡುಕೊಳ್ಳಲಾಗಿದೆ. ಮತ್ತು ಅಧ್ಯಾಯವು ಮುಂದಿನ ಭಾಗಗಳಿಗೆ ಅಥವಾ ಈ ಅಧ್ಯಯನದ ಪ್ರವೇಶಿಕೆಯಾಗಿದೆ, ಹಾಗೆಂದು ಪೀಠಿಕೆಯ ಮಿತಿಯದ್ದೇನು ಅಲ್ಲ. ಒಂದು ಚಿಂತನೆಯ ಪರಂಪರೆಯ ಹಿಂದಿನ ಮನಸ್ಸಿನ ವ್ಯವಹಾರ ಲೋಕಕ್ಕೆ ತಾತ್ವಿಕ ನೆಲೆಗಳನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ – ೫.೧ ವ್ಯಾಕರಣ ಮಾದರಿಯ ಅಧ್ಯಯನ

ಕನ್ನಡ ವ್ಯಾಕರಣ ಮಾದರಿಯ ಅಧ್ಯಯನವಾದ ಈ ಭಾಗದಲ್ಲಿ ಭಾಷಾಧ್ಯಯನವೆಂಬ ಹಿಂದಣ ರೂಪವಾದ ವ್ಯಾಕರಣ ಮತ್ತು ಭಾಷಿಕ ಅಂಶಗಳ ಕುರಿತ ಚಿಂತನೆಯು ಆರಂಭಗೊಂಡು ಕಾಲ ಕಾಲಕ್ಕೆ ಬಂದ ಹೊಸ ಅಂಶಗಳು, ಕೃತಿಗಳು ಅಧ್ಯಯನದ ಅಂಶಗಳನ್ನು ಚರ್ಚಿಸಲಾಗಿದೆ. ಕಾಲಘಟ್ಟಗಳು, ವರ್ಣಮಾಲೆ, ಭಾರತೀಯ ಮತ್ತು ಪಾಶ್ಚಾತ್ಯ ಪ್ರಭಾವಗಳು ಮುಂತಾದವುಗಳನ್ನು ತಿಳಿದುಕೊಳ್ಳುತ್ತಲೇ ಕನ್ನಡದ ವೈಶಿಷ್ಟ್ಯಗಳನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ – ೫.೨ ಭಾಷಾಶಾಸ್ತ್ರ / ವಿಜ್ಞಾನ ಮಾದರಿಯ ಅಧ್ಯಯನ

ಶಾಸ್ತ್ರ ಮತ್ತು ವಿಜ್ಞಾನ ಎಂಬ ಎರಡು ಪದಗಳು ಕಾಲಾಂತರದಲ್ಲಿ ಅರ್ಥವನ್ನು ರೂಪಿಸಿಕೊಂಡ ಮತ್ತು ಪ್ರಾಮುಖ್ಯತೆಯನ್ನು ಹೊಂದಿದ ಬಗೆ, ಭಾಷಾಶಾಸ್ತ್ರವು ಹೇಗೆ ಭಾಷಾವಿಜ್ಞಾನವೆನ್ನಿಸಿಕೊಳ್ಳಲು ಆಸಕ್ತಿಯನ್ನು ತಳೆದಿದೆ. ಮತ್ತು ಪಾಶ್ಚಾತ್ಯ ಹಲವು ಮಾದರಿಗಳು ವಿಜ್ಞಾನದ ಅಂಗವಾಗಿ ಬೆಳೆದದ್ದು ಮತ್ತು ಭಾರತೀಯ ಹಾಗೂ ಕನ್ನಡದ ಸನ್ನಿವೇಶದಲ್ಲೂ ಅಂತಹ ಒಂದು ಕನ್ನಡಕವನ್ನು ಧರಿಸಿ ಕನ್ನಡ ಭಾಷೆಯನ್ನು ಕಟ್ಟಿಕೊಳ್ಳಲು ನಡೆದ ಪ್ರಯತ್ನಗಳನ್ನು ಕಾಣಲಾಯಿತು. ಇದು ಒಂದು ಬಗೆಯಲ್ಲಿ ಟಿ. ಎಸ್. ಎಲಿಯಟ್‌ನ 'ಪರಂಪರೆ ಮತ್ತು ವ್ಯಕ್ತಿ ಪ್ರತಿಭೆ'ಯ ಬಗೆಯಲ್ಲಿ ಇಂದು ಮತ್ತು ಹಿಂದಿನ ನೆಲೆಗಳನ್ನು ಕಂಡುಕೊಳ್ಳಲಾಯಿತು. ಭಾಷಾಶಾಸ್ತ್ರ/ವಿಜ್ಞಾನದ ತಾತ್ವಿಕ ದೃಷ್ಟಿ ಮತ್ತು ಬರಹವನ್ನು ವಿವರಿಸಲಾಗಿದೆ.

ಅಧ್ಯಾಯ – ೫.೩ ಕನ್ನಡದ್ದೇ ಭಾಷಾಧ್ಯಯನ ಮಾದರಿ

ಈ ಅಧ್ಯಾಯದಲ್ಲಿ ಕನ್ನಡ ಭಾಷೆಯು ಪರಂಪರೆಯುದ್ದಕ್ಕೂ ಹಲವು ಭಾಷೆಗಳ ಸಖ್ಯದಲ್ಲಿ ಬೆಳೆದು ಬಂದರೂ ತನ್ನದೇ ಚಿಂತನೆ, ಮಾದರಿಗಳನ್ನು ಕಂಡುಕೊಳ್ಳಲು ಯತ್ನಿಸಿದ್ದೂ ಇದೆ. ಆದರೆ ಸಫಲವಾಗಿರಲಿಲ್ಲ. ಅನ್ಯ ಸಂಗತಿಗಳು ಮತ್ತು ತನ್ನೊಳಗಿನ ಅಂತಹಸತ್ವವನ್ನು ರೂಪಿಸಿಕೊಂಡು ಭಾಷೆಯ ಎರಡು ಸ್ತರಗಳಾದ ಮಾತು ಮತ್ತು ಬರಹವನ್ನು ಗಂಭೀರವಾಗಿ ಚಿಂತಿಸಿ 'ಕನ್ನಡದ್ದೇ' ಮಾದರಿಯನ್ನು ಕಂಡುಕೊಳ್ಳಲಾಗಿರುವ ಬಗೆಯನ್ನು ವರ್ಣಮಾಲೆಯಿಂದ ವ್ಯಾಕರಣ, ಭಾಷಾಧ್ಯಯನದ ಮಾದರಿಯ ವರೆಗಿನ ಪಯಣದ ನೆಲೆಗಳನ್ನು ಇಲ್ಲಿ ಕಾಣಲಾಗಿದೆ. ಮತ್ತು ನಾಳೆಗೆ ಸಮರ್ಥ ಕನ್ನಡ ರೂಪಿಸುವಲ್ಲಿನ ಚಿಂತನೆಗಳ ಸಂಘರ್ಷವನ್ನು ಗಮನಿಸುತ್ತಲೇ ಎಲ್ಲರ ಕನ್ನಡದ ಬಗ್ಗೆ ಬಂದ ಚಿಂತನೆಯ ಫಲಿತಾಂಶಕ್ಕಾಗಿ ಎಷ್ಟೆಲ್ಲ ಅಡೆ ತಡೆಗಳ ಒಡ್ಡುಗಳನ್ನು ಮೀರಿ ಇನ್ನೂ ನಡೆಯಬೇಕಾದ ಕನ್ನಡದ ಸ್ಥಿತಿಯನ್ನು ಕಂಡುಕೊಳ್ಳಲಾಗಿದೆ.

ಅಧ್ಯಾಯ – ೬ ಸಮಾರೋಪ

ಈ ಅಧ್ಯಾಯದಲ್ಲಿ ಭಾರತದ ಗ್ರಾಮೀಣ ಅಥವಾ ಕನ್ನಡದ ಹಳ್ಳಿಯ ಸಾಮಾಜಿಕ ಪರಿಸ್ಥಿತಿ ಮತ್ತು ಆ ಪರಿಸ್ಥಿತಿಗೆ ಅಂಟಿಕೊಂಡು ಜೀವಿಸುತ್ತಿರುವ ಭಾಷಿಕ ಚರಮಗೀತಾತ್ಮಕತೆಯನ್ನು ವಿವರಿಸುತ್ತ ಈ ಹಿಂದಿನ ಭಾಷಾಧ್ಯಯನಗಳು ಅಷ್ಟು ಗಂಭೀರವಾಗಿ ಪರಿಗಣಿಸದೆ ಇದ್ದದ್ದನ್ನು ಸೂಚ್ಯವಾಗಿ ಚಿತ್ರಿಸಲಾಗಿದೆ. ಇದೆಲ್ಲವನ್ನು ಅಂದರೆ ಎಲ್ಲರ ಕನ್ನಡದ ನಾಡಿ ಬಡಿತವನ್ನು ಗಮನಿಸುತ್ತಿರುವ 'ಕನ್ನಡದ್ದೇ' ಭಾಷಾಧ್ಯಯನ ಮಾದರಿಯ ಸ್ವರೂಪ ಮತ್ತು ಇದು ಕೆಲವು ಪಾರಿಭಾಷಿಕ ಪದಗಳ ಸನ್ನಿವೇಶದಲ್ಲಿ ಸರಳವಾಗದೆ ಅಪರಿಚಿತ ಮುಖದಂತೆ ಗೋಚರಿಸುವ ಅಪಾಯವನ್ನು ಮುಖಾಮುಖಿಮಾಡಲಾಗಿದೆ. ಹರಿಯುವ ತೊರೆಗೆ ಎಲ್ಲೆಲ್ಲೂ ಬಿದ್ದ ಮಳೆಯ ಹನಿಗಳನ್ನು ಅದು ಹರಿದು ಬರುವ ಮತ್ತು ನಾಳೆಗೆ ಚಲಿಸುತ್ತಿರುವ ಕುರಿತು ನಡೆಯಬೇಕಾದ ದಾರಿಯನ್ನು ಕಾಣಲಾಗಿದೆ.

## ಅಧ್ಯಯನದ ವ್ಯಾಪ್ತಿ

ಕನ್ನಡ ಭಾಷೆಯ ಲಿಖಿತ ಚರಿತ್ರೆಯನ್ನು ಸುಮಾರು ಒಂದುವರೆ ಸಾವಿರ ವರ್ಷಗಳ ಇತಿಹಾಸವನ್ನು ಗುರುತಿಸಲಾಗುತ್ತಿದೆ. ಈ ಒಂದುವರೆ ಸಾವಿರ ವರ್ಷಗಳಲ್ಲಿ

ಭಾಷೆ ಕುರಿತ ಚಿಂತನೆಗಳು ಸಾಕಷ್ಟು ಬಂದಿವೆ. ಆದರೆ ಅವು ಕಾವ್ಯದ ಭಾಗವಾಗಿ, ಬಿಡಿ ಬಿಡಿ ಬರಹಗಳಾಗಿ ಬಂದವುಗಳಾಗಿವೆ. ಕನ್ನಡ ವ್ಯಾಕರಣ ಪರಂಪರೆ ಕವಿರಾಜಮಾರ್ಗ, ಶಬ್ದಸ್ಮೃತಿ, ಕರ್ನಾಟಕ ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನಗಳ ಸ್ವರೂಪವನ್ನು ವಿಶ್ಲೇಷಣಾತ್ಮಕತೆಯಿಂದ ವ್ಯಾಪ್ತಿಗೆ ತೆಗೆದುಕೊಳ್ಳಲಾಗಿದೆ. ಅವೆಲ್ಲವನ್ನು ಈ ಅಧ್ಯಯನ ವ್ಯಾಪ್ತಿಗೆ ಪ್ರಮುಖವಾಗಿ ತೆಗೆದುಕೊಳ್ಳುತ್ತದೆ. ಅಲ್ಲದೆ ಸಂಸ್ಕೃತ ಭಾಷೆಯ ಪ್ರಭಾವವನ್ನು, ಭಾಷೆಯ ಮೇಲೆ ಮತ್ತು ಭಾಷಾಧ್ಯಯನದ ಮಾದರಿ ಮೇಲೆ ಇದೆ. ಭಾರತೀಯ ವ್ಯಾಕರಣ ಪರಂಪರೆಯನ್ನು ಸಂಕ್ಷಿಪ್ತವಾಗಿ ಅಭ್ಯಸಿಸುವುದು. ಪಾಣಿನಿ, ಕಾತ್ಯಾಯನ, ವಿಜಯಾದಿತ್ಯ, ಭಟ್ಟೋಜಿ ದೀಕ್ಷಿತ ಮುಂತಾದವರು ನಿರ್ಮಿಸಿದ ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣದ ಚಾರಿತ್ರಿಕತೆ ಮತ್ತು ಸ್ವರೂಪವನ್ನು ಅರ್ಥಮಾಡಿಕೊಳ್ಳುವುದು. ಅನಂತರ ಪಾಶ್ಚಾತ್ಯ ಮಾದರಿ, ಭಾರತಕ್ಕೆ ಧರ್ಮ ಪ್ರಸಾರ ಮತ್ತು ವಸಾಹತುವಾಗಿ ಮಾಡಿಕೊಳ್ಳಲು ಬಂದ ಮಿಷಿನರಿ ಮತ್ತು ಪಾಶ್ಚಾತ್ಯರ ಅಧ್ಯಯನದ ಸ್ವರೂಪ ಹಾಗೂ ಅವರು ಕನ್ನಡಕ್ಕೆ ಕೊಟ್ಟ ವ್ಯಾಕರಣಗಳನ್ನು ತಿಳಿಯುವುದು. ಅಲ್ಲದೆ ಅನಂತರ ಕನ್ನಡಿಗರೇ ಪಾಶ್ಚಾತ್ಯ ಸಿದ್ಧಾಂತಗಳನ್ನು ಮಾದರಿಗಳನ್ನು ಅಭ್ಯಯಸಿಸಿ ಕನ್ನಡ ಭಾಷೆಯನ್ನು ಕಂಡುಕೊಂಡ ನೆಲೆಗಳನ್ನು ಸಹ ವ್ಯಾಪ್ತಿಗೆ ತೆಗೆದುಕೊಳ್ಳಲಾಗುವುದು. ಹೀಗೆ ಕನ್ನಡ ಭಾಷೆಯ ಅಂತಸ್ಥವನ್ನು ಕಂಡುಕೊಳ್ಳುತ್ತ ಪ್ರಭಾವ ಮತ್ತು ಕಾರಣ ನಿಮಿತ್ತವಾಗಿ, ಪ್ರಭಾವಿತ ಭಾಷೆ ಸಿದ್ದಾಂತ ಮಾದರಿಗಳನ್ನು ಪೂರಕವಾಗಿ ಗಮನಿಸಲಾಗುವುದು. ಸಂಸ್ಕೃತ ಮತ್ತು ಪಾಶ್ಚಾತ್ಯ ಮಾದರಿಗಳನ್ನು ಸಾಕಷ್ಟು ಅಭ್ಯಸಿಸಿ ಆ ಮಾದರಿಗಳೆಂಬ ಕನ್ನಡಕಗಳನ್ನು ಕಳಚಿ ಕನ್ನಡದ ನೆಲೆಯಿಂದಲೇ ಕಾಣಲು ಯತ್ನಿಸುತ್ತಿರುವ ಇತ್ತೀಚಿನ ಅಧ್ಯಯನದ ಹೊಸ ಕವಲನ್ನು ಅಥವಾ ಮೂಲವನ್ನು ಸಹ ಇದರ ವ್ಯಾಪ್ತಿಗೆ ಒಳಪಟ್ಟಿದೆ. ಕನ್ನಡ ಭಾಷೆಗೆ ಸಂಬಂಧಪಟ್ಟ ಕನ್ನಡದಲ್ಲಿ ನಡೆದವುಗಳನ್ನು ಅಧ್ಯಯನದ ವ್ಯಾಪ್ತಿ ಅಥವಾ ಮಿತಿಯನ್ನು ರೂಪಿಸಿಕೊಳ್ಳಲಾಗಿದೆ. ಪೂರಕವಾಗಿ ಸಂಸ್ಕೃತ ಮತ್ತು ಇಂಗ್ಲಿಶ್ ಅಧ್ಯಯನಗಳನ್ನು ಗಮನಿಸಲಾಗುವುದು.

## ಅಧ್ಯಯನದ ಆಕರಗಳು

ಭಾಷಾಧ್ಯಯನದ ಚಾರಿತ್ರಿಕ ಅಧ್ಯಯನವಾದುದರಿಂದ ಈಗಾಗಲೇ ನಡೆದ ಅಧ್ಯಯನ ಕೃತಿಗಳು, ಲೇಖನಗಳು ಈ ಅಧ್ಯಯನದ ಆಕರಗಳಾಗಿವೆ. ಆರಂಭದಲ್ಲಿ ಸಂಸ್ಕೃತದ ಪ್ರಭಾವದಲ್ಲಿ ರೂಪಿತಗೊಳ್ಳುತ್ತಿದ್ದರೂ ಅದೊಂದು ಪ್ರತ್ಯೇಕವಾದ

ಶಾಖೆಯಾಗಿ ರೂಪುಗೊಳ್ಳುವಲ್ಲಿ ಕಾಲವನ್ನು ತೆಗೆದುಕೊಂಡಿದೆ. ಅಂತಹ ಸನ್ನಿವೇಶದಲ್ಲಿ ಭಾಷಾಧ್ಯಯನವು ನಾಡು-ನುಡಿಯ, ಸಾಹಿತ್ಯಿಕ ಭಾಗವಾಗಿಯೇ ಅಧ್ಯಯನ ನಡೆದದ್ದು ಇದೆ. ಕವಿರಾಜಮಾರ್ಗದಂತಹ ಕೃತಿಯನ್ನು ಇಲ್ಲಿ ಗಮನಿಸಬಹುದಾಗಿದೆ. ಅಂದರೆ ಕವಿರಾಜಮಾರ್ಗ, ಶಬ್ಧಮಣಿದರ್ಪವೂ ಸೇರಿದಂತೆ ಇಪ್ಪತ್ತನೆ ಶತಮಾನದವರೆಗೆ ಅಂತಹ ಕೃತಿಗಳು ಮತ್ತು ಪ್ರೇರಣೆಯಾಗಿರಬಹುದಾದ ಚಿಂತನೆಯ ಮೂಲಗಳನ್ನು ಕಟ್ಟಿಕೊಳ್ಳಲಾಗುವುದು.

ಕಳೆದ ಶತಮಾನದಲ್ಲಿ ಪಾಶ್ಚಾತ್ಯ ಪ್ರಭಾವವೂ ಸೇರಿದಂತೆ, ದೇಶದ ಸ್ವಾತಂತ್ರ್ಯದ ಕನಸು, ಚರಿತ್ರೆ ಕಟ್ಟಿಕೊಳ್ಳುವ ಹುನ್ನಾರ, ಅಭಿಮಾನ ಮೂಡಿಸುವ ಭರದ ಮನಸ್ಸು ಕೆಲಸ ಮಾಡಿದಂತಿದ್ದರೂ, ಭಾಷಾಧ್ಯಯನವು ಭಾಷಾಶಾಸ್ತ್ರವಾಗಿಯೂ ಭಾಷಾವಿಜ್ಞಾನವಾಗಿಯೂ, ತಿ. ನಂ. ಶ್ರೀ, ಆರ್. ಸಿ. ಹಿರೇಮಠ, ಎಂ. ಚಿದಾನಂದಮೂರ್ತಿ, ಕೆ. ಕೆಂಪೇಗೌಡ, ಸಂಗಮೇಶ ಸವದತ್ತಿಮಠ, ಇನ್ನು ಮುಂತಾದವರ ಭಾಷಾವಿಜ್ಞಾನದ ಕೃತಿ ಮತ್ತು ಚಿಂತನೆಗಳನ್ನು ಆಕರಗಳನ್ನಾಗಿ ತೆಗೆದುಕೊಳ್ಳಲಾಗುವುದು.

ನಂತರದಲ್ಲಿ ಅಥವಾ ಭಾಷಾವಿಜ್ಞಾನದ ತಾತ್ತ್ವಿಕತೆಯ ತಂಟೆಗೆ ಹೋಗದೆ ಅಥವಾ ಭಾಷಾಧ್ಯಯನದ ತಾತ್ವಿಕ ಸಿದ್ಧಾಂತಗಳನ್ನು ಚೆನ್ನಾಗಿ ಗೊತ್ತಿದ್ದೂ ಕನ್ನಡದ ಸನ್ನಿವೇಶದಲ್ಲಿ ತಾತ್ವಿಕಗಳ ನೆರಳಿನಲ್ಲಿ ಕಾಣಲಿಚ್ಚಿಸದೆ ಅದೊಂದು ಭಾಷಾ ಅಧ್ಯಯನ ಎಂದು ನೋಡಲಾಯಿತು. ಡಾ. ಹೆಚ್. ಎಸ್. ಬಿಳಿಗಿರಿ, ಡಾ. ಡಿ. ಎನ್. ಶಂಕರ್‌ಭಟ್, ಡಾ. ಕೆ. ವಿ. ನಾರಾಯಣ ಮುಂತಾದವರು ಅವರ ಕೃತಿಗಳ ಮೂಲಕ ಈ ಘಟ್ಟದ ತಾತ್ತ್ವಿಕತೆಯನ್ನು ವಿವೇಚಿಸಲಾಗುವುದು. ಕನ್ನಡ ಭಾಷೆಯ ಕುರಿತು ಬರೆದಿರುವ ನೇರ ಮತ್ತು ಪರೋಕ್ಷವಾಗಿ ಪ್ರಭಾವ ಬೀರಿದ, ಅರ್ಥೈಸಲು ಯತ್ನಿಸುವ ಬಗೆಯ ಲೇಖನಗಳನ್ನು ಸಹ ಪ್ರಮುಖವಾಗಿ ಗಮನಿಸಲಾಗಿದೆ.

## ಅಧ್ಯಯನದ ವಿಧಾನ

ಒಂದೇ ಕಾಲಘಟ್ಟದಲ್ಲಿ ಭಿನ್ನ ದೃಷ್ಟಿಕೋನ ಅಥವಾ ಅಧ್ಯಯನದ ಮಾದರಿಗಳು ಕಾಣಿಸಿಕೊಳ್ಳುವುದು: ಅಂದರೆ ಇವತ್ತು ಡಾ. ಕೆ. ವಿ. ನಾರಾಯಣ ಮತ್ತು ಡಾ. ಡಿ. ಎನ್. ಶಂಕರಭಟ್ಟರ ಚಿಂತನೆಗಳ ಮಾದರಿಯ ಸನ್ನಿವೇಶದಲ್ಲಿ ಎಂ. ಚಿದಾನಂದಮೂರ್ತಿಯವರ, ಕೆ. ಕೆಂಪೇಗೌಡರ, ಸಂಗಮೇಶ ಸವದತ್ತಿಮಠ, ಕೆ. ವಿ. ತಿರುಮಲೇಶ್ ಇವರ ಬರಹಗಳು ಇವೆ. ಅಲ್ಲದೆ ಇನ್ನೂ ಅಪಾರವಾದ ಬಿಡಿ ಬರಹಗಳಿವೆ, ತಾತ್ವಿಕ ಅಧ್ಯಯನಗಳಿವೆ. ಇಂತಹ ಸನ್ನಿವೇಶ ಅಥವಾ ಎರಡು ವಿಭಿನ್ನ

ಮಾದರಿಗಳ ಚಿಂತನೆಗಳು ರೂಪಗೊಳ್ಳಲು ಕಾರಣಗಳೇನು? ಅವುಗಳ ಹಿಂದೆ ಕೆಲಸಮಾಡಿರುವ ಚಾರಿತ್ರಿಕ, ವೈಯಕ್ತಿಕ ಒತ್ತಡಗಳೇನು? ಇತ್ಯಾದಿಗಳನ್ನು ಅಧ್ಯಯನ ಮಾಡಲು ದ್ವಂದ್ವಾತ್ಮಕ ಅಧ್ಯಯನ ವಿಧಾನವನ್ನು ರೂಪಿಸಿಕೊಳ್ಳಲಾಗುವುದು. ದ್ವಂದ್ವಾತ್ಮಕ ವಿಧಾನವೆಂದರೆ, ಚಾರಿತ್ರಿಕ ಚೌಕಟ್ಟಿನಲ್ಲಿ ಸಮಗ್ರವಾಗಿ ಗ್ರಹಿಸುವ ವಿಧಾನ, ತಾತ್ತ್ವಿಕ ಪರಿಕಲ್ಪನೆಗಳನ್ನು ಮೊದಲೆ ಸ್ಪಷ್ಟಪಡಿಸಿಕೊಂಡು, ತನ್ನ ಸಿದ್ಧಾಂತಕ್ಕೆ ಪೂರಕ ಮತ್ತು ವ್ಯತಿರಿಕ್ತವಾದ ಎರಡನ್ನೂ ಒಟ್ಟಿಗೆ ಹಿಡಿದು ವಿಶ್ಲೇಷಣೆ ಮಾಡುವ ವಿಧಾನ, ಇದನ್ನು 'ಅನುಸಂಧಾನ' ಮಾರ್ಗ ಎಂದು ಸಹ ಭಾವಿಸಬಹುದಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ಅನುಸಂಧಾನ ವಿಧಾನವನ್ನು ಅನುಸರಿಸಲಾಗುವುದು. ಈಗಾಗಲೆ ನಡೆದ ಅಧ್ಯಯನಗಳು ಚಿಂತನೆಗಳನ್ನು ಕ್ರೂಢೀಕರಿಸಿಕೊಂಡು ವಿವರಣೆಯ ಮೂಲಕ ವಿಶ್ಲೇಷಿಸುತ್ತ ಸ್ಪಷ್ಟಪಡಿಸಿಕೊಳ್ಳವುದು. ಸೂಕ್ಷ್ಮ ಮತ್ತು ಸಮಗ್ರತೆಯ ಅರಿವಿನೊಂದಿಗೆ ಭಾಷಾಚರಿತ್ರೆಯ ಒಡಲ ಸಂಘರ್ಷಗಳನ್ನು ಸ್ಪಷ್ಟಗೊಳಿಸಿಕೊಳ್ಳಲಾಗುವುದು. ಕನ್ನಡ ವರ್ಣಮಾಲೆಯಿಂದ ಭಾಷೆಯನ್ನು ನೋಡುವ ದೃಷ್ಟಿಕೋನದವರೆಗೆ ತಿಕ್ಕಾಟಗಳು ಇದ್ದೇ ಇವೆ. ಕನ್ನಡ ವರ್ಣಮಾಲೆಯಲ್ಲಿ ಋ ಲಿಪಿಯು ಇರಬೇಕೆ ಅಥವಾ ಬೇಡವೇ ಎಂಬ ಪ್ರಶ್ನೆಯೊಂದು ಅಥವಾ ಇಂತಹ ಕೆಲವು ಸಂಗತಿಗಳು ತೀವ್ರವಾದ ವಿವಾದಗಳಿಗೆ ಕಾರಣವಾಗಿದೆ. ಕೆಲವರು ಮಕ್ಕಳು ಕಲಿಯುವ ವರ್ಣಮಾಲೆಯಲ್ಲಿ ಈ ಸ್ವರ ಲಿಪಿ ಉಳಿಸಿಕೊಳ್ಳುವ ಅಗತ್ಯವಿಲ್ಲ ಎಂದು ಹೇಳುತ್ತಿದ್ದಾರೆ. ಸಾಂಪ್ರದಾಯಿಕ ಮನಸ್ಸಿನವರು ಪರಂಪರೆ ಮತ್ತು ಸಂಸ್ಕೃತಿಯನ್ನು ಶಾಸ್ತ್ರೀಯವಾಗಿ ಆರಾಧಿಸುವವರು ಇಂತಹ ಲಿಪಿ ಚಿಹ್ನೆ ಮತ್ತು ವ್ಯಾಕರಣದ ವಿಚಾರದಲ್ಲಿ ಬದಲಿಸುವ ಯಾವ ಯೋಚನೆಯನ್ನೂ ಒಪ್ಪುವುದಿಲ್ಲ. ಅಷ್ಟೇ ಅಲ್ಲ ಅಂತಹ ಯೋಚನೆ ಮಾಡುವವರು ಕನ್ನಡ ದ್ರೋಹಿಗಳು, ಕೊಲೆಗಡುಕರು ಎಂದು ದೂಷಿಸುತ್ತಾರೆ. ಕನ್ನಡ ಮಾತನಾಡುವವರು ಬಹುಮಟ್ಟಿಗೆ ಇಂತಹ ಕೆಲವು ವರ್ಣಗಳನ್ನು ಲಿಪಿ ಚಿಹ್ನೆಗಳನ್ನು ಪ್ರತಿನಿಧಿಸುವ ಉಚ್ಚಾರಣೆಯನ್ನು ಅನುಸರಿಸುವುದಿಲ್ಲ. ಅಲ್ಲದೆ ಬರಹದಲ್ಲಿ ಸಹ ಸಂಸ್ಕೃತದ ಮಾದರಿಗೆ ಹತ್ತಿರವಾದ ಕಡೆ ಬಳಕೆಗೆ ತರಲಾಗುತ್ತಿದೆ. ಇಂತಹ ಲಿಪಿ ಚಿಹ್ನೆಗಳನ್ನು ಕೈಬಿಟ್ಟರೆ ಏನೂ ತೊಂದರೆ ಇಲ್ಲ ಎಂಬುದನ್ನು ವೈಜ್ಞಾನಿಕವಾಗಿ ಕೆಲವರು ತಮ್ಮ ವಾದವನ್ನು ಮುಂದಿಡುತ್ತಿದ್ದಾರೆ. ಇಂತಹ ಎರಡೂ ಬಗೆಯ ವಾದ ವಿಚಾರ ವಿಶ್ಲೇಷಣೆ ವಿವರಣೆಗಳನ್ನು ಒಂದು ತಟಸ್ಥನಿಲುವಿನ ಮೂಲಕ ಮುಖಾಮುಖಿಯಾಗುವುದರ ಮೂಲಕ ಇನ್ನಷ್ಟು ವಿವರಗಳನ್ನು ಕಂಡುಕೊಳ್ಳುವುದು. ಇಂತಹ ಸಂಘರ್ಷಗಳಿಗೆ ಅನುಸಂಧಾನ ನಡೆಸುತ್ತಲೇ ಭಾಷಾಧ್ಯಯನದ ತಾತ್ವಿಕತೆಯನ್ನು ಕಂಡುಕೊಳ್ಳುವುದು.

ಈ ಬಗೆಯ ಅಧ್ಯಯನಗಳು ಮಾಹಿತಿಯನ್ನು ಕ್ರೋಢೀಕರಿಸುವ ಚರಿತ್ರೆಯ ಮಾಹಿತಿಯ ಹಂಗಿಗೆ ಒಳಗಾಗುವ ಸಾಧ್ಯತೆ ಇರುತ್ತದೆ. ಈ ಹಂಗಿನ ಅರಮನೆಯನ್ನು ಆಯ್ಕೆ ಮಾಡಿಕೊಂಡ ಕೃತಿಗಳ ತಾತ್ತ್ವಿಕತೆಯ ಮೂಲಕ ಅವುಗಳ ಅನನ್ಯತೆಯನ್ನು ವಿಶ್ಲೇಷಣಾತ್ಮಕ ವಿಧಾನದಲ್ಲಿ ಮೀರಲಾಗುವುದು.

ಈ ಅಧ್ಯಯನದಲ್ಲಿ ಮಾಡಿಕೊಳ್ಳುವ ಪರಿಕಲ್ಪನಾತ್ಮಕ ಘಟಕಗಳು, ಅಧ್ಯಯನದ ಅನುಕೂಲತೆಗಾಗಿ ರೂಪಿಸಿಕೊಂಡ ತಾತ್ಕಾಲಿಕ ವಿಭಾಗಗಳಷ್ಟೇ ಆಗಿರುತ್ತವೆ. ಅಧ್ಯಯನದಲ್ಲಿ ಅವುಗಳಿಗೆ ಚಾರಿತ್ರಿಕ ಹೆಣಿಗೆಯು ಒಂದರೊಳಗೊಂದು ಬೆಸೆದುಕೊಂಡಿರುವಂತೆ, ಪ್ರತಿ ಘಟಕದೊಳಗೂ ಒಂದರೊಳಗೊಂದು ಬೆಸೆದು ಕೊಂಡಿರುತ್ತದೆ. ಭಾಷಾಧ್ಯಯನಕಾರರ ಅಧ್ಯಯನವನ್ನು, ಚಿಂತನೆಯನ್ನು ತೌಲನಿಕವಾಗಿ ವಿಶ್ಲೇಷಣೆಗೆ ಒಳಗುಮಾಡುವ ಉದ್ದೇಶವಿದ್ದಾಗ, ಅವರ ನಿಲುವುಗಳನ್ನು ವಿಶಿಷ್ಟತೆಯನ್ನು ಅಥವಾ ಅಸ್ಮಿತೆಯನ್ನು ಬಿಂಬಿಸಲು ಪ್ರಯತ್ನಿಸಲಾಗುವುದು. ಅಂದರೆ ಸಾಧ್ಯವಾದ ಕಡೆಯಲ್ಲೆಲ್ಲ ತೌಲನಿಕ ವಿಧಾನವನ್ನೂ ಅನುಸರಿಸಲಾಗುವುದು.

ಅಧ್ಯಯನಕ್ಕೆ ತೆಗೆದುಕೊಳ್ಳುವ ಕೃತಿಗಳು ಪೂರ್ಣವಾಗಿ ಭಾಷಾಧ್ಯಯನವನ್ನು ಮತ್ತು ಭಾಷಾಧ್ಯಯನವನ್ನು ಮಾತ್ರ ಒಳಗೊಳ್ಳದೆ ಇರಬಹುದು. ಅವುಗಳ ಆಂತರ್ಯದಲ್ಲಿ ಭಾಷಾಧ್ಯಯನದ ಎಳೆಗಳು ಕೆಲಸ ಮಾಡಿರುವ ಸಾಧ್ಯತೆಯನ್ನು ತಳ್ಳಿ ಹಾಕಲಾಗದು. ಅಂತಹ ಚಿಂತನೆಗಳನ್ನು ಅಧ್ಯಯನದ ಮೂಲ ಶಿಸ್ತಿಗೆ ಮತ್ತು ತರ್ಕದ ಹರಿಯುವಿಕೆಗೆ ತೊಡಕಾದಂತೆ ಬಳಸಿಕೊಳ್ಳುವ ಕ್ರಮವನ್ನು ರೂಪಿಸಿಕೊಳ್ಳಲಾಗುವುದು. ಅಂದರೆ ಪೂರಕ ಮಾಹಿತಿಯಾಗಿ ಪರಿಗಣಿಸಲಾಗುವುದು.

ಅವಸರದ ತೀರ್ಮಾನಗಳಿಗೆ ಹೋಗದೆ, ಚಾರಿತ್ರಿಕ ಸಂದರ್ಭದಲ್ಲಿ ನಿರ್ದಿಷ್ಟ ಚಿಂತನೆ ಹುಟ್ಟಲು ಕಾರಣ ಮತ್ತು ಅದರ ಪರಿಣಾಮಗಳ ಬಹುಮುಖವನ್ನು ಪರಿಶೀಲನೆ ಮಾಡುವ ವಿಧಾನ ರೂಪಿಸಿಕೊಳ್ಳಲಾಗುವುದು. ಕನ್ನಡದ ಕೇಂದ್ರದಲ್ಲಿದ್ದು, ಕನ್ನಡ ಭಾಷೆಯ ಮೇಲೆ ಬೀರಿರಬಹುದಾದ ಭಾಷೆ ಮತ್ತು ಸಿದ್ಧಾಂತಗಳನ್ನು ವಿಶ್ಲೇಷಿಸುತ್ತ ಕನ್ನಡದ ವಿಶಿಷ್ಟತೆ ಮತ್ತು ಇವತ್ತೂ ಎದ್ದಿರುವ ಹಲವು ವಿವಾದಗಳ ಕಾರಣವನ್ನು ತಿಳಿಯಲು ಯತ್ನಿಸಲಾಗುವುದು.

**ಅಡಿ ಟಿಪ್ಪಣಿ**

೧. ನಾರಾಯಣ ಕೆ. ವಿ. ಕನ್ನಡ ಜಗತ್ತು : ಅರ್ಧಶತಮಾನ ಪುಟ – ೨೯೦

# ಅಧ್ಯಾಯ : ೨

# ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

**ಪೀಠಿಕೆ :**

ಸಾಹಿತ್ಯದಲ್ಲಿ ಹಲವು ಬಗೆಯ ಚಿಂತನೆಯ ದಾರಿಗಳು ತೆರೆದುಕೊಳ್ಳುತ್ತಿರುವುದು ಸಾಮಾನ್ಯ. 'ಹರಿಯುವ ನದಿಗೆ ಮೈಯೆಲ್ಲಾ ಕಾಲು' ಎನ್ನುವ ಅಲ್ಲಮನ ಮಾತಿನ ಹಾಗೆ. ಆದರೆ ಹಾಗೆ ಕಾಣಿಸಿಕೊಂಡ ದಾರಿಗಳು ಕೆಲವು ಹಲವರ ನಡಿಗೆಗೆ ದಾರಿಯಾಗಿ ಅದೊಂದು ಹೆಜ್ಜೆ ಹಾಕುತ್ತದೆ. ಸಾಹಿತ್ಯದ ಚಿಂತನೆಯಾಗಿ, ಇಂತಹದಲ್ಲದೆ ಹಲವು ದಾರಿಗಳು ಆಗಾಗ ಕಾಣಿಸಿಕೊಂಡು ಮರೆಯಾಗಿರಲೂಬಹುದು ಅಥವಾ ಯಾರೂ ನಡೆಯದೆ ದಾರಿಯು ಮುಚ್ಚಿ ಹೋಗಿರಲು ಉಂಟು. ಉದಾಹರಣೆಗೆ : ಗೋವಿಂದ ಪೈಗಳು ಕನ್ನಡ ಕಾವ್ಯದಲ್ಲಿ ಪಟ್ಟಭದ್ರವಾಗಿದ್ದ ಪ್ರಾಸವನ್ನು ಬಿಟ್ಟದ್ದು, ನವೋದಯ, ನವ್ಯ, ದಲಿತ ಬಂಡಾಯ, ಹಲವು ಚಿಂತನೆ ಧಾರೆಗಳು ಕಾಣಿಸಿಕೊಂಡು ಬಂದುದು. ಇವು ಹಲವರ ನಡೆಗಳಾದದ್ದು ಇದೆ. ಹಾಗೆ ಪ್ರಗತಿಶೀಲದಂತಹ ಚಿಂತನ ನೆಲೆ ಬಹಳ ಬೇಗನೆ ಮಸುಕಾಗಿರುವುದು ಕಾಣಬಹುದಾಗಿದೆ. ಅದೇನೆ ಇರಲಿ ಹೀಗೆ ನಡೆದ ಸಾಹಿತ್ಯಕ ಚಿಂತನೆಗಳನ್ನು ಕುರಿತು ಹಲವು ಅಧ್ಯಯನಗಳೋ ಅಥವಾ ಎಲ್ಲವೂ ಒಳಗೊಂಡ ಮಾಲೆಯ ಬಗೆಯ ಸಂಪಾದಿತ ಕೃತಿಗಳೋ ಕಾಣಿಸಿಕೊಂಡು ಚಾರಿತ್ರಿಕವಾದ ಇಂತಹವುಗಳ ಮೇಲೆ ಸರಣಿಯೋಪಾದಿಯಲ್ಲಿ ಬೆಳಕು ಚೆಲ್ಲುವುದಿದೆ. ಸಾಹಿತ್ಯದ ಆಸಕ್ತರಿಗೆ ಅವು ಲಭ್ಯವಾಗುವಂತೆ ಒಂದು ದರ್ಶನವನ್ನು ಕೊಡಲಾಗುತ್ತದೆ. ಕಾಲಕಾಲಕ್ಕೆ ಹಿಂದಿನ ಹೆಜ್ಜೆಯ ಗುರುತುಗಳನ್ನು ಕಟ್ಟಿಕೊಳ್ಳುವ ಹಲವು ಕಾರ್ಯಗಳು ನಡೆದಿವೆ. ಶತಮಾನದ ವಿಮರ್ಶೆ, ಶತಮಾನದ ಸಂಶೋಧನೆ......ಇಂತಹ ಬಗೆಯ ಅವಲೋಕನ ಇತ್ಯಾದಿ ಹಿನ್ನೋಟಗಳು ಕಾಣಿಸಿಕೊಂಡದ್ದು ಇದೆ. ಕರ್ನಾಟಕ ಸಾಹಿತ್ಯ ಅಕಾಡೆಮಿಯ ಈ ಕೃತಿಗಳು ಅಂತಹ ನಿದರ್ಶನಗಳಾಗಿವೆ. ಇವಲ್ಲದೆ ಹಲವು ಚರಿತ್ರೆಯ ಮಾದರಿಯ ಕೃತಿಗಳು ರಚನೆಯಾಗಿವೆ. ಆದರೆ ಕನ್ನಡ ಭಾಷಾಧ್ಯಯನ ಕ್ಷೇತ್ರವನ್ನು ಗಮನಿಸಿದರೆ ಇಂತಹ ಪ್ರಯತ್ನ ನಡೆದಿಲ್ಲ. ಹೀಗೆ ಹೇಳಿದಾಗ ಭಾಷಾಧ್ಯಯನವೇ ನಡೆದಿಲ್ಲವೆಂದು ಅರ್ಥವಲ್ಲ. ಭಾಷೆಯ ಹುಟ್ಟಿನೊಂದಿಗೆ ಭಾಷೆಯ ಕುರಿತ ಚಿಂತನೆಯೂ ಹುಟ್ಟಿದೆ ಎನ್ನುವುದರಲ್ಲಿ ಅನುಮಾನವಿಲ್ಲ. ಮಾನವ ವಿಕಾಸವಾದಂತೆ, ಸಂಸ್ಕೃತಿಯ ಸ್ಪಂದನದಂತೆ ಭಾಷೆಯು ಸಹ ಪ್ರಮುಖವಾಗಿ

ತನ್ನೊಳಗೂ ಬದಲಾವಣೆಗಳನ್ನು ವೈಜ್ಞಾನಿಕವಾಗಿ ರೂಪಿಸಿಕೊಂಡಿರುತ್ತದೆ. ಹಾಗೆ ರೂಪಿಸಿಕೊಂಡಿರಲಿಕ್ಕೆ ಮನುಷ್ಯನ ಒಟ್ಟು ವ್ಯವಹಾರ ಬದುಕಿನ ಬಗೆಯೇ ಕಾರಣವಾಗಿರುತ್ತದೆ. ಇಂತಹದರಲ್ಲಿ ಭಾಷಿಕ ಬೆಳವಣಿಗೆಯ ಚಿಂತನೆಯ ನೆಲೆಯು ಒಂದು ಬಗೆಯಾದರೆ, ಆ ಭಾಷೆಯ ಸರ್ವತೋಮುಖವಾಗಿ ಚಿಂತಿಸಿದ್ದು ಇನ್ನೊಂದು ನೆಲೆ ಅಥವಾ ಇದನ್ನು ಹೀಗೂ ಹೇಳಬಹುದು. ಮೊದಲನೆಯದು ಒಂದು ಕಾಡಿನ ಗಿಡ, ಮರ, ಹೂವು, ಕಲ್ಲು, ಹಳ್ಳ ಮುಂತಾಗಿ ಪ್ರತಿಯೊಂದನ್ನೂ ಅಧ್ಯಯನ ಮಾಡುವ ಸೂಕ್ಷ್ಮ ನೆಲೆಯದ್ದಾದರೆ, ಎರಡನೆಯದು ಅದೇ ಕಾಡನ್ನು ದೂರನಿಂತು ವೀಕ್ಷಿಸಿ ಮಂಡಿಸುವ ಚಿಂತನೆಗಳು. ಈ ಸೂಕ್ಷ್ಮ ಮತ್ತು ಸಮಗ್ರ ನೆಲೆಯ ಚಿಂತನೆಗಳು ಕನ್ನಡ ಭಾಷೆಯ ಒಳಗಿನ ಒತ್ತಡಗಳು ಮಾತ್ರವಾಗಿರುವುದಿಲ್ಲ. ಆ ಭಾಷೆಯನ್ನು ಮಾತನಾಡುವ, ಜನರ ವ್ಯಾಪಾರ – ವ್ಯವಹಾರ, ಬದುಕಿನ ಒಟ್ಟು ಚಟುವಟಿಕೆಯೇ ಕಾರಣವಾಗಿರುತ್ತದೆ. ಈ ಮಾತಿಗೆ ಕವಿರಾಜಮಾರ್ಗಕಾರನನ್ನು ನೆನಪಿಸಿಕೊಳ್ಳಬಹುದಾಗಿದೆ. ಕನ್ನಡಿಗರ ಕಾವ್ಯಪ್ರಜ್ಞೆ ಮತ್ತು ಕನ್ನಡ ಭಾಷೆಯ ಪ್ರಭೇದಗಳನ್ನು ಆತ ಹೇಳಿರುವುದು. ಹೀಗೆ ಕವಿರಾಜಮಾರ್ಗ ಅಥವಾ ಅದಕ್ಕೂ ಪೂರ್ವದಿಂದ ಇವತ್ತಿನವರೆಗೆ ಕನ್ನಡ ಭಾಷೆಯನ್ನು ಕುರಿತು ಕಾವ್ಯದ ಭಾಗವಾಗಿಯೋ, ವ್ಯಾಕರಣ ಮುಖೇನವಾಗಿಯೋ, ಭಾಷಾಧ್ಯಯನ ಮಾದರಿಯಾಗಿಯೋ ಭಾಷೆಯನ್ನು ಕುರಿತು ನಡೆದಿದ್ದು ಇದೆ. ಹೀಗೆ ನಡೆದ ಅಧ್ಯಯನಗಳನ್ನು ಕುರಿತು ಈ ಭಾಗದಲ್ಲಿ ಸಂಕ್ಷಿಪ್ತವಾಗಿ ಸಮೀಕ್ಷಿಸಲಾಗುತ್ತಿದೆ.

**ಭಾರತೀಯ ವ್ಯಾಕರಣ ನಡೆದು ಬಂದ ದಾರಿ**

ಕನ್ನಡ ಭಾಷಾಧ್ಯಯನವನ್ನು ಕುರಿತು ಹೇಳುವಾಗ, ಅದರ ಘಟ್ಟಗಳ ಬಗೆಯಲ್ಲಿ ನಡೆದು ಬಂದ ದಾರಿಯ ಕಡೆ ನೋಡಬೇಕಾಗುತ್ತದೆ. ಅಂದರೆ ಇವತ್ತಿನ ಭಾಷಾಧ್ಯಯನ ಮಾದರಿ, ಭಾಷಾವಿಜ್ಞಾನ ಮಾದರಿಯ ಅಧ್ಯಯನ, ಪಾಶ್ಚಾತ್ಯ ಚಿಂತನೆಯ ಮಾದರಿ, ಕ್ರೈಸ್ತ ಮಿಷನರಿ ಮತ್ತು ಕೆಲ ವಿದ್ವಾಂಸರು ಕನ್ನಡ ಕಲಿಕೆಗಾಗಿ ರಚಿಸಲ್ಪಟ್ಟಂತಹ ಸರಳ ವ್ಯಾಕರಣ ಮಾದರಿ, ನಿಘಂಟು ರಚನೆ, ಹಳಗನ್ನಡ ಅಥವಾ ಸಂಸ್ಕೃತ ಪ್ರಭಾವದ ನಲೆಯಲ್ಲಿ ರಚಿಸಲ್ಪಟ್ಟ ಹಳಗನ್ನಡ ವ್ಯಾಕರಣಗಳು. ಹಾಗೇನೆ ಕನ್ನಡ ಭಾಷೆ ಮತ್ತು ವ್ಯಾಕರಣಗಳ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿರುವುದರಿಂದ ಸಂಸ್ಕೃತ ವ್ಯಾಕರಣ ಸ್ವರೂಪವನ್ನು ತಿಳಿದುಕೊಳ್ಳುವುದು ಕೂಡ ಅಷ್ಟೇ ಮುಖ್ಯವಾಗುತ್ತದೆ. ಅಂದರೆ ಸಂಸ್ಕೃತ ವ್ಯಾಕರಣ ನಡೆದು ಬಂದ ಬಗೆಯನ್ನು ತಿಳಿದುಕೊಳ್ಳವುದೂ ಮುಖ್ಯವೇ. ಸಾಹಿತ್ಯದ ವಿಚಾರದಲ್ಲಿ ಭಾರತೀಯ ಕಾವ್ಯಮೀಮಾಂಸೆ ಎಂದರೆ ಕನ್ನಡ ಕಾವ್ಯಮೀಮಾಂಸೆಯು ಸೇರಿದಂತೆ ಇತರೆ

ಭಾರತೀಯ ಭಾಷೆಗಳ ವಿಚಾರವೂ ಒಳಗೊಂಡುದಾಗಿರುತ್ತಿತ್ತು. ಭಾರತೀಯ ಕಾವ್ಯಮೀಮಾಂಸೆ ಎಂದರೆ ಅದು ಸಂಸ್ಕೃತ ಕಾವ್ಯಮೀಮಾಂಸೆ ಮಾತ್ರವೇ ಆಗಿರುತ್ತಿತ್ತು. ಹಾಗೇನೆ ಭಾಷೆಯ ವಿಚಾರದಲ್ಲೂ ಈ ಮಾತು ಅಷ್ಟೇ ಸರಿಯಾದುದಾಗಿತ್ತು. ಈ ಮಾತಿಗೆ ಕನ್ನಡದ ಆರಂಭದ ವ್ಯಾಕರಣಗಳನ್ನು ಗಮನಿಸಬಹುದಾಗಿದೆ. ಈ ಕುರಿತು ಮುಂದಿನ ಅಧ್ಯಾಯದಲ್ಲಿ ಚರ್ಚಿಸಿ ಅದರ ಹಿಂದಿನ ತಾತ್ವಿಕ ಕಾರಣಗಳನ್ನು ತಿಳಿದುಕೊಳ್ಳುವುದರಿಂದ ಆ ಕುರಿತು ಇಲ್ಲಿ ಹೆಚ್ಚು ಚರ್ಚೆಗೆ ಹೋಗುವುದಿಲ್ಲ. ಭಾಷೆಯನ್ನು ಕುರಿತು ನಡೆದ ಚಿಂತನೆಗಳಲ್ಲಿ ಗ್ರೀಕರನ್ನು ಹೊರತುಪಡಿಸಿದರೆ ಭಾರತೀಯರೇ ಅತಿ ಪ್ರಾಚೀನ ಕಾಲದಿಂದಲೂ ಭಾಷಾಧ್ಯಯನ ನಡೆಸಿರುವುದು ಕಾಣಬರುತ್ತದೆ. ಅಂದರೆ ವೇದಗಳಲ್ಲೇ ವ್ಯಾಕರಣ ಶಾಸ್ತ್ರದ ಪ್ರಜ್ಞೆ ಕಾಣಿಸಿಕೊಳ್ಳುತ್ತದೆ. ಅದು ವೇದಾಂಗಗಳಲ್ಲಿ ವ್ಯಾಕರಣ ಮತ್ತು ಛಂದಸ್ಸು ಕೂಡ ಆಗಿತ್ತು. ಭಾರತೀಯ ಹಲವು ಲೌಕಿಕ ಶಾಸ್ತ್ರ ಶಾಖೆಗಳು ವೇದಗಳಿಂದಲೇ ಜನಿಸಿದವು ಅಥವಾ ಅನೇಕ ಲೌಕಿಕ ಶಾಸ್ತ್ರಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಭಾರತೀಯ ಭಾಷಾಧ್ಯಯನದ ಪರಂಪರೆಯಲ್ಲಿ ಗುರುತಿಸಲಾಗುತ್ತಿದೆ. ಅಲ್ಲದೆ ಇದಕ್ಕೂ ಮೊದಲು ಬ್ರಾಹ್ಮಣ – ಅರಣ್ಯಕಗಳಲ್ಲಿನ ಶಾಸ್ತ್ರದ ಉಗಮವನ್ನು ಕಾಣಬಹುದಾಗಿದೆ. ಅರಣ್ಯಕಗಳು ಧ್ಯಾನ ಪರವಾದವು. ಮಂತ್ರ ಮತ್ತು ವಿಧಿಗಳನ್ನೇ ಧ್ಯಾನಕ್ಕೆ ಬಳಸುವಲ್ಲಿ ಮಂತ್ರದ ರಹಸ್ಯ ತಿಳಿಯುವ ಪ್ರಯತ್ನವಿದೆ. ಅದಕ್ಕಾಗಿ ಆ ಹೊತ್ತಿಗೆ ಬಿಡಿ ಬಿಡಿಯಾಗಿ ಪದಗಳನ್ನು ನುಡಿಯುವ ಪದಪಾಠ ಮೌಖಿಕ ಪರಂಪರೆಯಲ್ಲಿ ಪ್ರಮುಖವಾಯಿತು. ಪದಪಾಠ, ಸಂಧಿ ವಿಭಾಗ, ಸಮಾಸ ವಿಶ್ಲೇಷಣೆ ಉಪಸರ್ಗವನ್ನು ಗುರುತಿಸುವುದು ಮುಂತಾದ ಸ್ಪಷ್ಟ ನಿಯಮಗಳನ್ನು ಕುರಿತು ಐತರೇಯ ಅರಣ್ಯಕದಲ್ಲಾಗಲೇ ಶೌಕಲ್ಯ, ಮಾಂಡೂಕೇಯ ಮುಂತಾದ ವೈಯಾಕರಣರ ಹೆಸರು ಉಲ್ಲೇಖಿತವಾಗಿದೆ.

ಭಾರತೀಯ ಪ್ರಾಚೀನ ವಿದ್ವಾಂಸರು ಭಾಷೆಗಳ ಅಧ್ಯಯನವನ್ನು ವ್ಯಾಕರಣದ ಭಾಗವಾಗಿಯೇ ಅಥವಾ ವ್ಯಾಕರಣವಾಗಿಯೇ ಅಧ್ಯಯನ ಆರಂಭಿಸಿದರು. ಈಗಾಗಲೇ ಹೇಳಿದಂತೆ ಪುರಾಣ, ವೇದ, (ಮೊದಲ ವೇದವಾದ ಋಗ್ವೇದದಲ್ಲೇ ಕಾಣಬಹುದಾಗಿದೆ) ಅರಣ್ಯಕಗಳಲ್ಲಿ ಭಾಷಾಧ್ಯಯನದ ಅಂಶಗಳು ಸ್ಪಷ್ಟ. ಅಂದರೆ ವೇದಗಳ ಅಧ್ಯಯನದ ಫಲವಾಗಿ ಸಂಸ್ಕೃತ ವ್ಯಾಕರಣ ಹುಟ್ಟಿಕೊಂಡಿತು. ಹೀಗಾಗಿ ಸಂಸ್ಕೃತ ವ್ಯಾಕರಣದ ಇತಿಹಾಸವು ವೇದಗಳಷ್ಟು ಹಳೆಯದು. ಋಗ್ವೇದದ ಏಳು ಮತ್ತು ಹತ್ತನೆಯ ಅಧ್ಯಾಯಗಳಲ್ಲಿ ಭಾಷಾ ಅಧ್ಯಯನದ ವಿಚಾರ ಬರುತ್ತದೆ. ಮತ್ತು ಋಗ್ವೇದದ ಏಳನೆಯ ಮಂಡಲದಲ್ಲಿ ಭಾಷೆ ದೇವರ ಕೊಡುಗೆ ಎಂಬ ಕಲ್ಪನೆಯಿದೆ. ಇದನ್ನು ಗಮನಿಸಿದರೆ ಅವಾಗಲೇ ಭಾಷೆಯ ಅಧ್ಯಯನಕ್ಕೆ ಮೊದಲಾಗಿರಲೇಬೇಕೆಂಬ

ಅಂಶ ಸ್ಪಷ್ಟವಾಗುತ್ತದೆ. ಪ್ರಾಚೀನ ಭಾರತೀಯ ವಿದ್ವಾಂಸರು ವೇದಗಳ ಪಾಠ ಹಾಗೂ ಉಚ್ಛಾರಣೆಗಳನ್ನು ಶುದ್ಧವಾಗಿಡಲು ಕ್ರಮಪಾಠ, ಪದಪಾಠ, ಜಟಾಪಾಠ, ಘನಪಾಠ – ಇವೇ ಮೊದಲಾದ ವಿಭಾಗವನ್ನು ಅನುಸರಿಸಿದರು. ಮುಖ್ಯವಾಗಿ ಇಲ್ಲಿ ಇನ್ನೊಂದು ಅಂಶ ಸ್ಪಷ್ಟಪಡಿಸುವುದೆಂದರೆ ವೇದಗಳ ಕುರಿತ ಉಚ್ಛಾರಣೆ ಹೇಗೋಗೋ ಉಚ್ಛರಿಸದೆ ಹೀಗೆ ಸ್ಪಟಿಸಬೇಕೆಂದು ನಿಯಮಬದ್ಧತೆ ಅಥವಾ ಶುದ್ಧತೆಯ ನೆಲೆಗಾಗಿ ಆರಂಭಗೊಂಡಿತು ಎಂಬುದು ಸಹ ಮುಖ್ಯವಾದ ಸಂಗತಿಯೇ.

ವೇದ ಪುರಾಣ ಪ್ರಾತಿಶಾಖ್ಯೆ ಮುಂತಾದವುಗಳನ್ನು ದೈವಿಕನೆಲೆಯಲ್ಲಿ ಕಾಣಲಾಗುತ್ತಿತ್ತು. ಮನುಷ್ಯ ದೈವದ ನಿಯಮಕ್ಕೆ ಒಳಪಡಬೇಕು. ದೈವತ್ವವನ್ನು ತನ್ನ ಅನುಕೂಲಕ್ಕೆ ಬದಲಾಯಿಸಕೂಡದು ಎಂಬುದು ಶಾಸನವಾಗಿತ್ತು. ಇದು ಮುಂದುವರೆದು ಸಂಸ್ಕೃತ ಭಾಷೆಗೆ ಅನ್ವಯಿಸುವುದು ಅಥವಾ ಸಂಸ್ಕೃತ ಭಾಷೆ ಅಂತಹ ದೇವಭಾಷೆ ಎನಿಸಿಕೊಂಡಿತು. ಈ ಸಂಗತಿಯನ್ನು ಹೀಗೆ ಅರ್ಥೈಸಿಕೊಳ್ಳಬಹುದು – ಕನ್ನಡ ಭಾಷೆಗೆ ಕ್ಲಾಸಿಕಲ್ ಅಥವಾ ಶಾಸ್ತ್ರೀಯ ಸ್ಥಾನ – ಮಾನ ಕುರಿತು ಇತ್ತೀಚೆಗೆ ಬಹುಚರ್ಚಿತ ಸಂಗತಿ. ಆ ಎರಡು ಪದಗಳನ್ನು ಕುರಿತು ಸಹ ವಿದ್ವಾಂಸರಲ್ಲಿ ಹಲವು ತರಂಗಗಳು ಎದ್ದಿವೆ. “ಶಾಸ್ತ್ರೀಯ ಎಂಬ ಪದವನ್ನು ಕ್ಲಾಸಿಕಲ್‌ಗೆ ಮೊದಲು ಬಳಸಿದ್ದು ಕೇಂದ್ರ ಸರ್ಕಾರ. ಅದು ತನ್ನ ರಾಜಪತ್ರದಲ್ಲಿ ಕ್ಲಾಸಿಕಲ್ ಭಾಷೆಯ ಬಗ್ಗೆ ಪ್ರಕಟಿಸುವಾಗ ಹಿಂದಿ ಅನುವಾದದಲ್ಲಿ ‘ಶಾಸ್ತ್ರೀಯ ಭಾಷಾ’ ಎಂಬುದನ್ನು ಬಳಸಿದೆ”[೧]. ಕ್ಲಾಸಿಕಲ್‌ಗೆ ‘ಶಾಸ್ತ್ರೀಯ’ ಎಂದು ಬಳಸಲು ಕಾರಣ ಕ್ಲಾಸಿಕಲ್ ಮ್ಯೂಸಿಕ್ ಮತ್ತು ಕ್ಲಾಸಿಕಲ್ ಡಾನ್ಸ್’ ಗಳಿಗೆ ಶಾಸ್ತ್ರೀಯ ಸಂಗೀತ ಮತ್ತು ಶಾಸ್ತ್ರೀಯ ನೃತ್ಯ ಎಂಬ ಪದಗಳು ಬಳಕೆಯಲ್ಲಿರುವುದು. ಅಲ್ಲಿ ಬಳಸುವುದಕ್ಕೆ ಕಾರಣವಿದೆ. ಏಕೆಂದರೆ ಸಂಗೀತ ಮತ್ತು ನೃತ್ಯ; ಸಂಗೀತ ಶಾಸ್ತ್ರವನ್ನು, ಮತ್ತು ನಾಟ್ಯಶಾಸ್ತ್ರವನ್ನು ಅನುಸರಿಸಿ ಮಾಡುವಂಥವು. ಆದರೆ ಸಾಹಿತ್ಯದ ವಿಷಯದಲ್ಲಿ, ಭಾಷೆಯನ್ನು ಮಾಧ್ಯಮವಾಗಿಸಿಕೊಂಡ ಭಾಷೆಯ ವಿಷಯದಲ್ಲಿ ‘ಶಾಸ್ತ್ರೀಯ’ ಎಂದು ಹೇಳುವ ಹಾಗಿಲ್ಲ. ಏಕೆಂದರೆ ಸಾಹಿತ್ಯವನ್ನು ಅನುಸರಿಸಿ ವ್ಯಾಕರಣ, ಛಂದಸ್ಸು ಮುಂತಾದವು ರೂಪುಗೊಳ್ಳುತ್ತವೆಯೇ ಹೊರತು, ಶಾಸ್ತ್ರವನ್ನು ಅನುಸರಿಸಿ ಸಾಹಿತ್ಯ ರೂಪುಗೊಳ್ಳುವುದಿಲ್ಲ. ಭಾಷೆಯನ್ನೂ ‘ಶಾಸ್ತ್ರೀಯ’ ಎಂದು ಹೇಳುವುದು ಅರ್ಥಹೀನ. ಏಕೆಂದರೆ ಭಾಷೆ ಪ್ರವಾಹಿನಿ ಅದು ಯಾವ ಶಾಸ್ತ್ರವನ್ನೂ ಅನುಸರಿಸುವುದಿಲ್ಲ. ಆದರೆ ಸಂಸ್ಕೃತ ಭಾಷೆಯಲ್ಲಿ ರಚಿತವಾದ ವೇದ, ಶಾಸ್ತ್ರ, ಪುರಾಣ, ಮುಂತಾದವುಗಳು ಹಾಗೂ ಸಂಸ್ಕೃತ ಭಾಷೆಯ ವಿಷಯದಲ್ಲಿ ಭಾರತದ ಹಲವು ಭಾಷೆಗಳಿಗೆ, ಅಷ್ಟೆ ಯಾಕೆ? ಜಗತ್ತಿನ ಭಾಷೆಗಳಿಗೆ ಅನ್ವಯಿಸುವ ನಿಯಮವನ್ನೂ ಪೂರ್ಣವಾಗಿ ಒಪ್ಪಲು

ತಯಾರಿರಲಿಲ್ಲ. ಹಾಗಾಗಿ ದೈವತ್ವದ ನೆಲೆಯಲ್ಲಿ ಸಂಸ್ಕೃತ ಭಾಷೆಯು 'ಪವಿತ್ರ'ವೆನ್ನುವ ಪ್ರಜ್ಞೆಯಲ್ಲಿ ವರ್ಗಕ್ಕೆ ಮೀಸಲುಗೊಂಡಿತು. ನಿಯಮಗಳನ್ನು ರೂಪಿಸಿಕೊಂಡು ಹೀಗೆ ಪಠಿಸಬೇಕು ಅಥವಾ ಪ್ರಭಾವಿಸುವ ಶ್ರೇಷ್ಠ ಭಾಷೆ ಎನ್ನುವ ಮಡಿ – ಮೈಲಿಗೆಯ ನೆಲೆಗೆ ತಲುಪಿದ್ದುದರಿಂದ ಸಂಸ್ಕೃತವು ಜನಸಾಮಾನ್ಯರ ಭಾಷೆಯಾಗಲೇ ಇಲ್ಲ. ಇದು ಭಾಷೆಯ ಹೊರ ಮಗ್ಗಲು ಮಾತ್ರವಲ್ಲ ರಚನೆಯ ದೃಷ್ಟಿಯಿಂದಲೂ ಇದೊಂದು ಕಠಿಣ ನಿಯಮಗಳಿಗೆ ಸೀಮಿತಗೊಂಡಿತು. ಅಥವಾ ಅತ್ಯಂತ ಪವಿತ್ರಗೊಂಡಿತು. ಅಂತಹ ಭಾವನೆಯಲ್ಲಿಯೇ ಸಂಸ್ಕೃತವನ್ನು ಕುರಿತು ಅಧ್ಯಯನಗಳು ಮೊದಲಾದವು.

ವೇದಗಳ ಪಾಠ ಹಾಗೂ ಉಚ್ಚಾರಣೆಗಳನ್ನು ಶುದ್ಧವಾಗಿಡುವ ಸಲುವಾಗಿ ಕಾಣಿಸಿಕೊಂಡ ನಿಯಮಗಳಲ್ಲಿ ಪದಪಾಠ ಒಂದು.

೧. ಪದಪಾಠದಲ್ಲಿ ಒಂದೊಂದು ಪದವನ್ನು ಎಳೆ ಎಳೆಯಾಗಿ ಪ್ರತ್ಯೇಕವಾಗಿ ಬಿಡಿಸಿತೋರಿಸುತ್ತಿದ್ದರು. ಸಮಾಸಗಳನ್ನು ಬಿಡಿಸಿ ವ್ಯಾಖ್ಯಾನಿಸುತ್ತಿದ್ದರು. ಹೀಗೆಲ್ಲ ಮಾಡಲು ಅವರು ಭಾಷೆಯನ್ನು ಕುರಿತು ಆಲೋಚಿಸಲೇಬೇಕಿತ್ತು. ವೇದಗಳ ಅನಂತರದ ಭಾಷೆಯನ್ನು ಕುರಿತು ಕಾಣಿಸಿಕೊಳ್ಳುವ ಚಿಂತನೆಗಳು ಪ್ರಾತಿಶಾಖ್ಯಗಳಲ್ಲಿ. ವೇದಗಳ ವಾಚನ ವಿಧಾನ ಹಾಗೂ ಭಾಷೆಯ ಬಗೆಗಿನ ಅಮೂಲ್ಯಾಂಶಗಳನ್ನು ಒಳಗೊಂಡಿದ್ದು ಪ್ರಾತಿಶಾಖ್ಯೆಗಳು.

೨. ಪ್ರಾತಿಶಾಖ್ಯೆಗಳಲ್ಲಿ ವೇದೋಚ್ಚಾರಣೆಯ ನಿಯಮ ಹಾಗೂ ವ್ಯಾಕರಣ ವಿಶೇಷಗಳ ಬಗೆಗಿನ ಸೂಚನೆಗಳ ಗ್ರಹಿಕೆಯಿಂದ ಮುಂದುವರೆದು ವಿವಿಧ ಕಾಲದ ವಿದ್ವಾಂಸರ ಪ್ರಯತ್ನದ ಕೊಡುಗೆಯ ಫಲಿತವಾಗಿ ಪಾಣಿನಿಯ ಅಷ್ಟಾಧ್ಯಾಯ ರೂಪಿತಗೊಂಡು ವ್ಯಾಕರಣಕ್ಕೆ ನಾಂದಿಯಾಗಿ ಪೂರ್ಣತ್ವ ಲಭಿಸಿತು.

೩. ಕ್ರಿ. ಪೂ. ೮ನೇ ಶತಮಾನದಲ್ಲಿದ್ದ ಎನ್ನಲಾದ ಯಾಸ್ಕ ಭಾಷೆಯ ಬಗ್ಗೆ ಹಲವು ಸಂಗತಿಯಗಳನ್ನು ತಿಳಿಸಿಕೊಡುತ್ತಾನೆ. ಈತ ನಿಘಂಟುಕಾರನೂ ಆಗಿದ್ದಾನೆ. ವೇದಗಳಲ್ಲಿ ಬರುವ ಪದಗಳಿಗೆ ನಿಷ್ಪತ್ತಿಯನ್ನು ಹೇಳಿದ್ದಾನೆ.

೪. ಯಾಸ್ಕನ ನಂತರ ಸುಮಾರು ಒಂದು ಶತಮಾನ ಕಳೆದ ಮೇಲೆ ಪಾಣಿನಿ ಪ್ರಸಿದ್ಧ ವೈಯಾಕರಣಿ ಎನಿಸಿಕೊಳ್ಳುತ್ತಾನೆ. ಈತ ತನ್ನ ಕಾಲಕ್ಕೆ ವ್ಯವಹಾರಿಕ ಭಾಷೆಯಾಗಿದ್ದ ಸಂಸ್ಕೃತಕ್ಕೆ ಒಂದು ಪ್ರಸಿದ್ಧ ವ್ಯಾಕರಣ ಕೃತಿಯನ್ನು ರಚಿಸಿದ. ಈತನ ಸುಪ್ರಸಿದ್ಧ ಸಂಸ್ಕೃತ ವ್ಯಾಕರಣ ಕೃತಿ "ಅಷ್ಟಾಧ್ಯಾಯ". ಇದು

ಸುಮಾರು ೪೦೦೦ ಸೂತ್ರಗಳಿಂದ ಕೂಡಿದ ಒಂದು ಬೃಹತ್ ಪ್ರಾಚೀನ ವ್ಯಾಕರಣ ಗ್ರಂಥ. ಅಷ್ಟಾಧ್ಯಾಯ ಸಂಸ್ಕೃತ ವ್ಯಾಕರಣಕ್ಕೂ, ಭಾರತೀಯ ಹಾಗೂ ಕನ್ನಡ ವ್ಯಾಕರಣಗಳ ಮೇಲೆಯೂ ತನ್ನ ಪ್ರಭಾವವನ್ನು ಬೀರಿತು.

ಪಾಣಿನಿಯು ಒಂದು ಭಾಷೆ ಹೇಗೆ ಇರಬೇಕು ಎಂಬ ವಿಷಯದಲ್ಲಿ ಒಲವನ್ನು ಉಳ್ಳವನು ಮಾತ್ರವಲ್ಲ, ಮಾರ್ಗದರ್ಶಕನೂ ಆಗಿದ್ದಾನೆ. ಸ್ವತಃ ಸಂಸ್ಕೃತ ವೈಯಾಕರಣರು, ಭಾಷಾ ಚಿಂತಕರೂ ಪಾಣಿನಿಯ ಅಷ್ಟಾಧ್ಯಾಯ ಅತ್ಯದ್ಭುತ ಎಂದು ಕೊಂಡಾಡಿದ್ದಾರೆ. ಆತನ ನಿಯಮಾತ್ಮಕ ವ್ಯಾಕರಣ ಮಾದರಿಯನ್ನು ಸಂಸ್ಕೃತ ಅಳವಡಿಸಿಕೊಂಡು ಮುಂದುವರೆಸಿತು. ಇದೆಲ್ಲದರ ಪರಿಣಾಮವಾಗಿ ವ್ಯವಹಾರಿಕ ಭಾಷೆಯಾಗಿದ್ದ ಸಂಸ್ಕೃತವು ಕ್ರಮೇಣ ವ್ಯವಹಾರದಲ್ಲಿ ಕಣ್ಮರೆಯಾಗುತ್ತ ಹೋಗಿ ಗ್ರಂಥಸ್ಥ ಭಾಷೆಯಾಗುವ ಲಕ್ಷಣವನ್ನು ತನ್ನಿಂದ ತಾನೇ ಪಡೆದುಕೊಂಡಿತು. ಒಂದು ಭಾಷೆಯ ಮೃತಾವಸ್ಥೆಗೆ ಇಂತಹ ಚಿಂತನೆಗಳ ಕಾಣಿಕೆ ಅಪಾರ.

ಪಾಣಿನಿಯ ತರುವಾಯದ ವ್ಯಾಕರಣಕಾರರೆಲ್ಲ ಆತನ ಮಾರ್ಗವನ್ನೇ ಮುಂದುವರಿಸಿದರು. ಕನ್ನಡ ಸಾಹಿತ್ಯದಲ್ಲಿ ಪಂಪ ಹಾಕಿಕೊಟ್ಟ ದಾರಿಯಲ್ಲಿ ಪೊನ್ನ, ರನ್ನ, ನಾಗಚಂದ್ರ, ಜನ್ನ ಮುಂತಾದವರು ಕನ್ನಡ ಕಾವ್ಯಮಾರ್ಗವನ್ನು ರೂಪಿಸಿದಂತೆ. ಅಂದರೆ ಲೌಕಿಕ – ಅಲೌಕಿಕ ಹಾಗೂ ಮಾರ್ಗ – ದೇಸಿ ಸಮನ್ವಯದಂತೆ. ಇದೊಂದು ರೂಪಿತಗೊಂಡ ರಥವನ್ನು ದೈವಿಕತೆಯ ಭಾವುಕತೆಯಿಂದ ಮೈದುಂಬಿಸಿಕೊಂಡು ಎಳೆಯುವುದಾಗಿರುತ್ತದೆ. ಇದರಾಚೆಗೆ ಇರುವ ನಿಜವನ್ನು ಅರ್ಥಮಾಡಿಕೊಳ್ಳುವ ಸನ್ನಿವೇಶವನ್ನು ಕಳೆದುಕೊಳ್ಳುವುದಾಗಿದೆ. ದೇವಸ್ಥಾನ ಮಂದಿರಗಳಲ್ಲಿ ಮನುಷ್ಯನ ಹಲವು ಚಟುವಟಿಕೆಗಳ ಸ್ಪಂದನೆ ಇರುವುದಿಲ್ಲ. ಅಥವಾ ಅದೊಂದು ಯಾಂತ್ರಿಕ ಬಗೆಯಾದಾಗಿರುತ್ತದೆ. ಯಾಕೆಂದರೆ ಪ್ರಶ್ನಿಸುವ, ಆಲೋಚಿಸುವ ನೆಲೆಗಿಂತ ಒಪ್ಪಿತ ಸಮರ್ಪಣದಲ್ಲಿ ಮುಳುಗಿರುತ್ತಾರೆ. ಹೀಗಾಗಿ ಅದಾಗಲೆ ರೂಪಿತವಾದ ಮಾರ್ಗದಲ್ಲಿ ನಡೆಯುವುದೇ ಒಂದು ಹೆಮ್ಮೆ.

ಕ್ರಿ. ಪೂ. ಸು. ೩೫೦ರಲ್ಲಿದ್ದ ಕಾತ್ಯಾಯನ, ಕ್ರಿ. ಪೂ ಸು. ೧೫೦ರಲ್ಲಿದ್ದ ಪತಂಜಲಿ, ಕ್ರಿ. ಪೂ. ಸು. ೬೫೦ರಲ್ಲಿದ್ದ ವಿಜಯಾದಿತ್ಯ, ಕ್ರಿ. ಶ ಸು ೧೧೦೦ ರಲ್ಲಿದ್ದ ಹರಿದತ್ತ, ಕ್ರಿ. ಪೂ ಸು. ೬೫೦ ರಲ್ಲಿದ್ದ ಭತೃಹರಿ, ಕ್ರಿ. ಶ ಸು. ೧೬೩೦ರಲ್ಲಿದ್ದ ಭಟ್ಟೋಜಿ ಈ ಮುಂತಾದ ವೈಯಾಕರಣರು ಪಾಣಿನಿಯ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದರು. ಇವರೆಲ್ಲರೂ ಆತನ ಸಂಪ್ರದಾಯಕ್ಕೆ ಮತ್ತು ತಮ್ಮ ತಮ್ಮ ಕಾಲಕಾಲಕ್ಕೆ ಭಾಷ್ಯ, ವ್ಯಾಖ್ಯಾನಗಳನ್ನು ಬರೆದು ನಿರಂತರಗೊಳಿಸಿದರು.

ಹೀಗೆ ಸಂಸ್ಕೃತ ವ್ಯಾಕರಣ ಮತ್ತು ಭಾಷೆಯು ನಿಯಮ ಬದ್ಧವಾಗುತ್ತ, ಭಾಷೆಯನ್ನು ಕುರಿತು ಚಿಂತನೆ ನಡೆಸಿದಂತೆ, ಲೋಕದಿಂದ ದೂರವಾಗುವ ಅಥವಾ ಪವಿತ್ರೀಕರಣದ ದೇವ ಭಾಷೆಯ ಸತ್ವವನ್ನು ಹೊಂದಿತ್ತು.

**ಕನ್ನಡ ವ್ಯಾಕರಣ**

ಕನ್ನಡ ಭಾಷಾಧ್ಯಯನವೆಂಬುದು ಒಂದು ಶಿಸ್ತಾಗಿ ರೂಪಿತಗೊಂಡಿದ್ದು ಇಪ್ಪತ್ತನೆಯ ಶತಮಾನದ ಆರಂಭದಲ್ಲಿ. ಇದಕ್ಕೂ ಮೊದಲು ವ್ಯಾಕರಣ ಬಗೆಯಲ್ಲೇ ಭಾಷೆಯನ್ನು ಕುರಿತು ಆಲೋಚಿಸುವ ಕ್ರಮ ಕೂಡ ಇತ್ತು. ಇದಲ್ಲದೆ ಕವಿಗಳು ಕಾವ್ಯದ ಒಡಲಲ್ಲಿಯೇ ನಾಡು ನುಡಿಯನ್ನು ಕುರಿತು ತಮ್ಮ ಕಾಳಜಿಯನ್ನು ವ್ಯಕ್ತಪಡಿಸಿದ್ದಾರೆ. ಆರಂಭದ ಗ್ರಂಥವಾದ ಕವಿರಾಜಮಾರ್ಗದಲ್ಲಿಯೇ ಈ ಕುರಿತು ಕಾಣಬಹುದಾಗಿದೆ. ಒಂದು ಭಾಷೆಯು ಗ್ರಂಥ ಸ್ವರೂಪಕ್ಕಿಂತ ಮೌಖಿಕವಾಗಿಯೇ ತನ್ನ ಜೀವಂತಿಕೆಯನ್ನು ಮೆರೆಯುತ್ತಿರುವ ಕಾಲಘಟ್ಟದಲ್ಲಿ ಲಿಖಿತ ರೂಪ ನೀಡುವುದು ಅಥವಾ ಯಾರಿಗಾಗಿ, ಯಾಕಾಗಿ ಒಂದು ಕೃತಿಯನ್ನು ರಚಿಸುತ್ತಿದ್ದೇನೆ ಎಂಬುದು ಯಾವುದೇ ಬರಹಗಾರರನಿಗೆ ಅತಿ ಮುಖ್ಯವಾದ ಪ್ರಶ್ನೆ. ಆದರೆ ಕವಿರಾಜಮಾರ್ಗಕಾರ ಸೇರಿದಂತೆ ನಮ್ಮ ಹಳೆಗನ್ನಡದ ಹಲವು ಕವಿಗಳಿಗೆ ಬೇರೆಯದೇ ಆದ ಒತ್ತಡಗಳು ಇದ್ದವೆಂದು ಕಾಣುತ್ತದೆ. ಒಬ್ಬ ಲೇಖಕನಿಗೆ ಕಾಡುವ ಪ್ರಶ್ನೆಗಳು ಜನಮುಖಿಯಾಗಿ ಬರುವಂತೆಯೇ, ಜನರನ್ನು ಆಳುತ್ತಿರುವ ರಾಜಮುಖಿಯಾಗಿಯೂ ಬರುವ ಬೇಡಿಕೆ – ಅಥವಾ ಆಜ್ಞೆಗಳೂ ಆಗಿರಲೂಬಹುದು. ಇದು ಹಳೆಗನ್ನಡದ ಸನ್ನಿವೇಶದಲ್ಲಿ ನಿಜವಾದ ಸಂಗತಿಯಾಗಿದೆ. 'ಇಳೆಯ ರಾಜರನ್ನು ಓಲೈಸಿ ಬದುಕಬವುದು ಕಡು ಕಷ್ಟ' ಎನ್ನುವ ಪಂಪನ ಮಾತು ಇಲ್ಲಿ ನೆನೆಯಬಹುದು. ಹಾಗೆಯೇ ಕವಿರಾಜಮಾರ್ಗಕಾರ ಕೂಡ ಪಂಪನಂತೆ ರಾಜಾಶ್ರಯವನ್ನು ಪಡೆದಾತ. ಇವು ವಾತಾವರಣವನ್ನು ಸೃಷ್ಟಿಸುತ್ತವೆ. ಆದರೂ ಲೇಖಕ ಯಾವಾಗಲು ರಾಜ ಅಥವಾ ಸ್ನೇಹದ ಬಂಧನವನ್ನು ಮೀರಿ ಆಲೋಚಿಸುವುದುಂಟು. ಆಗಲೇ ಆತನೊಬ್ಬ ಸೃಜನಶೀಲ ಬರಹಗಾರನಾಗಬಲ್ಲ.

ನಾಡು – ನುಡಿಯ ಬಗ್ಗೆ ರಾಜರು ಹೊಂದಿರುವ ಭಾವನೆಯೂ ಕೃತಿಯ ಆಲೋಚನೆಯಲ್ಲಿ ಸ್ಥಾನ ಪಡೆಯಲಾರದು ಎಂದು ಹೇಳಲಾಗದು. ಈ ಮಾತಿಗೆ ಶಾಸನಗಳನ್ನು ಗಮನಿಸಬಹುದಾಗಿದೆ. ಹಲ್ಮಿಡಿ ಶಾಸನ ಅಥವಾ ಕಪ್ಪೆಅರ್ಯಭಟ್ಟನ ಶಾಸನ ಕನ್ನಡದ ಅತ್ಯಂತ ಪ್ರಮುಖ ಶಾಸನಗಳಾಗಿವೆ. ಇವು ರಾಜನ ದಾನ, ಧರ್ಮ, ಶೌರ್ಯ, ಸ್ವರೂಪವನ್ನು ಭಿತ್ತರಿಸುವವುಗಳಾಗಿವೆ. ಇವುಗಳ ಆಶಯ ರಾಜನ ಮನೋಬಯಕೆಯೇ ಆಗಿರುವುದಾಗಿದೆ.

ಕವಿರಾಜಮಾರ್ಗ ಕೃತಿಯು ಕ್ರಿ.ಶ. ೮೧೪ ರಿಂದ ೮೭೭ ರ ಅವಧಿಯಲ್ಲಿ ರಾಷ್ಟ್ರಕೂಟರ ಪ್ರಮುಖ ದೊರೆಯಾದ ಅಮೋಘವರ್ಷ ನೃಪತುಂಗನು ಕಾವೇರಿ – ಗೋದಾವರಿ ನದಿಗಳ ನಡುವಣ ನಾಡನ್ನು ಆಳುತ್ತಿದ್ದ ಕಾಲದಲ್ಲಿ ರಚಿಸಿರುವುದಾಗಿದೆ. ಆತನ ಆಸ್ಥಾನದಲ್ಲಿದ್ದ ಕವಿ ಶ್ರೀ ವಿಜಯನು ಕ್ರಿ. ಶ ೮೭೦ ರ ಸುಮಾರಿಗೆ ಈ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯು ಮುಖ್ಯವಾಗಿ ನೃಪತುಂಗನ ಆಕಾಂಕ್ಷೆ – ಅಭಿಮತ – ಮಾರ್ಗದರ್ಶನಗಳನ್ನವಲಂಬಿಸಿ, ಆತನ ಅಂತಿಮ ಮುದ್ರೆಯನ್ನು ಪಡೆದು ಹೊರಬಂದಿದೆ. ಇದು ಕೃತಿಯ ರಚನೆಗೆ ಇರುವ ಹಲವು ನೆಲೆಯ ಕಾರಣಗಳಾದರೆ ಭಾಷಿಕವಾದ ನೆಲೆಯೂ ಮತ್ತೊಂದು ಕೆಲಸಮಾಡಿರುತ್ತದೆ.

ಪ್ರಾಚೀನ ಕಾಲದಿಂದ ಬ್ರಿಟೀಷರು ಬಂದು ಹೋಗುವವರೆಗೆ ಅಥವಾ ಇವತ್ತೂ ಸಹ ಸಂಸ್ಕೃತ ಭಾಷೆ ಶ್ರೇಷ್ಠವಾದದ್ದು ಎಂಬ ವ್ಯಕ್ತ ಅವ್ಯಕ್ತ ತಿಳುವಳಿಕೆಯೊಂದು ಕೆಲಸಮಾಡಿದೆ ಮತ್ತು ಮಾಡುತ್ತಿದೆ. ಭಾರತೀಯ ಎಲ್ಲಾ ಭಾಷೆಗಳ ಮೇಲೆ ಪ್ರಭಾವಿಸುವ ಭಾಷೆಯಾಗಿದ್ದುದು ಸಂಸ್ಕೃತ, ಇಂತಹದೊಂದು ತಿಳುವಳಿಕೆ ಕನ್ನಡ ಭಾಷಿಗರಿಗೆ ಮಾತ್ರವಲ್ಲ ಭಾರತದ ಇತರ ಹಲವು ಭಾಷೆಯ ಬರಹಗಾರರಿಗೂ ಇತ್ತು. ಅಂದರೆ ಸಂಸ್ಕೃತ ಭಾರತದ ಭಾಷೆಗಳಲ್ಲಿ ಶ್ರೇಷ್ಠವಾದದ್ದು ಮತ್ತು ಅದು ಕೊಡುವ ಭಾಷೆಯೇ ಹೊರತು ಪಡೆಯುವ ಭಾಷೆಯಲ್ಲ. ಕನ್ನಡದಂತಹ ಭಾಷೆಯನ್ನು ಕುರಿತು ಚಿಂತಿಸುವ ಒಬ್ಬ ವೈಯಾಕರಣಿಗೆ ಸಂಸ್ಕೃತ ಭಾಷೆಯ ಜ್ಞಾನ, ತಿಳುವಳಿಕೆ ಇರಬೇಕು ಎನ್ನುವ ಸ್ಥಿತಿ ಇದ್ದದ್ದು. ನಾಗವರ್ಮನಂತಹ ವೈಯಾಕರಣರು ಕನ್ನಡ ಭಾಷೆಯನ್ನು ಕುರಿತು ಸಂಸ್ಕೃತದಲ್ಲಿ ಕೃತಿಯನ್ನು ರಚಿಸಿದರು. ಪಂಪ ನಾಗಚಂದ್ರ ರನ್ನ ಪೊನ್ನ ಜನ್ನ ಮುಂತಾದ ಕವಿಗಳು ವಸ್ತು, ವಿಷಯ, ಭಾಷೆ ಮುಂತಾಗಿ ಹಲವು ನೆಲೆಯಲ್ಲಿ ಸಂಸ್ಕೃತದ ಪ್ರಭಾವವನ್ನು ಪಡೆಯುತ್ತಾರೆ. ಹಾಗೆಂದಾಗ ಸಂಸ್ಕೃತವನ್ನು ಕುರುಡುತನದಿಂದ ಪೂರ್ಣವಾಗಿ ಹೆಜ್ಜೆ ಹೆಜ್ಜೆಗೂ ಸ್ವಂತಿಕೆಯಿಲ್ಲದೆ ಅನುಕರಿಸಿದರೆಂದಲ್ಲ. ಕನ್ನಡತನವನ್ನು ರೂಡಿಸಲು ಯತ್ನಿಸಿದರು. ಹಾಗಾಗಿಯೆ ವ್ಯಾಸನ ಮಹಾಭಾರತವನ್ನು ಸಂಕ್ಷಿಪ್ತವಾಗಿ ಮತ್ತು ಸಮರ್ಥವಾಗಿ ಹೇಳಿದ್ದು ಮಾತ್ರವಲ್ಲ, ಅರ್ಜುನನನ್ನು ತನ್ನ ಆಶ್ರಯದಾತನಾದ ಅರಿಕೇಸರಿಯೊಂದಿಗೆ ಸಮೀಕರಿಸಿ ಹೊಸ ಆಲೋಚನೆಯನ್ನು ತನ್ನ ಕಾಲದ ಕಟ್ಟಳೆಯ ಮೇಲೆ ನಿಂತು ಪಂಪ ಆಲೋಚಿಸಿದ್ದಾನೆ. ಇದನ್ನು ವಿಕ್ರಮಾರ್ಜುನ ವಿಜಯ ಕೃತಿಯಲ್ಲಿ ಕಾಣಬಹುದಾಗಿದೆ. ಇಂತಹ ಹಲವು ಬಗೆಯಲ್ಲಿ ಕನ್ನಡ ಕವಿಗಳು ಕನ್ನಡದ ಅಸ್ಮಿತೆಯನ್ನು ನಿರ್ವಹಿಸಿರುವುದನ್ನು ಕಾಣಬಹುದಾಗಿದೆ. ಅದು ಕುವೆಂಪು ಅವರ ಶ್ರೀರಾಮಾಯಣದರ್ಶನಂ ವರೆಗೂ ನೋಡಬಹುದಾಗಿದೆ. ಅಂದರೆ ಸಂಸ್ಕೃತದೊಂದಿಗೆ

ಎದುರಾಗುತ್ತಲೇ ಕನ್ನಡತ್ವವನ್ನು ಸ್ಥಾಪಿಸುವ ಪ್ರಕ್ರಿಯೆ. ಕವಿರಾಜ ಮಾರ್ಗದಂತಹ ಕನ್ನಡ ಜಗತ್ತನ್ನು ಕಾಣುವ ಕೃತಿಯ ವಿಚಾರವೂ ಇದಕ್ಕಿಂತ ಭಿನ್ನವಾಗಿಯೇನು ಇಲ್ಲ. ಕವಿರಾಜಮಾರ್ಗದ ಸ್ವರೂಪವಾದರೂ ಅಷ್ಟೆ ನಿಷ್ಕೃಷ್ಟ – ಖಚಿತವಾದದ್ದಲ್ಲ ಎನ್ನುವುದು ವಿದ್ವಾಂಸರಿಗೆ ಕಂಡಿದೆ. ಹಲವರು ಅದನ್ನು ದಕ್ಷಿಣಾತ್ಯನಾದ ದಂಡಿ (ಸು. ಕ್ರಿ. ಶ. ೭ನೇ ಶ) ಯ "ಕಾವ್ಯಾದರ್ಶ" ಮತ್ತು ಭಾಮಹ (ಸು. ಕ್ರಿ. ಶ. ೭ನೇ ಶ) ನ 'ಕಾವ್ಯಾಲಂಕಾರ' ಎಂಬ ಸಂಸ್ಕೃತ ಕಾವ್ಯಾಲಂಕಾರ ಗ್ರಂಥಗಳಿಂದ ಆಯ್ದು ಅನುವಾದಿಸಿ ಸಂಕಲಿಸಿರುವ 'ಅನುವಾದ ಗ್ರಂಥ'ವೆಂದು ಭಾವಿಸುತ್ತಾರೆ. ಲಕ್ಷಣಕ್ಕೆ ಸಂಬಂಧಿಸಿ 'ಕವಿರಾಜಮಾರ್ಗ'ವು ಹಾಗೆ ಅನೇಕ ಪದ್ಯಗಳನ್ನು ಆಯ್ದು ಅನುವಾದಿಸಿಕೊಂಡಿರುವುದು ನಿಜವೇ. ಆದರೆ ಲಕ್ಷ್ಯ ಪದ್ಯಗಳಲ್ಲಿ ಕೆಲವೇ ಕೆಲವನ್ನು ಮಾತ್ರ ಬಿಟ್ಟರೆ, ಉಳಿದವು ಸ್ವತಂತ್ರ ರಚನೆಗಳು. ಅಲ್ಲದೆ ಕವಿರಾಜಮಾರ್ಗವು ಲಕ್ಷ್ಯ ಪದ್ಯಗಳ ಸನ್ನಿವೇಶದಲ್ಲಿ ಸಂಸ್ಕೃತದ ಕಾವ್ಯದ ಮೊರೆ ಹೋದರೂ ಹಲವು ಹತ್ತು ಹೊಸ ವಿಚಾರಗಳನ್ನು ನಾಡು – ನುಡಿಯ ವ್ಯಾಪ್ತಿ, ಜನ – ಜೀವನದ ಬಗೆಯನ್ನು ಹೇಳುತ್ತದೆ. 'ತಿರುಳ್ಗನ್ನಡ' – ಕನ್ನಡದ ಪ್ರಭೇದವನ್ನು ಕುರಿತು ಹೆಸರಿಸುತ್ತದೆ. ಕವಿರಾಜಮಾರ್ಗದಲ್ಲಿ ಬರುವ 'ನೆಗಳ್ದಿರ್ದ ಕನ್ನಡಂಗಳೊಳಗಣಿತಗುಣವಿದಿತ ಸಂಸ್ಕೃತೋಕ್ತಕ್ರಮಮಂ ಬಗೆದೊಂದು ಮಾಡಿ ಪೇಳ್ದೊಡೆ' ಎಂಬುದು ಅನೇಕ ಕನ್ನಡಗಳು ಇದ್ದವು ಎಂಬುದಕ್ಕೆ ಸಾಕ್ಷಿಯಂತಿದೆ. ಅಲ್ಲದೆ ದಕ್ಷಿಣೋತ್ತರ ಮಾರ್ಗವನ್ನು ಕುರಿತು ಸಹ ವಿವರಿಸುತ್ತದೆ. ಹೀಗೆ ಒಂದು ಕೃತಿಯು ಇಷ್ಟು ವೈವಿದ್ಯತೆಯ ಸಂಗತಿಗಳನ್ನು ಹೇಳಿದ್ದು ಭಾರತದಲ್ಲೇ ಇದೇ ಮೊದಲ ಕೃತಿ.

ಕನ್ನಡ ವ್ಯಾಕರಣ ಪರಂಪರೆಯಲ್ಲಿ ಕವಿರಾಜಮಾರ್ಗಕ್ಕಿಂತ ಪೂರ್ವದಲ್ಲಿ ರಚನೆಗಳು ಇದ್ದುದರ ಬಗ್ಗೆ ಕವಿರಾಜ ಮಾರ್ಗದಲ್ಲೇ ಉಲ್ಲೇಖ ದೊರೆಯುತ್ತದೆ. ಆದರೆ ಆ ಯಾವ ಕೃತಿಗಳೂ ಲಭ್ಯವಾಗಿಲ್ಲ. ಹಾಗೆನೆ ಕವಿರಾಜಮಾರ್ಗದ ನಂತರ "ಕರ್ನಾಟಕ ಭಾಷಾಭೂಷಣ"ದವರೆಗಿನ ಕಾಲಾವಧಿಯಲ್ಲಿಯೂ ಅನೇಕ ಕನ್ನಡ ವ್ಯಾಕರಣಗಳು ರಚಿತವಾಗಿದ್ದವೆಂಬುದು ತಿಳಿದುಬರುತ್ತದೆ. ಆದರೆ ದುರ್ದೈವದಿಂದ ಆ ಯಾವ ಕೃತಿಗಳೂ ನಮಗೆ ಸಿಕ್ಕಿಲ್ಲ. ವ್ಯಾಕರಣ ಮಾದರಿಯ ಕನ್ನಡ ವ್ಯಾಕರಣ ಪ್ರಪಂಚದಲ್ಲಿ ಕವಿರಾಜಮಾರ್ಗದ ನಂತರ ದೊರೆತ ವ್ಯಾಕರಣ ಗ್ರಂಥಗಳೆಂದರೆ ಕೇವಲ ನಾಲ್ಕು. ಅವುಗಳೆಂದರೆ ನಾಗವರ್ಮನ 'ಕರ್ನಾಟಕ ಭಾಷಾಭೂಷಣ' ಮತ್ತು ಆತನ ಕಾವ್ಯಾವಲೋಕನದ ಮೊದಲ ಭಾಗವಾದ "ಶಬ್ದಸ್ಮೃತಿ", ಕೇಶಿರಾಜನ "ಶಬ್ದಮಣಿದರ್ಪಣ" ಮತ್ತು ಭಟ್ಟಾಕಳಂಕನ "ಶಬ್ದಾನುಶಾಸನ". ಸುಮಾರು ೧೯ನೇ ಶತಮಾನದವರೆಗೆ ವ್ಯಾಕರಣ ನಡೆದು ಬಂದ ದಾರಿಯನ್ನು ಗಮನಿಸಿದರೆ ನಿರಾಶೆಯೇ

ಅಥವಾ ರಚಿತವಾದರೂ ಲಬ್ದವಾಗದೆ ಅನೇಕ ಪ್ರಾಚೀನ ಸಾಹಿತ್ಯಾದಿ ಗ್ರಂಥಗಳಂತೆ ಕಾಲನ ದವಡೆಯಲ್ಲಿ ಮಣ್ಣಾಗಿರಬಹುದು.

'ಕರ್ನಾಟಕ ಭಾಷಾಭೂಷಣ' ಕನ್ನಡದ ಪ್ರಪ್ರಥಮ ವ್ಯಾಕರಣ ಗ್ರಂಥ. ಆದರೆ ಈ ಕೃತಿಯು ಕನ್ನಡ ವ್ಯಾಕರಣ ಕೃತಿಯಾದರೂ ಇದರ ಭಾಷೆ ಸಂಸ್ಕೃತವಾಗಿದೆ. ಅದೇನೆ ಇರಲಿ ಕನ್ನಡದ ಪ್ರಮುಖ ವ್ಯಾಕರಣ ಕೃತಿಯೇ. ಈತನ ಅನಂತರ ಬಂದ ಕೇಶಿರಾಜನು ತನ್ನ ಶಬ್ದಮಣಿ ದರ್ಪಣದ ಹಲವು ಉದಾಹರಣೆಗಳು, ಅಲ್ಲದೆ ಭಾಷಾಭೂಷಣ ಕೃತಿಯ ಉದಾಹರಣೆಗಳನ್ನೂ ಕೊಡುತ್ತಾನೆ. "ಕನ್ನಡ ವ್ಯಾಕರಣವನ್ನು ಸಂಸ್ಕೃತದ ಪಡಿಯಚ್ಚಿನಲ್ಲಿ ಎರಕ ಹೊಯ್ಯುವ ಈ ಪರಂಪರೆ ನಾಗವರ್ಮನಿಂದ ಮೊದಲುಗೊಂಡು ೧೯ನೆಯ ಶತಮಾನದವರೆಗೆ ಮುನ್ನಡೆಯಿತು". ತನ್ನ ಕಾಲಘಟ್ಟದವರೆಗಿನ ಎಲ್ಲ ಸತ್ವವನ್ನು ಹೀರಿಕೊಂಡು, ಭಾಷೆಯ ಬಗ್ಗೆ ಅಮೂಲ್ಯವಾದ ಗ್ರಂಥವನ್ನು ಕೇಶಿರಾಜ ರಚಿಸಿದನು. ಇವತ್ತಿಗೂ ಶಬ್ದಮಣಿದರ್ಪಣದ ಚರ್ಚೆ ನಿರಂತರವಾಗಿದೆ. ಶಬ್ದಮಣಿದರ್ಪಣದಷ್ಟು ಜನಪ್ರಿಯವಾದ ಪ್ರಾಚೀನ ವ್ಯಾಕರಣ ಗ್ರಂಥ ಇನ್ನೊಂದಿಲ್ಲ. ಮತ್ತೆ ಮತ್ತೆ ಶಬ್ದಮಣಿದರ್ಪಣ ನಿರೂಪಣೆಗೊಳ್ಳುತ್ತಿದೆ. ಶಬ್ದಮಣಿದರ್ಪಣ ಕೃತಿಯ ರಚನೆಯ ಕಾಲಕ್ಕಾಗಲೆ ಕನ್ನಡ ಭಾಷೆಯಲ್ಲಿ, ಆಲೋಚನೆಯಲ್ಲಿ ಬದಲಾವಣೆ ಮಾಡಿದಂತೆ ಕಾಣುತ್ತದೆ. ವಿದ್ವಾಂಸರು ಕೇಶಿರಾಜನಿಗೆ ವ್ಯಾಕರಣ ಕೃತಿಯ ರಚನೆಗೆ ಇತ್ತ ನಿರ್ದೇಶನವು ಸ್ಪಷ್ಟಪಡಿಸುತ್ತದೆ. ಅದೆಲ್ಲವನ್ನು ಹೀಗೂ ಸಂಗ್ರಹಿಸಬಹುದೆಂದು ಕಾಣುತ್ತದೆ. ಆ "ಕಾಲಘಟ್ಟಕ್ಕಾಗಲೆ" ಸಂಸ್ಕೃತದ ಮಿತಿಮೀರಿದ ಬಳಕೆಯ ಬಗ್ಗೆ ವಿರೋಧಗಳೆದ್ದು ಅಚ್ಚಗನ್ನಡದಲ್ಲಿ ಕಾವ್ಯರಚನೆ ಮಾಡಬಹುದೆಂಬ ಯಶಸ್ವಿ ಪ್ರಯೋಗ ನಡೆಸುವ ಬಗ್ಗೆ ಕಾತುರ ತಳೆದಂತಿದೆ. ಅಲ್ಲದೆ ಕನ್ನಡದಲ್ಲಿ ದೊರೆಯುವ ಶಬ್ದಸ್ಮೃತಿ ಸಂಕ್ಷಿಪ್ತವಾಗಿರುವುದು, ಭಾಷಾಭೂಷಣ ಸಂಸ್ಕೃತದಲ್ಲಿ ಸೂತ್ರ ವೃತ್ತಿ ರೂಪದಲ್ಲಿರುವುದರಿಂದ, ಜನರಿಗೆ ಸುಲಭಗ್ರಾಹ್ಯವಲ್ಲದಿರುವುದರಿಂದ ಇವೆಲ್ಲ ಕಾರಣಗಳಿಂದ ಆ ಕಾಲದ ವಿದ್ವಜ್ಜನರಿಗೆ ಕನ್ನಡಕ್ಕೊಂದು ಕನ್ನಡದ್ದೇ ಆದ ವಿಸ್ತೃತ ವ್ಯಾಕರಣ ರಚನೆಯ ಅವಶ್ಯಕತೆ – ಇದ್ದುದು ಮನದಟ್ಟಾಗಿ, ವಿಧ್ವಾಂಸರು ಕೇಶಿರಾಜನನ್ನು ಅಂತಹದೊಂದು ಕೃತಿಯನ್ನು ಬರೆಯುವಂತೆ ಪ್ರೋತ್ಸಾಹಿಸಿದರು. ಶಕ್ಯಾನುಷ್ಠಾನ, ಸಂಬಂಧ, ಅಭಿದೇಯ, ನಿಜೇಷ್ಟ ಸಿದ್ಧಿಗಳು ಕೇಶಿರಾಜನಲ್ಲಿ ನೆಲಸಿ ನಿಂದಿದ್ದವು. "ಅಭಿಧೇಯ ಎಂದರೆ ಗ್ರಂಥದ ವಸ್ತು, ವಿಷಯ, ಅಧಿಕಾರಿ ಎಂದರೆ ಪ್ರಕೃತ ಶಾಸ್ತ್ರಾಭ್ಯಾಸಕ್ಕೆ ತಕ್ಕ ಅರ್ಹತೆಯುಳ್ಳ ವ್ಯಕ್ತಿ ಅಥವಾ ಯಾರ ಉಪಯೋಗಕ್ಕಾಗಿ ಗ್ರಂಥ ರಚಿತವಾಗಿದೆಯೋ ಅವನು. ಪ್ರಯೋಜನ ಅಥವಾ ಇಷ್ಟಸಿದ್ಧಿ ಎಂದರೆ ಪ್ರಕೃತ ಶಾಸ್ತ್ರಾಭ್ಯಾಸದಿಂದ ಲಭಿಸುವ ಫಲ. ಸಂಬಂಧ ಎಂದರೆ

ಸಂಬಂಧ. ಇದು ಬಗೆಗೆಯ ರೀತಿಯದ್ದಾಗಿರುತ್ತದೆ. ಗ್ರಂಥಕ್ಕೂ ಅಭಿಧೇಯಕ್ಕೂ ಇರುವ ಸಂಬಂಧ ಒಂದು ರೀತಿಯದು. ಗ್ರಂಥದ ವಿಷಯಕ್ಕೆ ಬಾಹಿರವಾದ ವಿಷಯಗಳು ಗ್ರಂಥದಲ್ಲಿದ್ದರೆ ಆಗ ಗ್ರಂಥ ಅಭಿಧೇಯಗಳ ಸಂಬಂಧ ಕೆಟ್ಟಿದೆ ಎಂದಾಗುತ್ತದೆ. ಕನ್ನಡ ವ್ಯಾಕರಣ ಗ್ರಂಥವೊಂದರಲ್ಲಿ ಕನ್ನಡ ವ್ಯಾಕರಣಕ್ಕೆ ಪ್ರಸ್ತುತವಲ್ಲದ ಛಂದಸ್ಸಿನ ವಿಚಾರಗಳು ಬಂದಿದ್ದರೆ, ಗ್ರಂಥ–ಅಭಿಧೇಯ ಸಂಬಂಧ ಕೆಟ್ಟಿದೆ ಎಂದರ್ಥ. ಹೀಗೆಂದರೆ ಯಾವರೀತಿಯ ಬಾಹಿರ ವಿಷಯಗಳೂ ಬರಬಾರದೆಂದಲ್ಲ. ಆದರೆ ಮುಖ್ಯವಿಷಯಕ್ಕೆ ಪೋಷಕವಾಗಿ ಬಂದಾಗ ಸಂಬಂಧ ಚೆನ್ನಾಗಿಯೇ ಇದೆ ಎಂದರ್ಥ. ಆ ಆಸ್ತಿಕವಾದವನ್ನು ಅಭಿಧೇಯವಾಗುಳ್ಳ ಗ್ರಂಥವೊಂದರಲ್ಲಿ ನಾಸ್ತಿಕವಾದದ ಕೆಲವು ವಿಷಯಗಳು ಬಂದಿರಬಹುದು. ಆದರೆ ಅವುಗಳ ನಿರಾಸಕ್ಕಾಗಿ ಬಂದಿದ್ದರೆ ತಪ್ಪಿಲ್ಲವಷ್ಟೆ.

ಇದೇ ರೀತಿ ಅಭೀಧೇಯಕ್ಕೂ ಅಧಿಕಾರಿಗೂ ಇರುವ, ಅಧಿಕಾರಿಗೂ ಪ್ರಯೋಜನಕ್ಕೂ ಇರುವ ಸಂಬಂಧ ಸರಿಯಾಗಿರಬೇಕು ಕೆಡಬಾರದು. ಶಕ್ಯಾನುಷ್ಠಾನ ಎಂಬ ಶಬ್ದವೊಂದು ಉಳಿಯಿತು. ಶಕ್ಯವಾದ ಅನುಷ್ಠಾನವೇ ಶಕ್ಯಾನುಷ್ಠಾನ. ಮೋಕ್ಷವನ್ನು ಹೇಗೆ ಸಂಪಾದಿಸಬೇಕೆಂದು ತಿಳಿಸಲು ಹೊರಟಿರುವ ಗ್ರಂಥದಲ್ಲಿ ಕೆಲವು ಅನುಷ್ಠಾನಗಳನ್ನು ಎಂದರೆ ನಡವಳಿಕೆಯ ನಿಯಮಗಳನ್ನು ವಿಧಿಸಿರಬಹುದು. ಈ ಅನುಷ್ಠಾನಗಳನ್ನು ಪಾಲಿಸಲು ಶಕ್ಯವಾದರೆ ತಾನೇ ಅವುಗಳಿಗೆ ಬೆಲೆ? ಸಾಧುವಾದ ಶಬ್ದರೂಪಗಳನ್ನು ಸಿದ್ದಗೊಳಿಸುವುದೆ ಉದ್ದೇಶವಾದ ವ್ಯಾಕರಣ ಗ್ರಂಥವೊಂದರಲ್ಲಿ ಕೊಡುವ ನಿಯಮಗಳೇ ಅನುಷ್ಠಾನಗಳು. ಈ ಅನುಷ್ಠಾನಗಳನ್ನು ಪಾಲಿಸಲು ಶಕ್ಯವಿರಬೇಕು. ಮೋಕ್ಷ ಶಾಸ್ತ್ರದಲ್ಲಿ ಅವಶ್ಯಕವಾದ ಅನುಷ್ಠಾನಗಳನ್ನು ಹೇಳುವ ಸಂಭವತೆ ಇದೆಯಾದರೂ, ವ್ಯಾಕರಣ ಗ್ರಂಥದಲ್ಲಿ ಅಂತಹ ಸಂಭವತೆ ಕಡಿಮೆ. ಆದರೂ ಖಚಿತವಲ್ಲದ ಅಥವಾ ಪೂರ್ವಾಪರ ವಿರುದ್ಧವಾದ ನಿಯಮಗಳನ್ನು ಕೊಟ್ಟಾಗ ಅನುಷ್ಠಾನದ ಶಕ್ಯತೆಗೆ ಭಂಗಬರಬಹುದು.

ಸಂಬಂಧ, ಅಭಿಧೇಯ, ಶಕ್ಯಾನುಷ್ಠಾನ, ಇಷ್ಟಸಿದ್ದಿ ಈ ನಾಲ್ಕೂ ತನ್ನ ಗ್ರಂಥದಲ್ಲಿ ನೆಲೆಸಿ ನಿಂದಿದೆ ಎಂದು ಕೇಶಿರಾಜನ ಹೇಳಿಕೆ. ಇಷ್ಟಿದ್ದು, ವಿನಯ ಭೂಷಣನಾದ ಈ ಸಂಸ್ಕೃತ ಮನಸ್ಸಿನವನಾದ, ಕನ್ನಡ ವೈಯಾಕರಣಿ ಕೇಶಿರಾಜನು ಶಬ್ದಮಣಿ ದರ್ಪಣವನ್ನು ರಚಿಸಿದ.

ಗಜಗ, ಗುಣನಂದಿ, ಮನಸಿಜ, ಅಸಗ, ಚಂದ್ರಭಟ್ಟ, ಗುಣವರ್ಮ, ಶ್ರೀವಿಜಯ, ಪೊನ್ನ, ಪಂಪ ಮತ್ತು ಸುಜನೋತ್ತಂಸ ಮುಂತಾದ ಪ್ರಸಿದ್ಧ ಕನ್ನಡ ಕವಿಗಳು ಪ್ರಯೋಗಿಸಿದ ಕಾವ್ಯಭಾಷೆಯನ್ನು ಕೇಶಿರಾಜ ಪ್ರಮಾಣ ಭಾಷೆಯನ್ನಾಗಿ

ಸ್ವೀಕರಿಸಿದ್ದಾನೆ. ಇವರಷ್ಟೇ ಅಲ್ಲದೆ ಕವಿಗಳ ಉದಾಹರಣೆಗಳನ್ನು ಸಂದರ್ಭಕ್ಕೆ ತಕ್ಕಂತೆ ಬಳಸಿಕೊಂಡಿದ್ದಾರೆ. ತನ್ನ ಪೂರ್ವ ಕವಿಗಳ ಪ್ರಯೋಗಗಳೊಂದಿಗೆ ಮುಂದೆ ಸಾಗಿದ ಆತ ಪ್ರಯೋಗಗಳನ್ನು ಕಲ್ಪಿಸುವ ಬದಲು ಭಾಷೆಯನ್ನು ವಿಶ್ಲೇಷಿಸಲು ಕೇಶಿರಾಜ ಪ್ರಯತ್ನಪಟ್ಟಿದ್ದಾನೆ. ಆ ಕಾರಣವಾಗಿ ಕಾವ್ಯ ಭಾಷೆಯಲ್ಲದೆ ಆಡುನುಡಿ, ಅಥವಾ ದೇಶಿ ನುಡಿಯನ್ನು ಕುರಿತು ಈತ ಚಿಂತಿಸಿದ್ದಾನೆ. ಇಷ್ಟಲ್ಲದೆ ೨೧ನೇ ಶತಮಾನದಲ್ಲಿನ ಕೆಲವು ವಿದ್ವಾಂಸರಿಗೆ ಕೇಶಿರಾಜ ತೋರಿದ ಭಾಷಾ ದಿಕ್ಕು ಅಥವಾ ಬೆಳಕು ಅಂತಿಮ ಎನ್ನುವಂತೆ ಒಪ್ಪಿದ್ದಾರೆ. ಶಬ್ದಮಣಿದರ್ಪಣವನ್ನು ಅಥವಾ ಕನ್ನಡ ವ್ಯಾಕರಣ ಪರಂಪರೆಯನ್ನು ಒಪ್ಪುವ ಈ ಬಗೆಯ ಬಗ್ಗೆಯೇ ಭಿನ್ನತೆಗಳಿವೆ. ಅಥವಾ ಶಬ್ದಮಣಿ ದರ್ಪಣ ನಿರ್ಮಿಸಿದ ಮಾರ್ಗದಲ್ಲಿ ಮುಂದುವರೆಯುವುದರಲ್ಲಿಯೇ ಧನ್ಯತೆಯ ಭಾವವಿದೆ. ೧೨ನೇ ಶತಮಾನದ ಭಾಷೆಯನ್ನು ಉಳಿದು ಸಾಹಿತ್ಯ ಚರಿತ್ರೆಯೂ ಅಂತಹದೇ ದೈವಿಕ ಪ್ರಜ್ಞೆಯ ನೆರಳಿನಲ್ಲಿ ಸಾಗಿದೆ. ಅಕ್ಷರ ಜಗತ್ತಿನ ಆಚೆ, ಮೌಖಿಕವಾಗಿ ಉಳಿದ ಜನರ ಭಾಷೆಯ ಬಗೆಗೆ ಇರುವ ನಿಷೇಧ, ಸಂಸ್ಕೃತವಲ್ಲದೆ ಭಾರತದಲ್ಲಿ ಇರುವ ಹಲವು ಭಾಷೆಗಳ ಭಿನ್ನತೆ – ಅಥವ ವೈವಿಧ್ಯತೆ – ಅಷ್ಟು ಮುಖ್ಯವೆನ್ನಿಸದೆ ಇರುವುದು. ಸಂಸ್ಕೃತ ಭಾರತೀಯ ಭಾಷೆಗಳ ಪ್ರತಿನಿಧಿ, ಶಬ್ದಮಣಿದರ್ಪಣ ಕನ್ನಡ ಭಾಷೆಯ ವ್ಯಾಕರಣದ ಅತ್ಯಂತಿಕ ತಾತ್ವಿಕತೆಯುಳ್ಳದ್ದು. ಇಂತಹ ಅಂತಿಮ ಗೆರೆಗಳನ್ನು ರೂಡಿಸಿಕೊಳ್ಳಲಾಗಿದೆ. ಈ ನಿಮಿತ್ತವಾಗಿ ಇವತ್ತೂ ಸಹ ಸಿಕ್ಕುಗಳನ್ನು ಬಿಡಿಸಿಕೊಳ್ಳಲಾಗದ ನರಳಿಕೆಯಲ್ಲಿದೆ. ಭಾರತೀಯ ಕಾವ್ಯಮೀಮಾಂಸೆ ಎಂದರೆ ಕನ್ನಡ ಕಾವ್ಯಮೀಮಾಂಸೆ ಎಂದು ನಂಬುವ ಬಗೆಯೇ ಇದೆ. ಅಗತ್ಯವಿಲ್ಲದಿದ್ದರೂ ಕನ್ನಡದಲ್ಲಿ ಇವತ್ತಿಗೂ ಉಳಿಸಿಕೊಂಡಿರುವ ಹಲವು ಅಕ್ಷರಗಳು, ವ್ಯಾಕರಣಾಂಶಗಳು ಈ ಮಾತಿಗೆ ಸಾಕ್ಷಿ. ಉದಾಹರಣೆಗೆ: ಋ, ೠ, ಙ, ಞ ಇವುಗಳ ಬಳಕೆ ಕನ್ನಡದಲ್ಲಿ ಇಲ್ಲದಿದ್ದರೂ ಉಳಿಸಿಕೊಂಡಿದ್ದೇವೆ. ಶಬ್ದಮಣಿದರ್ಪಣಕಾರ ಮೊದಲು ಸಂಸ್ಕೃತದ ವಿಚಾರವನ್ನು ಮಂಡಿಸಿ, ಅನಂತರ ಕನ್ನಡ ವಿಚಾರವನ್ನು ಮಂಡಿಸುತ್ತಾನೆ. ಇಂತಹ ನಿಲುವು ಅಕ್ಷರಗಳು, ಲಿಂಗ, ಸಮಾಸ ಮುಂತಾದ ಸನ್ನಿವೇಶದಲ್ಲೂ ತಾಳುತ್ತಾನೆ. ಅನಂತರದ ವ್ಯಾಕರಣಕಾರರಿಗೆ ಇದು ಮಾದರಿಯಾಯಿತು. ಅಥವಾ ಅವರೂ ಸಮ್ಮತಿಸಿದರು. ಒಟ್ಟಾರೆ ಈ ಪ್ರಾಚೀನ ವ್ಯಾಕರಣಗಳು ಬಹುಮಟ್ಟಿಗೆ ನಿಯಮಾತ್ಮಕ ವ್ಯಾಕರಣ ಆಗಿದ್ದವೇ ಹೊರತು ವಿವರಣಾತ್ಮಕ ವ್ಯಾಕರಣ ಆಗಿರಲಿಲ್ಲ. ಅಂದರೆ ಪರಂಪರಾಗತ ವ್ಯಾಕರಣಗಳೂ ಭಾಷೆಗೆ ಒಂದಲ್ಲ ಒಂದು ಬಗೆಯಲ್ಲಿ ಕಟ್ಟಳೆಗಳನ್ನು ರೂಪಿಸುವುದರಲ್ಲಿಯೇ ಮಗ್ನವಾಗಿದ್ದವು. ಭಾಷೆಯ ಸ್ವರೂಪವನ್ನು ಕುರಿತು ವಿವರಣೆ ನೀಡುವುದು ದೂರದ ವಿಚಾರವೇ ಆಗಿತ್ತು. ಹೀಗಾಗಿ ಪ್ರಾಚೀನ ವ್ಯಾಕರಣ ಕೃತಿಗಳೂ

ಭಾಷೆಯನ್ನು ಇರುವಂತೆ ಅಧ್ಯಯನ ಮಾಡುತ್ತಿರಲಿಲ್ಲ. ಬದಲಾಗಿ ಭಾಷೆಯಲ್ಲಿ ಯಾವುದು ಸರಿ, ಯಾವುದು ತಪ್ಪು, ಯಾವುದು ಸಾಧು, ಯಾವುದು ಸಾಧುವಲ್ಲ ಎಂಬ ಆಲೋಚನೆಯಲ್ಲಿ ತೊಡಗುತ್ತಿದ್ದವು. ಭಾಷೆ ಹರಿಯುವ ನೀರು ಎನ್ನುವ ಮಾತು ಇದೆ. ಹರಿಯುವ ನೀರನ್ನು ಎಲ್ಲೆಲ್ಲಿ ಹೇಗೆ ಹರಿಯುತ್ತಿದೆ ಎಂಬುದನ್ನು ಕಾಣಬೇಕೇ ವಿನಹ, ಹೀಗೆ ಹರಿಯಬೇಕು ಎಂಬ ದೃಷ್ಟಿಯಿಂದ ಬದಲಾಯಿಸಲಾಗದು. ಅಥವಾ ಯಾವ ಭಾಷಾವಿಜ್ಞಾನಿಯು ವಿಧಿಸುವ ನಿಯಮಗಳನ್ನು ಆಧರಿಸಿ ಭಾಷೆ ಲೋಕದಲ್ಲಿ ಬದುಕಲಾರದು.

ಭಾಷೆಯಲ್ಲಿ ಹಲವು ಪಲ್ಲಟಗಳು ನಡೆದವು. ಕನ್ನಡ ಭಾಷೆಯು ನಡುಗನ್ನಡ ಅವಸ್ಥೆಯನ್ನು ದಾಟಿ ಹೊಸಗನ್ನಡದ ಎಳೆಗಳನ್ನು ಹೆಣೆದುಕೊಳ್ಳುತ್ತಿತ್ತು. ಹೊಸಪೀಳಿಗೆಯವರಿಗೆ ಭಾಷೆಯನ್ನು ಅರ್ಥಮಾಡಿಕೊಳ್ಳಲು ಇರುವ ವ್ಯಾಕರಣಗಳೂ ಸಮಕಾಲೀನ ಕನ್ನಡದ ಬಗ್ಗೆ ವಿವರಿಸುವುದಕ್ಕಿಂತ ಪ್ರಾಚೀನ ಕನ್ನಡದ ಸ್ವರೂಪದಲ್ಲೇ ಮಗ್ನವಾಗಿದ್ದವು. ಮತ್ತು ಅವು ಹಳೆಗನ್ನಡದಲ್ಲಿ ಸೂತ್ರ, ವೃತ್ತಿ ಪದ್ಯಗಳಲ್ಲಿ ರಚಿತವಾಗಿದ್ದವು. ಹೊಸಪೀಳಿಗೆಯವರಿಗೆ ಅರ್ಥವಾಗದ ಅವಸ್ಥೆಯಲ್ಲಿದ್ದವು.

ಅಲ್ಲದೆ ಭಾರತಕ್ಕೆ ಬಂದ ವಿದೇಶಿಯರು ಆಡಳಿತ ನಡೆಸಲಾಂಭಿಸಿದ್ದು, ಹಾಗೂ ಕ್ರೈಸ್ತ ಧರ್ಮ ಪ್ರಚಾರಕರು ಹೊಸಗನ್ನಡವನ್ನು ಆಡಳಿತ ಹಾಗೂ ಕ್ರೈಸ್ತ ಧರ್ಮ ಪ್ರಸಾರಗಳಿಗಾಗಿ ಕಲಿಯುವುದು ಅನಿವಾರ್ಯವಾಗಿತ್ತು. ಬ್ರಿಟೀಷರು ಭಾರತದಲ್ಲೆಲ್ಲ ಹರಡಿಕೊಳ್ಳುತ್ತಿದ್ದಂತೆ ಭಾರತದ ಸ್ಥಳೀಯ ಭಾಷೆಗಳನ್ನು ಕಲಿಯುವುದು ಅನಿವಾರ್ಯವಾಗಿತ್ತು. ಇದು ಆಳುವವರಿಗೆ ಅತ್ಯಂತ ತುರ್ತಿನ ಕೆಲಸ ಕೂಡ ಆಗಿತ್ತು. ಅಂತಹ ಕೆಲವು ವ್ಯಾಕರಣಗಳು : ಕ್ರಿ. ಶ. ೧೮೧೭ರಲ್ಲಿ ರೆವ್ಹರೆಂಡ್ ಡಾ. ವಿಲಿಯಂ ಕಾರಿ ಅವರ The Grammar of Karnatak Language. ೧೮೨೦ರಲ್ಲಿ ಮದ್ರಾಸ್ ಸಿವಿಲ್ ಅಧಿಕಾರಿ ಜಾನ್ ಮೆಕೆರೆಲ್ ಅವರ Karnataka Vyakarana ಅಥವಾ A Grammar of Carnaka Langauges. ೧೮೮೬ರಲ್ಲಿ ವೆಂಕಟ ರಂಗೋ ಕಟ್ಟಿ ಅವರ ಕನ್ನಡ ಲಘು ವ್ಯಾಕರಣ, ರೆವ್ಹರೆಂಡ್. ಡಾ. ಎಫ್. ಕಿಟಲ್ ಅವರು ಎರಡು ವ್ಯಾಕರಣಗಳನ್ನು ಕನ್ನಡದಲ್ಲೂ, ಒಂದು ವ್ಯಾಕರಣವನ್ನು ಇಂಗ್ಲೀಷಿನಲ್ಲೂ ಬರೆದು ಪ್ರಕಟಿಸಿದರು. ರೆವ್ಹರೆಂಡ್ ಕಾಲ್ಡವೆಲ್‌ರ 'ದ್ರಾವಿಡ ಅಥವ ದಕ್ಷಿಣ ಭಾರತೀಯ ಭಾಷೆಗಳ ತುಲನಾತ್ಮಕ ವ್ಯಾಕರಣ' ೧೯೧೩ರಲ್ಲಿ (ರಚನೆಯಾದ ಕಾಲ ೧೮೫೬) ಬೆಳಕು ಕಂಡಿತು. ಕಿಟೆಲ್, ಕಾಲ್ಡವೆಲ್‌ರಂತಹ ಕೆಲವು ವ್ಯಾಕರಣಕಾರರನ್ನು ಉಳಿದು ಬಹುಪಾಲು ವ್ಯಾಕರಣಗಳು ಶಾಲಾ ಹಂತದ ಕಲಿಕೆಗಾಗಿ ರಚಿಸಲ್ಪಟ್ಟಂತಹ ಸರಳ ವ್ಯಾಕರಣ ಕೃತಿಗಳಾಗಿವೆ.

ರೆವ್ವರೆಂಡ್ ಕಾಲ್ಡವೆಲ್‌ರ 'ದ್ರಾವಿಡ ಅಥವ ದಕ್ಷಿಣ ಭಾರತೀಯ ಭಾಷೆಗಳ ತುಲನಾತ್ಮಕ ವ್ಯಾಕರಣ' ಈ ವ್ಯಾಕರಣವು ಅತ್ಯಂತ ಗಮನಾರ್ಹವಾದ ಒಂದು ಕೃತಿ. ಕನ್ನಡ ಭಾಷೆಯನ್ನು ಇತರ ದ್ರಾವಿಡ ಭಾಷೆಗಳೊಡನೆ ತೌಲನಿಕವಾಗಿ ವಿವೇಚಿಸಲಾಗಿದೆ. ಕನ್ನಡ ವ್ಯಾಕರಣಕ್ಕೆ ಸಂಬಂಧಿಸಿದಂತೆ ಅನೇಕ ಅಂಶಗಳ ವಿವರಣೆ ಇದೆ. ಪ್ರಪಂಚದ ಯಾವ ಭಾಷೆಯಲ್ಲೂ ತೌಲನಿಕ ವ್ಯಾಕರಣದ ಕಲ್ಪನೆಯು ಇಲ್ಲದ ಕಾಲದಲ್ಲಿ ಈ ಗ್ರಂಥವನ್ನು ಇಂಗ್ಲೀಷಿನಲ್ಲಿ ರಚಿಸಿದ್ದಾರೆ. ಹಾಗೆನೆ ರೆವ್ವರೆಂಡ್. ಡಾ. ಎಫ್. ಕಿಟಲ್ ಅವರ "A Grammar of the kannada Language" ಇದೊಂದು ಬಹು ಜನಪ್ರಿಯವಾದ ಮತ್ತೊಂದು ವ್ಯಾಕರಣ. ಗ್ರಂಥ ಕರ್ತೃವೇ ಹೇಳುವಂತೆ ಪ್ರಧಾನವಾಗಿ ಕೇಶಿರಾಜನ 'ಶಬ್ದಮಣಿ ದರ್ಪಣ'ವನ್ನಾಧರಿಸಿ ರಚಿತವಾದ ವ್ಯಾಕರಣ ಗ್ರಂಥವಿದು. ೧೯೩೪ರಲ್ಲಿ ರಚಿತವಾದ ಆರ್. ನರಸಿಂಹಾಚಾರ್ಯರ "The history of kannada Language" ಇನ್ನೊಂದು ಗಮನಾರ್ಹ ವ್ಯಾಕರಣ ಗ್ರಂಥ. ೧೯೧೪ರಲ್ಲಿ ರಚಿತವಾದ ಹೆರಾಲ್ಡ್ ಸ್ಪೆನ್ಸರ್ ಅವರ "A Canarese Grammar" ಕೂಡ ಒಂದು ಗಮನಾರ್ಹ ಕೃತಿಯಾಗಿದೆ. ಇಂಗ್ಲೀಷ್ ವಿದ್ಯಾರ್ಥಿಗಳ ಕನ್ನಡ ಕಲಿಕೆಗಾಗಿ ಇಂಗ್ಲೀಷಿನಲ್ಲಿ ಬರೆದ ಈ ವ್ಯಾಕರಣವು ಕನ್ನಡ ಭಾಷೆಯನ್ನು ಬಳಸುವುದರಲ್ಲಿ ಆಸಕ್ತರಾಗಿರುವ ಕನ್ನಡೇತರರಿಗೆ ಅಮ್ಯೂಲ್ಯವಾದ ಕೈಪಿಡಿಯಾಗಿದೆ. ಹಾಗೇನೆ ಮೈಸೂರು ವಿಶ್ವವಿದ್ಯಾಲಯ ಪ್ರಕಟಿಸಿದ "ಕನ್ನಡ ಕೈಪಿಡಿ" ಮೊದಲ ಸಂಪುಟದ ಮೊದಲ ಭಾಗವಾದ 'ಹಳಗನ್ನಡ ವ್ಯಾಕರಣ' ಎನ್ನುವ ಭಾಗವು ಪ್ರಾಚೀನ ವ್ಯಾಕರಣವನ್ನು ತಿಳಿಯಲು ಇದೊಂದು ಅತ್ಯುತ್ತಮ ಕೈಪಿಡಿಯಾಗಿದೆ. ಅನಂತರ ೧೯೫೦ರ ದಶಕದಲ್ಲಿ ಎ. ಎನ್. ನರಸಿಂಹಯ್ಯ ಮತ್ತು ಜಿ. ಎಸ್. ಗಾಯಿ ಇವರುಗಳು ಭಾಷೆಯನ್ನು ವೈಜ್ಞಾನಿಕ ರೀತಿಯಲ್ಲಿ ವಿವರಿಸುವ ಪ್ರಯತ್ನಮಾಡಿದವರಲ್ಲಿ ಮೊದಲಿಗರು. ಕನ್ನಡ ಭಾಷೆಯ ವೈಜ್ಞಾನಿಕ ವಿಶ್ಲೇಷಣೆಯನ್ನು ಒಳಗೊಂಡ ಎ. ಎನ್. ನರಸಿಂಹಯ್ಯನವರ "A Grammar of the oldest kanarese Inscription" ಎಂಬ ಗ್ರಂಥ ಪ್ರಕಟವಾಯಿತು. ಅನಂತರ ಎ. ಎನ್. ನರಸಿಂಹಯ್ಯನವರು ಕ್ರಿ. ಶ. ೬ ಮತ್ತು ೭ನೇ ಶತಮಾನದ ಶಾಸನಗಳ ಕನ್ನಡ ಭಾಷೆಯನ್ನು ಆಧುನಿಕ ಭಾಷಾವಿಜ್ಞಾನದ ರೀತಿಯಲ್ಲಿ ವರ್ಣನಾತ್ಮಕ ವಿಧಾನದಲ್ಲಿ ವಿಶ್ಲೇಷಿಸಿದರು.

ಎ. ಎನ್. ನರಸಿಂಹಯ್ಯನವರ ಕೃತಿಯನ್ನು ಆಧಾರವಾಗಿಟ್ಟುಕೊಂಡು ಡಾ. ಜಿ. ಎಸ್. ಗಾಯಿ ಅವರು ಕ್ರಿ. ಶ. ೮. ೯ ಹಾಗೂ ೧೦ನೇ ಶತಮಾನದ ಶಾಸನಗಳ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಮಾದರಿಯ ಅಧ್ಯಯನವನ್ನು ಮಾಡಿದರು. ಅನಂತರ ಇದೇ ಮಾದರಿಯಲ್ಲಿ ಹಲವು ವಿದ್ವಾಂಸರು

ಮುಂದುವರೆದರು. ಪರಂಪರಾಗತ ವ್ಯಾಕರಣ ಮಾದರಿಯಿಂದ ಬಿಡಿಸಿಕೊಂಡು ಹೊಸ ರೀತಿಯಲ್ಲಿ ಹಲವು ವಿಧ್ವಾಂಸರು ಪಾಶ್ಚಾತ್ಯ ಸಿದ್ಧಾಂತಗಳ, ಭಾಷಾಧ್ಯಯನಗಳ ಅಭ್ಯಾಸದ ಫಲವಾಗಿ ಭಾಷಾಧ್ಯಯನದ ಹಲವು ಬಗೆಗಳಾಗಿ ಕಾಣಿಸಿಕೊಂಡವು. ಆಧುನಿಕ ಭಾಷಾವಿಜ್ಞಾನದ ಸನ್ನಿವೇಶದಲ್ಲಿ ಪ್ರಮುಖರಾದವರು : ಪ್ರೊ. ತೀ. ನಂ. ಶ್ರೀ, ಡಾ. ಆರ್. ಸಿ. ಹಿರೇಮಠ, ಡಾ. ಹಾ. ಮ. ನಾಯಕ, ಡಾ. ಎಚ್. ಎಸ್. ಬಿಳಿಗಿರಿ, ವಿಲ್ಯಂಬ್ರೈಟ್, ಡಾ. ಡಿ. ಎನ್. ಶಂಕರಭಟ್, ಡಾ. ಎಂ. ಚಿದಾನಂದ ಮೂರ್ತಿ, ಪ್ರೊ. ಎಂ. ಮರಿಯಪ್ಪ ಭಟ್, ಡಾ. ಕೆ. ಕುಶಾಲಪ್ಪಗೌಡ, ಡಾ. ಕೆ. ವಿ. ನಾರಾಯಣ, ಪ್ರೊ. ಹಂಪ ನಾಗರಾಜಯ್ಯ, ಡಾ. ಜಿ. ಎಸ್. ಕುಳ್ಳಿ, ಸಂಗಮೇಶ ಸವದತ್ತಿಮಠ ಇನ್ನೂ ಮುಂತಾದವರು. ವ್ಯಾಕರಣ, ಭಾಷಾಶಾಸ್ತ್ರ, ಭಾಷಾವಿಜ್ಞಾನ, ಭಾಷಾಧ್ಯಯನ...ಹೀಗೆ ಕ್ರಮವಾಗಿ ಮುಂದುವರಿಕೆಯ ಕ್ರಮಣಿಕೆಯಲ್ಲಿ ಆಧುನಿಕ ಭಾಷಾಧ್ಯಯನದ ಕೆಲವು ಕೃತಿಗಳನ್ನು ಕುರಿತು ಸಮೀಕ್ಷೆಯನ್ನು ಮಾಡಲಾಗಿದೆ. ಆದರೆ ಮುಖ್ಯವಾದ ಸ್ವರೂಪವನ್ನು ಪ್ರಸ್ತುತಪಡಿಸುವ ಕೃತಿಗಳ ಸನ್ನಿವೇಶದಲ್ಲಿ ಆ ಕಾಲದ ಅಧ್ಯಯನದ ಸ್ವರೂಪವನ್ನು ಕೃತಿಯ ನೆಪದಲ್ಲಿ ಸಮೀಕ್ಷಿಸಲಾಗುವುದು.

**ಡಾ. ಡಿ. ಎನ್. ಶಂಕರಭಟ್ ಅವರ ಈವರೆಗಿನ ಪುಸ್ತಕಗಳನ್ನು ಕುರಿತು ಸಮೀಕ್ಷೆಯನ್ನು ಮಾಡಲಾಗಿದೆ.**

೧. ಕನ್ನಡ ಭಾಷೆಯ ಸಂಕ್ಷಿಪ್ತ ಚರಿತೆ (೧೯೬೯)
೨. ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ (೨೦೦೧)
೩. ಭಾಷೆಯ ಬಗೆಗೆ ನೀವೇನು ಬಲ್ಲಿರಿ? (೨೦೦೨)
೪. ಕನ್ನಡ ಪದಗಳ ಒಳ ರಚನೆ (೨೦೦೨)
೫. ನಿಜಕ್ಕೂ ಹಳಗನ್ನಡ ವ್ಯಾಕರಣ ಎಂತಹದು? (೨೦೦೫)
೬. ಕನ್ನಡ ಬರಹವನ್ನು ಸರಿಪಡಿಸೋಣ! (೨೦೦೫)
೭. ಕನ್ನಡ ನುಡಿಯ ಬಗೆಗೆ ಚಿಂತನೆ (೨೦೦೬)
೮. ಕನ್ನಡ ವಾಕ್ಯಗಳ ಒಳ ರಚನೆ (೨೦೦೬)
೯. ಕನ್ನಡ ನುಡಿ ನಡೆದು ಬಂದ ದಾರಿ (೨೦೦೭)
೧೦. ಮಾತಿನ ಒಳಗುಟ್ಟು (೨೦೦೮)
೧೧. ಕನ್ನಡ ವ್ಯಾಕರಣ ಯಾಕೆ ಬೇಕು? (೨೦೦೯)
೧೨. ಕನ್ನಡ ಸೊಲ್ಲರಿಮೆ-೧ (೨೦೧೦)

**೧೩. ಕನ್ನಡ ಸೊಲ್ಲರಿಮೆ–೨ (೨೦೧೧)**

**೧೪. ಮಾತು ಮತ್ತು ಬರಹದ ನಡುವಿನ ಗೊಂದಲ (೨೦೧೧)**

ಕನ್ನಡ ಭಾಷೆಯ ಅಧ್ಯಯನ ಕ್ಷೇತ್ರದಲ್ಲಿ ಪ್ರಮುಖವಾದ ಹೆಸರು ಡಾ. ಡಿ. ಎನ್. ಶಂಕರಭಟ್ ಅವರದು. 'ಕನ್ನಡದಲ್ಲಿ ವ್ಯಾಕರಣ, ಭಾಷಾಶಾಸ್ತ್ರ, ಛಂದಸ್ಸು ಮುಂತಾದ ಅಧ್ಯಯನ ಶಿಸ್ತುಗಳು ಬೆಳೆದು ಬಂದಿರುವ ಬಗೆಗೂ ಶಂಕರಭಟ್ಟರು ಅನುಭವಿಸುತ್ತಿರುವ ಸಾಪೇಕ್ಷವಾದ ಅಜ್ಞಾತವಾಸಕ್ಕೂ ಹತ್ತಿರದ ಸಂಬಂಧಿವಿದೆ. ಕನ್ನಡ ಭಾಷೆಯನ್ನು ಕುರಿತು, ಇಂಗ್ಲೀಷ್ ಮತ್ತು ಕನ್ನಡಗಳಲ್ಲಿ ಇತ್ತೀಚಿನ ದಶಕಗಳಲ್ಲಿ ನಡೆದಿರುವ ಕೆಲಸಗಳು ನಮ್ಮ ಸ್ನಾತಕೋತ್ತರ ಪಠ್ಯಕ್ರಮದ ಪರಿದಿಯಾಚೆಗೆ ಉಳಿದಿವೆ. ಭಾಷೆಯನ್ನು ಕಲಿಯುವವರು ಹಾಗೂ ಕಲಿಸುವವರು ಇಬ್ಬರೂ ಆಧುನಿಕವಾದ ಚಿಂತನೆಗಳನ್ನು ಗ್ರಹಿಸುವ ಉಮೇದನ್ನು ತೋರಿಸುತ್ತಿಲ್ಲ. ಕೆಲವು ಪ್ರಮುಖ ಭಾಷಾಶಾಸ್ತ್ರಜ್ಞರು ಸದಾ ಸರ್ವದಾ ಕರ್ನಾಟಕದ ಆಚೆಗೆ ಕೆಲಸಮಾಡಿದ್ದು ಇದಕ್ಕೆ ಒಂದು ಕಾರಣ. ಎಸ್. ಎನ್. ಶ್ರೀಧರ್, ಡಾ. ಎಚ್. ಎಸ್, ಅನಂತನಾರಾಯಣ, ಡಾ. ಎಚ್. ಎಸ್. ಬಿಳಿಗಿರಿ. ಮುಂತಾದ ಹಲವರ ನಿದರ್ಶನಗಳನ್ನು ಕೊಡಬಹುದು. ಅಂತೆಯೇ ಪ್ರೊ. ತೀ. ನಂ. ಶ್ರೀ, ಪ್ರೊ. ಆರ್. ಸಿ. ಹೀರೆಮಠ, ಡಾ. ಹಾ. ಮ ನಾಯಕ, ಡಾ. ಎಂ. ಚಿದಾನಂದ ಮೂರ್ತಿ ಮುಂತಾದ ಹಿರಿಯರು ಭಾಷಾಶಾಸ್ತ್ರದಲ್ಲಿ ಮೊದ ಮೊದಲು ತೋರಿಸಿದ ಆಸಕ್ತಿಯನ್ನು ನಂತರದ ವರ್ಷಗಳಲ್ಲಿ ಇತರ ಅಧ್ಯಯನ ಕ್ಷೇತ್ರಗಳ ಕಡೆಗೆ ಹರಿಸಿದ್ದು ಕೂಡಾ ಇನ್ನೊಂದು ಕಾರಣವಿರಬಹುದು. ಸಂಸ್ಕೃತದ ಮೂಲಕ ವೈಯಾಕರಣಿಗಳು ಕನ್ನಡ ಭಾಷಾಶಾಸ್ತ್ರಜ್ಞರು ಹಾಗೂ ಭಾಷಾಶಿಕ್ಷಣವನ್ನು ನಿರ್ದೇಶಿಸುತ್ತಿರುವ ತಜ್ಞರ ನಡುವೆ ಅರ್ಥಪೂರ್ಣವಾದ ಸಂವಾದಗಳಿಗಿಂತ ಅಬ್ಬರದ ವಾಗ್ವದಗಳೇ ನಡೆದಿರುವುದು ಗಮನೀಯವಾದ ಇನ್ನೊಂದು ಕಾರಣ. ಅಲ್ಲದೆ ಭಾಷೆಯಂತಹ ವಿಷಯವು ತನಗಿರುವ ಸಾಮಾಜಿಕ ಆಯಾಮಗಳ ಫಲವಾಗಿ ಸ್ಫೋಟಕವಾಗುವ ಸಾಧ್ಯತೆಗಳನ್ನು ಹೊಂದಿದೆ. ಭಾಷೆಯ ಬಗ್ಗೆ ಮಾತನಾಡುವಾಗ ತಜ್ಞರ ಅಭಿಪ್ರಾಯಗಳಿಗೂ ಭಾವುಕವಾದ ಅನಿಸಿಕೆಗಳಿಗೂ ಇರುವ ಗಡಿಗೆರೆಗಳೇ ಅಳಿಸಿಹೋಗುತ್ತವೆ'[೨]. ಅವರ ಒಟ್ಟು ವಿಚಾರವನ್ನು ಕಳೆದ ನಾಲ್ಕು ದಶಕಗಳ ವ್ಯಾಪ್ತಿಯಲ್ಲಿ ಹರಡಿಕೊಂಡಿರುವ ಬರಹಗಳನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ. ಅಧ್ಯಯನದ ನೆಲೆಗಳು, ಕಾಳಜಿಗಳು, ವ್ಯಾಪ್ತಿ, ಅವರು ಶೋಧಿಸಲು ಹೊರಟಿರುವ ಹಾಗೂ ಅವುಗಳನ್ನು ಕನ್ನಡ ಭಾಷಿಕ ವಲಯದಲ್ಲಿ ಅವರು ಸ್ಥಾಪಿಸಲು ಪ್ರಯತ್ನಿಸುತ್ತಿರುವ ವಿಚಾರಗಳು ಯಾವುವು ಎಂಬುದು ಸ್ಪಷ್ಟಗೊಳ್ಳುತ್ತದೆ. ಕನ್ನಡವು ಭಾರತೀಯವಾದ ಭಾಷೆಗಳಲ್ಲೆಲ್ಲ ಮುಖ್ಯವಾಗಿ ಸಂಸ್ಕೃತ, ತಮಿಳ್, ತೆಲುಗು,

ಮಲೆಯಾಳಂ ಭಾಷೆಗಳಿಗಿಂತ ಹೇಗೆ ಭಿನ್ನವಾಗಿದೆ. ಮತ್ತು ಕನ್ನಡದ ಅನನ್ಯತೆಯನ್ನು ಕಾಣುತ್ತವೆ. ಬದಲಾಗುತ್ತಿರುವ ಕಾಲಘಟ್ಟದ ಒತ್ತಡಗಳಿಗೆ ಭವಿಷ್ಯತ್ತಿನಲ್ಲಿ ಕನ್ನಡವನ್ನು ಸಮೃದ್ಧಗೊಳಿಸುವ ಕನ್ನಡಪರ ಕಾಳಜಿ ಸ್ಪಷ್ಟವಾಗುತ್ತದೆ.

ಹೀಗೆ ಕನ್ನಡ ಭಾಷೆಯನ್ನು ವಿಶ್ಲೇಷಿಸುತ್ತ ಚಾರಿತ್ರಿಕ ಮತ್ತು ವಿವರಣಾತ್ಮಕ ನೆಲೆಗಳ ಮೂಲಕ ಕನ್ನಡ ಭಾಷೆಯನ್ನು ರಾಚನಿಕವಾಗಿ ಮರು ಕಟ್ಟುವ ಸಾಧ್ಯತೆಯನ್ನು ಹುಡುಕಲು ತೊಡಗಿದ್ದಾರೆ. ಅಂತಹ ಹುಡುಕಾಟದ ಫಲಿತ ಕೃತಿಗಳು ಹೀಗೆವೆ – ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ (೧೯೬೯), ಭಾಷೆಯ ಬಗೆಗೆ ನೀವೇನು ಬಲ್ಲಿರಿ? (೧೯೭೦), ಕನ್ನಡ ಭಾಷೆಯ ಕಲ್ಪಿತ ಚರಿತ್ರೆ (೧೯೯೫), ಕನ್ನಡ ಪದಗಳ ಒಳರಚನೆ (೧೯೯೯), ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ (೨೦೦೦), ಕನ್ನಡ ಸರ್ವನಾಮಗಳು (೨೦೦೩), ಕನ್ನಡ ವಾಕ್ಯಗಳ ಒಳರಚನೆ (೨೦೦೪), ಕನ್ನಡ ಬರಹವನ್ನು ಸರಿಪಡಿಸೋಣ (೨೦೦೫), ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹುದು? (೨೦೦೫), ಕನ್ನಡ ನುಡಿ ನಡೆದು ಬಂದ ದಾರಿ (೨೦೦೭), ಇಂಗ್ಲೀಷ್ ಪದಗಳಿಗೆ ಕನ್ನಡದ್ದೇ ಪದಗಳು (೨೦೦೮), ಮಾತಿನ ಒಳಗುಟ್ಟು (೨೦೦೮), ಕನ್ನಡ ವ್ಯಾಕರಣ ಯಾಕೆ ಬೇಕು? (೨೦೦೯), ಕನ್ನಡ ಸೊಲ್ಲರಿಮೆ–೧ (೨೦೧೦), ಕನ್ನಡ ಸೊಲ್ಲರಿಮೆ – ೨ (೨೦೧೧), ಮಾತು ಮತ್ತು ಬರಹದ ನಡುವಿನ ಗೊಂದಲ (೨೦೧೧) ಮುಂತಾದ ಕೃತಿಗಳನ್ನು ಇಲ್ಲಿ ಗಮನಿಸಬೇಕಾಗಿದೆ. ಅಲ್ಲದೆ ಇಂಗ್ಲೀಷ್ನಲ್ಲಿ ಹದಿನೈದು ಪುಸ್ತಕವನ್ನು ಪ್ರಕಟಿಸಿದ್ದಾರೆ. ಮತ್ತು ನೂರ ಐವತ್ತಕ್ಕೂ ಹೆಚ್ಚು ಸಂಶೋಧನಾ ಪ್ರಬಂಧಗಳು ಬೇರೆ ಬೇರೆ ದೇಶಗಳ ಪ್ರತಿಷ್ಠಿತ ವಿಶ್ವವಿದ್ಯಾಲಯಗಳಿಂದ ಪ್ರಕಟಗೊಂಡಿವೆ. ಇವರು ಇಂಗ್ಲಿಷ್‌ನಲ್ಲಿ ಬರೆದ ಹಲವು ಬರಹಗಳು ಕನ್ನಡ ಭಾಷೆಯನ್ನು ಕುರಿತು ಆಗಿವೆ.

ವ್ಯಾಕರಣವೆಂದರೆ ಜನರಿಗೆ ಆಗದ ಮಾತು. ಪಠ್ಯಪುಸ್ತಕಗಳಲ್ಲಿ ಮಕ್ಕಳು ಬೇರೆಲ್ಲ ಭಾಗವನ್ನು ಸರಾಗವಾಗಿ ಓದಿ ಅರ್ಥಮಾಡಿಕೊಳ್ಳುತ್ತಾರೆ. ಆದರೆ ವ್ಯಾಕರಣ ಭಾಗ ಬಂದರೆ ಅರ್ಥವಾಗದ ಗೊಂದಲ ಕಳವಳದಲ್ಲಿ ಬೇಯುತ್ತಾರೆ. ಹಾಗೆ ವಿದ್ವಾಂಸರಿಗೂ ಸಹ ವ್ಯಾಕರಣವೇನು ಸುಲಭದ ಸಂಗತಿಯಾಗಿಯೇನು ಇಲ್ಲ. ಆದರೆ ಡಾ. ಡಿ. ಎನ್. ಶಂಕರಭಟ್ಟರು ವ್ಯಾಕರಣವನ್ನು ಅತ್ಯಂತ ಸುಲಭವಾಗಿ ಸರಳವಾಗಿ ವೈಜ್ಞಾನಿಕವಾಗಿ ಮತ್ತು ಸ್ಪಷ್ಟವಾಗಿ ಎಲ್ಲರಿಗೂ ಅರ್ಥವಾಗುವ ಬಗೆಯಲ್ಲಿ ಕುತೂಹಲಕಾರಿಯಾಗಿ ಬರೆಯುತ್ತಾರೆ. ಅವರ ಮೊದಲ ಪುಸ್ತಕವೇ ಇದಕ್ಕೊಂದು ನಿದರ್ಶನವಾಗಿ ನೋಡಬಹುದು. “ಭಾಷೆಯ ಬಗ್ಗೆ ನೀವೇನು ಬಲ್ಲಿರಿ?” (೧೯೭೦) ಈ ಪುಸ್ತಕದಲ್ಲಿ ಭಾಷೆಯ ಸ್ವರೂಪ, ಮಾತು ಮತ್ತು ಬರಹದ ಬಗ್ಗೆ ಅತ್ಯಂತ

ಸರಳವಾಗಿ ವಿವರಿಸುತ್ತಾರೆ. 'ಸುಧಾ'ದಂತಹ ಸಾಮಾನ್ಯ ಓದುಗ ವರ್ಗವನ್ನು ಹೊಂದಿದ ವಾರಪತ್ರಿಕೆಯಲ್ಲಿ ಸರಣಿ ಬರಹವಾಗಿ ಪ್ರಕಟವಾಗಿದ್ದು ಇದಕ್ಕೊಂದು ಸಾಕ್ಷಿ. ಒಟ್ಟಾರೆ ಮಕ್ಕಳಿಂದ ವಿದ್ವಾಂಸರು – ಪಂಡಿತರ ವರೆಗೆ ಎಲ್ಲರನ್ನು ಅತ್ಯಂತ ಕುತೂಹಲ, ಆಸಕ್ತಿಯಿಂದ ಓದಿಸಿಕೊಳ್ಳುವಂತೆ ವ್ಯಾಕರಣದಂತಹ ವಿಷಯವನ್ನು ವಿವರಿಸುತ್ತಾರೆ.

ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ, ಕನ್ನಡ ಭಾಷೆಯ ಕಲ್ಪಿತ ಚರಿತ್ರೆ, ಕನ್ನಡ ನುಡಿ ನಡೆದು ಬಂದ ಬಗೆ ಈ ಕೃತಿಗಳು ಚರಿತ್ರೆಯನ್ನು ಕಟ್ಟಿಕೊಡುವ ಹಂಬಲವೇನು ಹೊಂದಿಲ್ಲ. ಆದರೆ ಕನ್ನಡ ಭಾಷೆ ಮತ್ತು ವ್ಯಾಕರಣಗಳನ್ನು ಮರು ನಿರ್ಮಾಣ ಮಾಡುವುದಾಗಿದೆ. ಅಥವಾ ಕನ್ನಡದ್ದೇ ಆದ ವ್ಯಾಕರಣವನ್ನು ಸ್ಥಾಪಿಸುವುದಾಗಿದೆ. ಸಂಸ್ಕೃತದ ನೆರಳಿನಲ್ಲಿ ಕಾಣಲಾಗುವ ದ್ರಾವಿಡ ಭಾಷೆಗಳು ಅಥವಾ ಕನ್ನಡ ಭಾಷೆಯ ತನ್ನದೇ ಆದ ಸಹಜ ಚಹರೆಗಳನ್ನು ಗುರುತಿಸುವುದು. ಮತ್ತು ದಾಖಲಿಸುತ್ತಲೇ ಇತಿಹಾಸವನ್ನು ರೂಪಿಸುವ ತುರ್ತನ್ನು ಹೊಂದಿವೆ. ಅವರು ತಮ್ಮ ಇಡೀ ಅಧ್ಯಯನದಲ್ಲಿ ಕನ್ನಡ ನುಡಿಯು ಮೂಲ ದ್ರಾವಿಡದಿಂದ ಬೇರ್ಪಟ್ಟು ಸ್ವತಂತ್ರವಾಗಿ ರೂಪಿತಗೊಂಡು ಬೆಳೆದ ಕ್ರಮವನ್ನು ವಿವರಿಸುತ್ತಾರೆ. ಸ್ವತಂತ್ರಗೊಂಡ ಕನ್ನಡದಂತಹ ಒಂದು ಭಾಷೆ ಇತರ ಸಹೋದರ ಭಾಷೆಗಳಿಗಿಂತ ಹೇಗೆ ಭಿನ್ನವಾಗಿದೆ. ಮತ್ತು ಎಂತಹ ಸಾಮ್ಯತೆಗಳನ್ನು ಇನ್ನೂ ಉಳಿಸಿಕೊಂಡಿದೆ ಎನ್ನುವುದನ್ನು ಖಚಿತವಾಗಿ ಗುರುತಿಸುತ್ತಾರೆ. ಹಾಗೇನೆ ಕನ್ನಡ ಮತ್ತು ಸಂಸ್ಕೃತದ ಭಿನ್ನತೆಯನ್ನು ಸ್ಪಷ್ಟಪಡಿಸುವುದು ಇವರ ಮುಖ್ಯ ಉದ್ದೇಶಗಳಲ್ಲಿ ಒಂದು. ಕನ್ನಡ ವರ್ಣಮಾಲೆ, ವಾಕ್ಯರಚನೆ, ವ್ಯಾಕರಣ, ಪದರಚನೆ ಮುಂತಾದವುಗಳಲ್ಲಿ ಸಂಸ್ಕೃತದ ಆಕ್ರಮಣವನ್ನು ಕಾಣುತ್ತೇವೆ. ಸಂಸ್ಕೃತದ ಮೂಲ ಮತ್ತು ಕನ್ನಡದ ಮೂಲದ ಭಿನ್ನತೆಯನ್ನು ಗುರುತಿಸುತ್ತಲೇ ಸಂಸ್ಕೃತ ಭಾಷೆಯ ಪ್ರಭಾವದಿಂದಾಗಿ ಕನ್ನಡ ಭಾಷೆಯನ್ನು ಬಿಡಿಸಿ, ಕನ್ನಡವನ್ನು ಮರು ಕಟ್ಟಿಕೊಳ್ಳಲು ಮಾಡಬೇಕಾದ ಪ್ರಯತ್ನಗಳನ್ನು ಮುಂದಿಡುತ್ತಾರೆ. ಈ ನಿಟ್ಟಿನಲ್ಲಿ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ', 'ನಿಜಕ್ಕೂ ಹಳಗನ್ನಡ ವ್ಯಾಕರಣ ಎಂತಹದು?' 'ಕನ್ನಡ ಬರಹವನ್ನು ಸರಿಪಡಿಸೋಣ', 'ಕನ್ನಡ ವ್ಯಾಕಗಳ ಒಳರಚನೆ' ಮುಂತಾದ ಕೃತಿಗಳು ಪ್ರಯತ್ನಿಸುತ್ತವೆ.

ಅನ್ಯಭಾಷೆಗಳ ಅಡಿಯಲ್ಲಿ ಮುಚ್ಚಿರುವ ಸನ್ನಿವೇಶದಲ್ಲಿ ಕನ್ನಡ ಭಾಷೆ ಸಾಯುತ್ತಿದೆ, ಅಪಾಯದ ಅಂಚಿನಲ್ಲಿದೆ, ಮುಂತಾದ ಬಗೆಯಲ್ಲಿ ಹಲವು ವಿದ್ವಾಂಸರು, ಸಂಪನ್ಮೂಲ ವ್ಯಕ್ತಿಗಳು, ರಾಜಕಾರಣಿಗಳು, ವೇದಿಕೆಗಳಲ್ಲಿ, ಪತ್ರಿಕೆಗಳಲ್ಲಿ, ಪುಸ್ತಕಗಳಲ್ಲಿ ಹೇಳಿದ್ದೇ ಹೇಳಿ ಮೆಚ್ಚುಗೆ, ಚಪ್ಪಾಳೆ ಪಡೆಯುವ ಬಗೆಯಂತು ಸಾಕಷ್ಟು ಇದ್ದೇ ಇದೆ.

ಕಥೆ ಕಾದಂಬರಿ, ನಾಟಕ ಮುಂತಾದ ಬಗೆಯ ಬರಹಗಳು 'ಜನಪ್ರಿಯ'ಗೊಳ್ಳುವಂತೆ ಸಂಶೋಧನೆಗಳು ಗಮನ ಸೆಳೆಯುವುದಿಲ್ಲ ಅಥವಾ ಜನಪ್ರಿಯವಾಗುವುದಿಲ್ಲ. ಅದರಲ್ಲೂ ಭಾಷೆಯಂತಹ, ವ್ಯಾಕರಣ ನೆಲೆಯ ಬರಹಗಳಂತು ತೀರಾ ತೀರಾ ಕಡಿಮೆ. ಹಾಗೇನೆ ಎಂದಿಗಿಂತ ಇವತ್ತು ಅಕ್ಷರಸ್ಥರ ಸಂಖ್ಯೆ ಹೆಚ್ಚಿದೆ ಎಂದಾಗಲೂ ಉಳಿದ ಆತಂಕಗಳು ಯಾರನ್ನು ತಾಗದೇ ನುಂಗಿಕೊಳ್ಳುತ್ತಿರುವ ಸಾಮಾನ್ಯತೆಯೇ ಆಗಿದೆ. ಆದರೆ ಕನ್ನಡ ಭಾಷೆಯು ತನ್ನ ಅನನ್ಯತೆಯನ್ನು ಕಟ್ಟಿಕೊಳ್ಳಬೇಕಾದರೆ, ಆಸಕ್ತರಿಗೆ ಗೊಂದಲವಿಲ್ಲದೆ ಕಲಿಯುವಂತಾಗಬೇಕಾದರೆ ಕೆಲವು ಮಾರ್ಪಾಡುಗಳನ್ನು ಮಾಡಿಕೊಳ್ಳಲೇಬೇಕಾಗುತ್ತದೆ ಎನ್ನುತ್ತಾರೆ. ನಮ್ಮ ಸಮಾಜದಲ್ಲಿ ಬರಹಕ್ಕಿದ್ದ ಸ್ಥಾನ ಸಂಪೂರ್ಣ ಬದಲಾಗಿರುವುದೇ ಈ ರೀತಿ ನಮ್ಮ ಬರಹವನ್ನು ಬದಲಾಯಿಸುವ ಅವಶ್ಯಕತೆ ಈಗ ಬಂದಿರುವುದಕ್ಕೆ ಮುಖ್ಯ ಕಾರಣ. ಇದುವರೆಗೆ ಬರಹವನ್ನು ಸಮಾಜದ ಕೆಲವೇ ಕೆಲವು ಮಂದಿ ಮಾತ್ರ ಕಲಿತರೆ ಸಾಕು ಎಂದಿತ್ತು. ಆದರೆ ಇವತ್ತು ಸಮಾಜದ ಪ್ರತಿಯೊಬ್ಬ ವ್ಯಕ್ತಿಯೂ ಬರಹವನ್ನು ಕಲಿಯಬೇಕಾಗಿದೆ. ಬರಹ ಬಾರದ ವ್ಯಕ್ತಿ ಸಮಾಜದಲ್ಲಿ ಮುಂದೆ ಬರಲು ಸಾಧ್ಯವೇ ಇಲ್ಲ ಎಂಬ ಸ್ಥಿತಿಗೆ ನಾವೀಗ ಬಂದಿದ್ದೇವೆ. ಇದಕ್ಕೆ ಕಾರಣವೇನೆಂದರೆ ಇವತ್ತು ಬರಹದ ಮಹತ್ವ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತಿದೆ. ಇವತ್ತು ನಮ್ಮ ಸಮಾಜ ಎಲ್ಲ ರೀತಿಯಲ್ಲೂ ಏಳಿಗೆಯಾಗಲೇಬೇಕಿದ್ದಲ್ಲಿ ಸಮಾಜದಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಬರಹವನ್ನು ಬಳಸುವವನಾಗಬೇಕಿದೆ. ಈ ರೀತಿ ಕನ್ನಡ ಬರಹ ರಾಜ್ಯದಲ್ಲಿರುವ ಎಲ್ಲಾ ವರ್ಗದ ಜನರಿಗೂ ಎಟುಕುವಂತಾಗಬೇಕಿದ್ದಲ್ಲಿ ಅದನ್ನು ಕಲಿಯುವ ಮತ್ತು ಬಳಸುವ ಕೆಲಸ ಎಲ್ಲ ವರ್ಗದವರಿಗೂ ಸಮಾನವಾಗಿ ಸುಲಭವಾಗಿರಬೇಕು. ಹಾಗೆ ಮೇಲ್ವರ್ಗದ ಮಕ್ಕಳಿಗೆ ಸುಲಭ ಮತ್ತು ಕೆಳವರ್ಗದ ಮಕ್ಕಳಿಗೆ ಕಷ್ಟ ಎಂದಿರಬಾರದು ಎನ್ನುತ್ತಾರೆ. ಜಾತಿ, ಧರ್ಮ, ಪ್ರದೇಶ ಅವಲಂಬಿತವಾಗಿ ಹಲವು ಕನ್ನಡಗಳು ಕರ್ನಾಟಕದಲ್ಲಿ ಬದುಕುತ್ತವೆ. ಅವುಗಳನ್ನು ಅವಲಂಬಿಸಿ ಬದುಕುತ್ತಿರುವ ಜನರು, ಸಂಸ್ಕೃತ ಮಿಶ್ರಿತವಾದ ಬರಹ ಅಥವಾ ಕನ್ನಡ ಪ್ರಮಾಣ ಭಾಷೆಯನ್ನು ರೂಪಿಸುವುದರಿಂದ 'ಹಲವು ಕನ್ನಡ'ಗಳ ಜನರಿಗೆ ಮುಖ್ಯವಾಗಿ ಕೆಳವರ್ಗದ ಮಕ್ಕಳು ತಮ್ಮ ಮಾತು ಮತ್ತು ಬರಹದ ವ್ಯತ್ಯಾಸಗಳಲ್ಲಿ ಸಿಕ್ಕು ನರಳಬೇಕಾಗುತ್ತದೆ ಎಂಬುದು ಅವರ ಕಾಳಜಿಯಾಗಿದೆ. ಹೀಗಾಗಿಯೇ ಇವರು "ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ", "ಕನ್ನಡ ಬರಹವನ್ನು ಸರಿಪಡಿಸೋಣ" ಎಂದು ಕರೆಕೊಟ್ಟಿದ್ದಾರೆ ಮಾತ್ರವಲ್ಲ ಕಾರ್ಯಗತರಾಗಿದ್ದಾರೆ.

ನಮ್ಮ ಎಲ್ಲಾ ಬಗೆಯ ಚರಿತ್ರೆಗಳು ದಾಖಲೆಗಳಲ್ಲಿ ಜೇಡರ ಬಲೆ ಹೆಣೆದಂತಿವೆ. ಆದರೆ ಡಾ. ಡಿ. ಎನ್. ಶಂಕರಭಟ್ಟರು ಚಾರಿತ್ರಿಕ ಮತ್ತು ಸಮಕಾಲೀನ ಸನ್ನಿವೇಶಗಳನ್ನು ಅವಲಂಬಿತವಾಗಿ ಭಾಷೆಯ ಮರುರಚನೆ ಮಾಡುವಾಗ ಕೇವಲ ಲಿಖಿತ ದಾಖಲೆಗಳನ್ನು ಮಾತ್ರ ಅವಲಂಬಿತರಾಗದೆ, ದ್ರಾವಿಡ ಭಾಷೆಗಳು ಹಾಗೂ ಕನ್ನಡದ ಉಪಭಾಷೆಗಳಿಂದಲೂ ಮಾಹಿತಿಯನ್ನು ಹೆಕ್ಕಿ ತೆಗೆಯುತ್ತಾರೆ. ಅವುಗಳನ್ನು ಸೂಕ್ತವಾಗಿ ತಮ್ಮ ಬರವಣಿಗೆಗೆ ಬಳಸಿಕೊಳ್ಳುತ್ತಾರೆ. ಬುಡಕಟ್ಟುಜನಾಂಗಗಳಿಂದ ಉಪಭಾಷೆಗಳವರೆಗೆ, ನಿರ್ಲಕ್ಷ್ಯಕ್ಕೆ ಒಳಗಾದ ಜನಾಂಗಗಳ ಭಾಷೆಯನ್ನೂ ಪರಿಗಣಿಸುತ್ತಾರೆ. ಯಾಕೆಂದರೆ ಹಾಗೆ ನಿರ್ಲಕ್ಷಿತ ಜನಾಂಗವು ಬದಲಾವಣೆಗಳ ಮಹಾಪೂರದಲ್ಲಿ ತನ್ನ ಪೂರ್ವ ಚಹರೆಗಳನ್ನೂ ಬಿಟ್ಟುಕೊಟ್ಟಿರುವುದಿಲ್ಲ ಎಂಬುದು ಎಲ್ಲರಿಗೂ ಗೊತ್ತಿರುವ ಸತ್ಯ.

ಕನ್ನಡ ಜಗತ್ತು ಅಥವಾ ಕರ್ನಾಟಕದ, ಕನ್ನಡಿಗರ ಅನನ್ಯತೆಯನ್ನು ಬಹು ಸಂಖ್ಯಾತ ಜನರಿಗೆ ಅನುಕೂಲವಾಗುವಂತಹ ಬಗೆಯಲ್ಲಿ ಬದಲಾಯಿಸಬೇಕೆನ್ನುವ ಮಾರ್ಗವನ್ನು ಕನ್ನಡತ್ವದ ಒಳಗಿನಿಂದಲೇ ಇವರು ಕಂಡುಕೊಂಡುದಾಗಿದೆ. ಎಲ್ಲಾ ಪ್ರದೇಶದ ಭಾಷಾ ಪ್ರಭೇದಗಳಿಗೂ ಸಮಾನವಾದ ಗೌರವ ಇರಬೇಕಾದ ಅಗತ್ಯವನ್ನು ಸೂಚಿಸುತ್ತಾರೆ ಮತ್ತು ಸ್ವತಃ ಅಂತಹ ಪ್ರಯತ್ನವನ್ನು ಅಳವಡಿಸಿಕೊಂಡಿದ್ದಾರೆ. ಇತ್ತೀಚಿನ ಅವರ ಬರಹಗಳು 'ಹೊಸಬರಹ'ದಲ್ಲಿರುವುದು ಈ ಮಾತಿಗೊಂದು ನಿದರ್ಶನ. ಭಾಷೆಯು ಜಾತಿ ಮತ್ತು ವರ್ಗಗಳನ್ನು ಮೀರಿ ಬೆಳೆಯಬೇಕಾದ ಅಗತ್ಯವನ್ನು ಸಮರ್ಥಿಸುತ್ತಾರೆ. ಇಲ್ಲಿ ಅವರು ಸೂಚಿಸುತ್ತಿರುವ ವಿಚಾರಗಳು ಹೆಚ್ಚು ಪ್ರಜಾತಾಂತ್ರಿಕವಾಗಿವೆ. ಸಮಾಜದ ವಿವಿಧ ವರ್ಗಗಳ ಏಳಿಗೆ ಮತ್ತು ಶಿಕ್ಷಣದಲ್ಲಿ ಸಮಾನತೆಯನ್ನು ತರುವ ದೃಷ್ಟಿಯಿಂದ ಆಲೋಚಿಸಿದಾಗ ಇದು ನಿಜವಾಗಿಯೂ ಆರೋಗ್ಯಕರ ವಿಚಾರಗಳಾಗಿ ಕಂಡುಬರುತ್ತವೆ ಎನ್ನುವುದರಲ್ಲಿ ಅನುಮಾನವಿಲ್ಲ. ಹಾಗಾಗಿ ಈ ಬಗೆಗೆ ಶಿಕ್ಷಣ ತಜ್ಞರು, ಭಾಷಾಧ್ಯಯನಕಾರರು ಭಾಷಾಯೋಜಕರು, ಭಾಷಾಚಿಂತಕರು, ಭಾಷಾಭಿವೃದ್ಧಿಯ ಮಾದರಿಗಳನ್ನು ರೂಪಿಸುವವರು ಇಲ್ಲಿ ನಡೆಸಿರುವ ಕನ್ನಡದ ಮೂಲಕ ಕನ್ನಡವನ್ನು ಕುರಿತು ಒಟ್ಟಾಗಿ ಅಲೋಚಿಸುವುದು ಮುಖ್ಯವಾಗಿದೆ.

**ಡಾ. ಕೆ. ವಿ. ನಾರಾಯಣ ಅವರ ಭಾಷಾಧ್ಯಯನದ ಪುಸ್ತಕಗಳನ್ನು ಕುರಿತ ಸಮೀಕ್ಷೆ**

೧. **ನಮ್ಮೊಡನೆ ನಮ್ಮ ಕನ್ನಡ** (೨೦೦೫)

೨. **ಕನ್ನಡ ಜಗತ್ತು : ಅರ್ಧಶತಮಾನ** (೨೦೦೭)

೩. **ತೊಂಡುಮೇವು ಕಂತೆ-೩,೪,೫,೬,೭,೮,೯** (೨೦೧೦)

ಕನ್ನಡದ ಪ್ರಮುಖ ಭಾಷಾ ವಿದ್ವಾಂಸರಲ್ಲಿ ಡಾ. ಕೆ. ವಿ. ನಾರಾಯಣ ಕೂಡ ಒಬ್ಬರು. ನಾಲ್ಕು ದಶಕಗಳ ಬರಹದ ಯಾತ್ರೆಯಲ್ಲಿ ಇವರು ಕಳೆದ ಎರಡು ದಶಕಗಳ ಕಾಲ ಭಾಷಾಧ್ಯಯನ ಕ್ಷೇತ್ರದಲ್ಲಿ ಗಂಭಿರವಾಗಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅಲ್ಲದೆ ಅವರು ರೂಪಿಸಿದ ಕನ್ನಡ ಭಾಷಿಕ ಚಿಂತನೆಗಳು ನಿಜಕ್ಕೂ ಅನನ್ಯವಾದುವು. ಕನ್ನಡವು ಚಾರಿತ್ರಿಕವಾಗಿ ಮತ್ತು ಪ್ರಸ್ತುತದಲ್ಲಿ ಎದುರಿಸುತ್ತಿರುವ ಸವಾಲುಗಳನ್ನು ನಾಳೆಯೊಂದಿಗೆ ಮುಖಾಮುಖಿಯಾಗುತ್ತಲೇ ಕನ್ನಡತ್ವದ ಶಕ್ತಿಯನ್ನು ಪ್ರಸ್ತುತ ಪಡಿಸಲು ಪ್ರಯತ್ನಿಸುತ್ತಾರೆ. ಜಾಗತಿಕ ಮಟ್ಟದಲ್ಲಿ ಭಾಷೆಯ ಬಗೆಗೆ ನಡೆದಿರುವ ಮತ್ತು ನಡೆಯುತ್ತಿರುವ ಚಿಂತನೆಗಳನ್ನು ಕನ್ನಡದ ಓದುಗರಿಗೆ ಪರಿಚಯಿಸುತ್ತಲೇ ಅವುಗಳ ಶಕ್ತಿ ಮತ್ತು ಮಿತಿಗಳ ಅರಿವನ್ನು ಏಕಕಾಲದಲ್ಲೇ ಕಾಣಿಸುತ್ತಾರೆ. ಭಾಷೆ ಮತ್ತು ಸಂಸ್ಕೃತಿ ಕುರಿತ ಇವರ ಚಿಂತನೆಗಳು ಕನ್ನಡದ ಸೃಜನಶೀಲತೆಯ ಸ್ವರೂಪವನ್ನೂ, ಈ ಸೃಜನಶೀಲತೆಯನ್ನು ಗ್ರಹಿಸಲು ಯತ್ನಿಸುವ ಕನ್ನಡತ್ವ ಪ್ರಜ್ಞೆಯನ್ನೂ ಶೋಧನೆಯ ಮಾರ್ಗಗೊಳಿಸುತ್ತದೆ. ಭಾಷೆಯ ಹಲವು ಪದರುಗಳನ್ನು ವಿವರಿಸುತ್ತಾರೆ. ಶಾಸ್ತ್ರೀಯವಾದಂತಹ ಅಧ್ಯಯನವನ್ನು ಈಗಾಗಲೇ ಇರುವ ಮಾದರಿಗಳನ್ನು ಮೀರಿ ಒಳನುಗ್ಗುವಂತೆಯೇ ಹೊರಗಿನ ಅಥವಾ ಅನ್ಯಜ್ಞಾನ ಮಾರ್ಗಗಳ ಮೂಲಕವಾಗಿಯೂ ಭಾಷೆಯನ್ನು ಸೃಜನಾತ್ಮಕವಾಗಿ ಎದುರಾಗುತ್ತಾರೆ. ಆ ಮೂಲಕ ಕನ್ನಡ ಭಾಷಾಧ್ಯಯನ ಕ್ಷೇತ್ರದ ಅಥವಾ ಪಾರಂಪರಿಕ ಮಿತಿಗಳನ್ನು ವಿಸ್ತರಿಸುತ್ತಾರೆ. ಅಲ್ಲದೆ ಭಾಷೆಯ ಬಗ್ಗೆ ಈಗಾಗಲೇ ಇರುವ, ನೋಡುವ ಪರಿಕರಗಳ ಕ್ರಮವನ್ನು ಇವರು ಒಪ್ಪುವುದಿಲ್ಲ. ಅಂದರೆ ಸಿದ್ಧ ಮಾದರಿಗಳೆನ್ನುವ ಕನ್ನಡಕವನ್ನು ತೆಗೆದು ನಮ್ಮದೇ ಆದ ಕಣ್ಣುಗಳ ಮೂಲಕ ಗ್ರಹಿಸುವುದು ಸೂಕ್ತವೆಂಬುದು ಇವರ ನಂಬಿಕೆ. ಸಂಸ್ಕೃತ ವ್ಯಾಕರಣ ಮಾದರಿ, ಪಾಶ್ಚಾತ್ಯ ಸಿದ್ಧಾಂತ ಮಾದರಿ ಮುಂತಾದ ನೆಲೆಗಳಲ್ಲಿ ನರಳುತ್ತಿದ್ದ ಭಾಷಾಧ್ಯಯನವು ಅವುಗಳನ್ನು ಮೀರಿ ತಮ್ಮದೇ ಆದ ಹೊಸಕ್ರಮದಲ್ಲಿ ಪ್ರಮೇಯಗಳನ್ನು ಸೃಷ್ಟಿಸುತ್ತಲೇ ಸಮಸ್ಯೆ, ಸವಾಲು, ವಾಸ್ತವ, ಸತ್ಯಗಳನ್ನು ತಿಳಿಯಲು ಯತ್ನಿಸುತ್ತಾರೆ. ಪ್ರಮೇಯ ಮತ್ತು ವ್ಯಾಖ್ಯಾನ ಪರವಾದ ಇವರ ಬರವಣಿಗೆ ಪೊಳ್ಳುತನದ್ದಲ್ಲ ಅಥವಾ ಬೋಳೆತನವೂ ಅಲ್ಲ. ಇವರ ಒಟ್ಟು ಬರವಣಿಗೆಯಲ್ಲಿ

ಖಚಿತವಾದ ನಿಲುವುಗಳು ಹಾಗೂ ಬೆಲೆಕಟ್ಟುವಿಕೆಗಳು ಓದುಗನನ್ನು ತಟ್ಟುವಂತೆ ಅಥವಾ ಪಾಲುದಾರನನ್ನಾಗಿಸುತ್ತದೆ. ಕನ್ನಡ ಭಾಷಾಧ್ಯಯನ ಹಿಂದಿನಿಂದಲೂ ಬಂದ ಕ್ರಮವನ್ನು, ಪ್ರಸ್ತುತತೆಯನ್ನೂ ಆ ಭಾಷಿಕರನ್ನು ದೂರವಿಟ್ಟು ಅಥವಾ ಮರೆತು ಭಾಷೆಯನ್ನು ಪ್ರವೇಶಿಸುವುದಿಲ್ಲ. ಆ ಭಾಷಿಕರ ಬದುಕಿನ, ಚರಿತ್ರೆಯ ಅವರು ಅನುಭವಿಸುತ್ತಿರುವ ಒತ್ತಡಗಳ ಹಿನ್ನಲೆಯಲ್ಲಿ ನೋಡುವ ಇವರು ಅನೇಕ ಒಳನೋಟಗಳನ್ನು ಹೊಳೆಸುತ್ತಾರೆ.

ಹಾಗೆಂದು ಇವರು ಹಳೆಯದನ್ನು ಇಡಿಯಾಗಿ ತಿರಸ್ಕರಿಸುತ್ತಾರೆ ಮತ್ತು ಹೊಸದನ್ನು ಸಂಪೂರ್ಣವಾಗಿ ಎತ್ತಿಹಿಡಿಯುತ್ತಾರೆಂದು ಖಂಡಿತ ಅಲ್ಲ. ಇವತ್ತಿನ ಅಗತ್ಯಗಳಿಗೆ ತಕ್ಕಂತೆ ಹಳೆಯದನ್ನೂ ಹೊಂದಿಸಿಕೊಳ್ಳುತ್ತಾರೆ. ಹೀಗೆಂದ ತಕ್ಷಣ, ತಕ್ಷಣದ ಅಗತ್ಯಗಳ ಪೂರೈಕೆಯ ತತ್ಕಾಲೀನವೆಂದು ಇವರು ಎಂದೂ ಭಾವಿಸುವುದಿಲ್ಲ. ಈ ಕ್ರಮದಲ್ಲಿ ತುಂಬಾ ಎಚ್ಚರಿಕೆಯನ್ನು ವಹಿಸುತ್ತಾರೆ. ಸದ್ಯದ ಸವಾಲಿಗೆ ಹತ್ತು ದಿಕ್ಕುಗಳನ್ನು ತಡಕಿ ಪೂರ್ವ – ಪಶ್ಚಿಮಗಳನ್ನು ತೂಗಿ ವಿವರಿಸುತ್ತಾರೆ. ಹೀಗಾಗಿಯೇ ಇವರ ಬರವಣಿಗೆ ತಕ್ಷಣಕ್ಕೆ ಸ್ಪಂದಿಸುವ ತುರ್ತಿನಿಂದ ಬಂದರೂ ನೂರುಕಾಲಕ್ಕೆ ಬದುಕುವ ಶಕ್ತಿ ಖಂಡಿತವಾಗಿ ಇದ್ದೇ ಇದೆ.

ಭಾಷಾಧ್ಯಯನವನ್ನು ಅಸ್ಪೃಶ್ಯಗೊಂಡ ಕ್ಷೇತ್ರವಾಗಿ ಕಾಣುವುದಿಲ್ಲ. ಬದಲಿಗೆ ಅಂತಹ ಸ್ಥಿತಿಗೆ ಇರುವ ಕಾರಣಗಳನ್ನು ಕಂಡುಕೊಳ್ಳಲು ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ, ಚಾರಿತ್ರಿಕ ಮತ್ತು ಭಾಷಿಕಗಳೊಂದಿಗೆ ಹತ್ತು – ಹಲವು ಜ್ಞಾನ ಶಾಖೆಗಳನ್ನು ಮಡಿಲಲ್ಲಿ ಕಟ್ಟಿಕೊಂಡಿರುತ್ತಾರೆ. ಆ ಮೂಲಕ ಭಾಷಾಧ್ಯಯನ ಕ್ಷೇತ್ರವನ್ನು ಮತ್ತಷ್ಟು ವಿಸ್ತರಿಸುತ್ತಾರೆ. ಇಂತಹ ಹಲವು ಕಾರಣಗಳಿಂದಾಗಿ ಡಾ. ಕೆ. ವಿ. ನಾರಯಣ ಅವರ ಭಾಷಿಕ ಚಿಂತನೆಗಳು ನಮಗೆ ಅಗತ್ಯವಾದವು.

ನಾಲ್ಕು ದಶಕಗಳ ಹಿಂದೆ ಸಾಹಿತ್ಯ ವಿಮರ್ಶೆಯ ಮೂಲಕ ಆರಂಭವಾದ ಇವರ ಬರವಣಿಗೆ ಮತ್ತು ಕನ್ನಡ ಜಗತ್ತು ಎದುರಿಸುತ್ತಿರುವ ಸವಾಲು ಮತ್ತು ಆತಂಕಗಳನ್ನು ಬಿಡಿಸುವುದರಲ್ಲಿ ಸದ್ಯ ತಲ್ಲೀನರಾಗಿದ್ದಾರೆ. ತೊಂಡುಮೇವು ಸಂಪುಟಗಳಿಗೆ ನಡೆದು ಬಂದ ದಾರಿಯತ್ತ ತಿರುಗಿ ನೋಡುತ್ತ ಭಾಷಿಕ ಚಿಂತನೆ ಅನಿವಾರ್ಯತೆಯನ್ನು ಕುರಿತು ಹೀಗೆ ಹೇಳುತ್ತಾರೆ. 'ಭಾಷೆಯ ಮೈಯನ್ನು ಕೃತಿಯನ್ನು ತಿಳಿಯುವ ಮೊದಲು ಮತ್ತು ಕೊನೆಯ ಪರಿಕರವನ್ನಾಗಿ ಬಳಸುವ ಹಾದಿಯಲ್ಲಿ ಸಾಗಿದ ಮೇಲೆ ಭಾಷೆಯೇ ಇಲ್ಲಿನ ಬರೆಹಗಳ ಮುಖ್ಯ ಭಿತ್ತಿಯಾಗುವುದನ್ನು ಕಾಣಬಹುದು. ಇಲ್ಲಿಂದ ಬರೆಹಗಳ ಮುಖ್ಯ ನೆಲೆ ಕೇವಲ ಭಾಷೆಯೇ ಇಲ್ಲಿನ

ಬರೆಹಗಳ ಮುಖ್ಯ ಭಿತ್ತಿಯಾಗುವುದನ್ನು ಕಾಣಬಹುದು. ಇಲ್ಲಿಂದ ಬರೆಹಗಳ ಮುಖ್ಯ ನೆಲೆ ಕೇವಲ ಭಾಷೆಯೇ ಆಗಿಬಿಟ್ಟಿವೆ. ಇದಕ್ಕೆ ನಾನು ಕೆಲಸ ಮಾಡತೊಡಗಿದ್ದ ಕನ್ನಡ ವಿಶ್ವವಿದ್ಯಾಲಯದ ವಾತಾವರಣ, ಹೊಣೆ ಮತ್ತು ಅಲ್ಲಿನ ಬೇಡಿಕೆಗಳೂ ಕಾರಣವಾಗಿರಬಹುದು. ಜೊತೆಗೆ ಕಳೆದ ಶತಮಾನದ ಕೊನೆಯ ದಶಕದಿಂದ ಮೊದಲಾಗಿ ಕನ್ನಡ ಭಾಷೆಯನ್ನು ಆತಂಕದಲ್ಲಿರುವ ನುಡಿಯೆಂದು ತಿಳಿದು ಚಿಂತಿಸುವ ಬಗೆ ಬಲವಾಗಿ ಬೇರೂರಿತು. ಅದನ್ನು ಹೀಗೆ ಹೇಳೋಣ ಕನ್ನಡದಂತಹ ನುಡಿಗಳು ಮತ್ತು ಅದನ್ನು ಅವಲಂಬಿಸಿದ ಸಂಸ್ಕೃತಿಗಳು ಜಾಗತೀಕರಣದ ಉರುಬಿನಲ್ಲಿ ಎದುರಿಸುತ್ತಿರುವ ಬಿಕ್ಕಟ್ಟುಗಳು ಎಲ್ಲರ ಎದುರು ಸವಾಲಾಗಿ ನಿಂತಿವೆ. ಇವು ಕಲ್ಪಿಸಿಕೊಂಡ ಹೋರಾಟದ ನೆಲೆಗಳಲ್ಲ ದಿಟವಾಗಿಯೂ ಎದುರಿಸುತ್ತಿರುವ ಬಿಕ್ಕಟ್ಟುಗಳು. ಈ ಬಿಕ್ಕಟ್ಟುಗಳಿಗೆ ಚಾರಿತ್ರಿಕ ಒತ್ತಡಗಳಿರುವಂತೆ ಜಾಗತೀಕವಾದ ಒತ್ತಡಗಳೂ ಕಾರಣವಾಗಿವೆ. ಇವೆಲ್ಲವನ್ನೂ ಅರಿಯುವುದು, ಅರಿಯಲು ಬೇಕಾದ ಪರಿಕರಗಳನ್ನು ಹುಡುಕಿಕೊಳ್ಳುವುದು ಇಂದಿನ ಅಗತ್ಯವಾಗಿದೆ.[೨] ಹೀಗೆ ಡಾ. ಕೆ. ವಿ. ನಾರಾಯಣ ಅವರು ಒಂದು ಅನಿವಾರ್ಯತೆಯನ್ನು ಸೃಷ್ಟಿಸಿಕೊಂಡು ಎದುರಾಗುವ ಅಥವಾ ಆವಾಹಿಸಿಕೊಳ್ಳುವ ಜವಾಬ್ದಾರಿಯೇ ಮುಖ್ಯವಾದುದು. ಯಾಕೆಂದರೆ ಒಬ್ಬ ದೊಡ್ಡ ಚಿಂತಕನಿಗೆ ಎದುರಾಗುವ ಆತಂಕ ವೈಯಕ್ತಿಕವಾದದ್ದಾಗಿರುವುದಿಲ್ಲ. ಒಂದು ಸಮಾಜದ, ಸಮೂಹದ ಧಾತುವಾಗಿರುತ್ತದೆ. ಹೀಗಾಗಿಯೇ ಆ ಸವಾಲುಗಳಿಂದ ಅಥವಾ ಕನ್ನಡಿಗರು ಎದುರಿಸುತ್ತಿರುವ ಬಿಕ್ಕಟ್ಟುಗಳಿಂದ ಹೊರಬರಲು ಕನ್ನಡಿಗರು ಸವೆಸಬೇಕಾಗಿರುವ ದಾರಿಗಳ ಹುಡುಕಾಟವಾಗಿದೆ. ಇಂತಹ ಹುಡುಕಾಟಗಳ ಮೂಲಕ ಕನ್ನಡ ಭಾಷಾಧ್ಯಯನ ಕ್ಷೇತ್ರವನ್ನು ಸಮರ್ಥವಾಗಿ ಬೆಳೆಸುತ್ತ ಕನ್ನಡ ವಿದ್ವತ್ ಲೋಕವನ್ನೂ ಬೆಳೆಸುತ್ತಿದ್ದಾರೆ. "ಭಾಷೆಯ ಸುತ್ತಮುತ್ತ, ಮತ್ತೆ ಭಾಷೆಯ ಸುತ್ತಮುತ್ತ, ನಮ್ಮೊಡನೆ ನಮ್ಮ ನುಡಿ, ಕನ್ನಡ ಜಗತ್ತು : ಅರ್ಧಶತಮಾನ, ದ್ವಿಭಾಷಿಕತೆ, ಅಲ್ಲದೆ ಅವರ ಸಂಪಾದಿತ : ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ – ೧ ಭಾಷೆ – ಇವು ಕನ್ನಡಕ್ಕೆ ಮಹತ್ವದ ಕೊಡುಗೆಗಳಾಗಿವೆ. ಇವನ್ನು ಒಳಗೊಂಡಂತೆ ೨೦೧೦ರಲ್ಲಿ ತೊಂಡು ಮೇವು ಒಂಬತ್ತು ಸಂಪುಟಗಳಲ್ಲಿ ಸುಮಾರು ಮೂರು ಸಾವಿರ ಪುಟಗಳ ವ್ಯಾಪ್ತಿಯಲ್ಲಿ ಪ್ರಕಟಗೊಂಡ ಸಂಪುಟಗಳಲ್ಲಿ ಕನ್ನಡ ಜಗತ್ತಿನ ಅನಾವರಣವನ್ನು ಕಾಣಬಹುದಾಗಿದೆ. ಅವರ ಈ ಕೃತಿಗಳಲ್ಲಿ ಕನ್ನಡ ಭಾಷಾಧ್ಯಯನ ಕ್ಷೇತ್ರಕ್ಕೆ ಹೊಸರೂಪವನ್ನು ನೀಡಿರುವುದು ಸ್ಪಷ್ಟ. ಅವರು ಅಧ್ಯಯನದ ಈ ಪ್ರಕ್ರಿಯೆಯಲ್ಲಿ ನೋಮ್ ಚಾಮ್ಸ್ಕಿ ಅವರ ಭಾಷಿಕ ಚಿಂತನೆಗಳು ಎಷ್ಟು ಆಳವಾಗಿ ಪ್ರಭಾವಿಸಿವೆಯೋ ಅಷ್ಟೇ ಆಳವಾಗಿ ಕನ್ನಡ ಜಗತ್ತಿನಿಂದಲೇ ರೂಪಿಸಿಕೊಂಡಿದ್ದಾರೆ. ಅವರ "ನಮ್ಮೊಡನೆ

ನಮ್ಮ ನುಡಿ", "ಕನ್ನಡ ಜಗತ್ತು : ಅರ್ಧಶತಮಾನ" "ತೊಂಡಮೇವು-ಕಂತೆ-ಆರು" ಕೃತಿಗಳನ್ನು ಓದಿದರೆ ಈ ಮೇಲಿನ ಮಾತು ಅರ್ಥವಾಗುತ್ತದೆ. ಅವರ ಚಿಂತನೆಯ ವ್ಯಾಪ್ತಿ ವಿಸ್ತರಿಸಿರುವುದು ಮತ್ತು ಬೆಳೆದಿರುವುದು ಕನ್ನಡದ ಸೋಲು ಗೆಲುವುಗಳನ್ನು ರಾಜಕೀಯ, ಸಾಂಸ್ಥಿಕ ನಂಬಿಕೆಗಳ ಹಿನ್ನೆಲೆಯಲ್ಲಿ ಅನ್ಯಜ್ಞಾನ ಶಿಸ್ತುಗಳ ಮುಖೇನ ವಿಮರ್ಶಿಸುತ್ತ ಮುನ್ನಡೆದಿರುವುದು ಸ್ಪಷ್ಟ. ಕನ್ನಡ ಸೋಲಿಗೆ ಕಾರಣವಾಗಿರುವ ಸಂಗತಿಗಳನ್ನು ವಿಮರ್ಶೆ ಮಾಡುವ ಕ್ರಮದಲ್ಲಿಯೇ ಅವರ ಕನ್ನಡ ಪರ ಕಾಳಜಿ ನೆಲೆಸಿದೆ. ಕನ್ನಡದ ಏಳುಬೀಳುಗಳನ್ನು ಪರಿಚಯಿಸುತ್ತಲೇ ಕನ್ನಡಿಗರು ಸಾಗಬೇಕಿರುವ ಕಷ್ಟದ ಹಾದಿಗಳನ್ನು ಪರಿಚಯಿಸುತ್ತಾರೆ. ಅಥವಾ ಸಾಗಬೇಕಿರುವ ಕಷ್ಟದ ಹಾದಿಗಳನ್ನು ಪರಿಚಯಿಸುತ್ತಾರೆ. ಅಥವಾ ಅಂತಹ ದಾರಿಯ ಅನಿವಾರ್ಯತೆಯನ್ನು ಕಾಲಘಟ್ಟಗಳು ರೂಪಿಸಿದ್ದು ಮತ್ತು ಜಾಗತಿಕ, ಮಾರುಕಟ್ಟೆಯ ಸ್ವರೂಪ ತಾಳಿದ ಜಗತ್ತು ಚಲಿಸುತ್ತಿರುವುದು. ಕನ್ನಡದ ಹಲವು ವ್ಯವಹಾರಗಳು ತಾಕಬೇಕಾದ ನಿಲುವುಗಳು ರೂಪಿಸುತ್ತಿರುವುದನ್ನು ಮುಂದಿಡುತ್ತಾರೆ.

ಡಾ. ಕೆ. ವಿ. ನಾರಾಯಣ ಅವರು ಆರಂಭದ ಎರಡು ದಶಕಗಳ ಕಾಲ ಸಾಹಿತ್ಯದ ಚಟುವಟಿಕೆಯಲ್ಲಿ ಕ್ರಿಯಾಶೀಲರಾಗಿದ್ದರೂ ಭಾಷಾಧ್ಯಯನ ಅಥವಾ ಭಾಷಾ ವಿಜ್ಞಾನದಿಂದ ತುಸು ದೂರವೇ ಇದ್ದರು. ಅಥವಾ ಇನ್ನೂ ಆಸಕ್ತಿ ತಾಳಿರಲಿಲ್ಲ. ಆದರೆ ದೂರದಿಂದ ಕಾಣುವ ಸತ್ಯ ಹತ್ತಿರ ಹೋದಾಗ ಅಥವಾ ಅದರಲ್ಲಿ ಮುಳುಗಿದಾಗ ದಕ್ಕುವ ಅಥವಾ ಎದುರಾಗುವ ಸತ್ಯಗಳೇ ಬೇರೆಯಾಗಿರುತ್ತವೆ. ದೂರದಿಂದ ಬಿರುಕುಗಳಿಲ್ಲದಂತೆ ಕಾಣುತ್ತಿದ್ದ ನೆಲೆಗಳು ಹತ್ತಿರ ಹತ್ತಿರ ಹೋಗುತ್ತಿದ್ದಂತೆ ಹಲವಾರು ಬಿರುಕುಗಳಿರುವ ರಚನೆಗಳೆಂದು ತೋರತೊಡಗಿದ್ದು. ಇದನ್ನು ಕನ್ನಡ ಸಂಸ್ಕೃತಿಗೆ ಹೊಂದಿಸಿಕೊಂಡು ನೋಡಬೇಕಾಗಿದೆ. ಅಂತಹ ಬಿರುಕುಗಳಿಗೆ ಇರುವ ಕಾರಣಗಳನ್ನು ಹುಡುಕಲು ಇವರು ಕನ್ನಡ, ಸಂಸ್ಕೃತ, ಮತ್ತು ಜಾಗತೀಕವಾಗಿ ನಡೆದ ಭಾಷೆಯ ಚಿಂತನೆಗಳನ್ನು ವ್ಯಾಪಾಕವಾಗಿ ನಡೆಸಿದ ಅಧ್ಯಯನ ಅನುಭವವೇ ಇವರಿಗೊಂದು ಅಘಾತಾನುಭವ, ಏಕೆಂದರೆ ಕನ್ನಡ ನುಡಿಯೂ ಕೂಡ ನಾವು ಆವರೆಗೆ ತಿಳಿದಂತೆ ಎಲ್ಲರ ಕನ್ನಡವಾಗಿರುವ ಬದಲು ಕೆಲವರ ಕನ್ನಡವೇ ಎಲ್ಲರ ಕನ್ನಡವೆಂದು ಸೋಗು ತೊಟ್ಟಿತ್ತೆಂಬುದು ಈಗ ಕಣ್ಣಿಗೆ ರಾಚತೊಡಗಿತ್ತು. ಇದೆಲ್ಲದರ ಹಿಂದಿನ ರಾಜಕಾರಣವನ್ನು ಸರಿಯಾದ ನಿಟ್ಟಿನಲ್ಲಿ ಅರಿಯುವುದು ಇಂದಿನ ಅಗತ್ಯವಾಗಿದೆ.

ಇಂಗ್ಲೀಶ್ ಮತ್ತು ಸಂಸ್ಕೃತದ ಮುಖವಾಡದಲ್ಲಿ ಅಡಗಿರುವ ಕನ್ನಡದ ಮಾತುಗಳನ್ನೂ ದರ್ಶಿಸಲೆತ್ನಿಸುತ್ತಾರೆ. ಕೆಲವರ ಕನ್ನಡವನ್ನು ಎಲ್ಲರ ಕನ್ನಡವೆಂದು ಈವರೆಗೂ ನಂಬಿಸಲಾಗಿತ್ತು: ಅಷ್ಟೆ ಅಲ್ಲ ಈಗಲೂ ಅಂತಹ ದೂರದ ನಂಬಿಕೆ

ಉಸಿರಾಡುತ್ತಿದೆ. ಇವರಂತೆ ಡಾ. ಡಿ. ಎನ್. ಶಂಕರಭಟ್ ಅವರು ಸಹ "ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ"ವೆಂದಾಗ ಅದನ್ನು ಪುರಸ್ಕರಿಸಿದವರಿಗಿಂತ ತಿರಸ್ಕಾರದಿಂದ ಕಂಡ ಪಾರಂಪರಿಕ ಮನಸ್ಸುಗಳೇ ಹೆಚ್ಚು. ಎಲ್ಲರ ಕನ್ನಡವೆಂದ ಪಾರಂಪರಿಕ ಸೋಗನ್ನು ಕೆ. ವಿ. ಎನ್. ಅವರು ಎಳೆ ಎಳೆಯಾಗಿ ಬಿಚ್ಚಿಟ್ಟರು. ಅಂತಹದರ ಹಿಂದಿನ ಭಾಷಿಕ ರಾಜಕಾರಣದ ವಿವಿಧ ಆಯಾಮಗಳು ಇವರ ಬರಹದುದ್ದಕ್ಕೂ ವಿವರಣೆಗೆ ಒಳಪಟ್ಟಿದೆ. ಪ್ರಭುತ್ವ ತಮ್ಮನ್ನು ತಾವು ಕೊಡುವವರು ಜನಸಾಮಾನ್ಯರು ಪಡೆಯುವವರು ಎಂದು ಭಾವಿಸಿರುವುದು, ಅಕ್ಷರ ಜಗತ್ತು ಕೆಲವು ಜನರ ಕಪಿಮುಷ್ಟಿಗೆ ಸಿಕ್ಕಿದ್ದು. ಅನಂತರ ಬಿಡಿಸಿಕೊಂಡಾಗಲೂ ಅವರು ರೂಪಿಸಿದ ನಿಯಮಗಳೊಂದಿಗೆ ಬೀದಿಗೆ ಬಂದದ್ದು: ಇಂತಹ ಹಲವು ಅಸಮಾನವಾದ ಸಂಬಂಧಗಳೂ ಕೂಡ ಭಾಷೆ, ಜನ, ಸಂಸ್ಕೃತಿಯೂ ಹೇಗೆ ಬಡವಾಗುತ್ತವೆ ಎಂಬ ವೈಜ್ಞಾನಿಕವಾದ ನಿಲುವುಗಳನ್ನು ಮಂಡಿಸಿದ್ದಾರೆ.

ಜಾಗತೀಕರಣ ಅಥವಾ ಮಾರುಕಟ್ಟೆಯ ರೂಪತಾಳುತ್ತಿರುವ ಇವತ್ತಿನ ಅಥವಾ ಬರುವ ಕಾಲದಲ್ಲಿ ಕನ್ನಡವು ನಾಶವಾಗುತ್ತಿದೆ ಎಂಬ ಕೂಗು ಹೆಚ್ಚಾಗುತ್ತಿದೆ. ಅಲ್ಲದೆ ಕನ್ನಡ ಪರ ಹಲವು ಚಿಂತಕರೂ ಪದೇ ಪದೇ ಹೇಳುವುದು ಇದೆ. ಆದರೆ ಅದರ ನಿಜವಾದ ಕಾರಣಗಳನ್ನು ಅರ್ಥಮಾಡಿಕೊಳ್ಳುವಲ್ಲಿ ಸೋಲುತ್ತಿದ್ದಾರೆ. ಕೆ. ವಿ. ಎನ್. ಅವರು ಇಂತಹ ಸನ್ನಿವೇಶದಲ್ಲಿ ಭಾಷೆಯನ್ನು, ಸಾಂಸ್ಕೃತಿಕ, ಶೈಕ್ಷಣಿಕ, ರಾಜಕೀಯ, ಸಾಮಾಜಿಕ ನೆಲೆಗಳನ್ನು ವಿಶ್ಲೇಷಿಸುತ್ತ ಕನ್ನಡದ ಆತಂಕಗಳ ಹತ್ತು ಹಲವು ಮುಖಗಳನ್ನು ಬಿಚ್ಚಿಡುತ್ತಾರೆ. ಪ್ರಸ್ತುತ ಸಂದರ್ಭದಲ್ಲಿ ಇಂಗ್ಲೀಷ್ ಮತ್ತು ತಂತ್ರಜ್ಞಾನದ ವ್ಯಾಪಕ ಬೆಳವಣಿಗೆಯಿಂದ ಕನ್ನಡ ಎದುರಿಸುತ್ತಿರುವ ಸಮಸ್ಯೆಯನ್ನು ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಹಾಗೆಯೇ ಒಂದು ಭಾಷೆಯ ಹಲವು ವೈವಿಧ್ಯತೆಗಳನ್ನು ಭಿನ್ನತೆಗಳು ಜನಸಮುದಾಯಗಳನ್ನು ಸಾಂಸ್ಕೃತಿಕವಾದ ಚಲನೆಯನ್ನು ಅರ್ಥಮಾಡಿಕೊಳ್ಳಲು ರೂಪಿತ ಸಿದ್ಧಾಂತಗಳ ಕನ್ನಡಕವನ್ನೂ ಹಾಕಿಕೊಂಡು ಪ್ರವೇಶಿಸುವುದಿಲ್ಲ ಬದಲಾಗಿ ಆಯಾ ಪರಿಸ್ಥಿತಿ, ಸ್ವರೂಪಗಳನ್ನು ತಿಳಿಯುವುದರ ಮೂಲಕ ಕನ್ನಡ ಪರ ಚಿಂತನೆಗಳನ್ನೂ ಮಂಡಿಸುತ್ತಾರೆ. ಕನ್ನಡಗಳು: ನಮಗಿರುವ ಆಯ್ಕೆಗಳೇನು? ಕನ್ನಡ ಉಳಿಯುವುದೇ? ಕನ್ನಡ ಈ ಶತಮಾನದ ಹೊಸ ಸವಾಲುಗಳು, ಕನ್ನಡ ಮತ್ತು ತಂತ್ರಜ್ಞಾನ, ಕನ್ನಡದ ಕೆಸರು ಗದ್ದೆಯಲ್ಲಿ ಇಂಗ್ಲೀಷ್‌ನ ವೈಹಾಳಿ, ಸಂಸ್ಕೃತ ವಿಶ್ವವಿದ್ಯಾಲಯ ಯಾಕೆ ಬೇಕು? ಮುಂತಾದ ಲೇಖನಗಳ ಮುಖ್ಯ ಕಾಳಜಿ ಗ್ರಹಿಸಬಹುದಾಗಿದೆ. ಹಾಗಾಗಿಯೇ "ಕನ್ನಡವು ಹೀಗೆ ನಿರಂತರವಾಗಿ ಬದಲಾಗುತ್ತಿದೆ. ಆ ಬದಲಾವಣೆಯ ಪರಿಣಾಮವಾಗಿ ಮುಂದೆಯೂ ಕನ್ನಡ ಇದ್ದೇ ಇರುತ್ತದೆ.

ಮೊದಲೇ ಹೇಳಿದಂತೆ – ಅದು ಗುರುತು ಹಿಡಿಯಲಾರದಷ್ಟು ಬೇರೆಯ ಆಕಾರವನ್ನು ಪಡೆಯಬಹುದು. ಹೀಗೆ ಮೂಲ ಆಕಾರ ಕಳೆದು ಹೋಗುವುದಕ್ಕೆ ಆತಂಕ ವ್ಯಕ್ತಪಡಿಸುವುದು ಅಷ್ಟೇನು ಸರಿಯಾದ ಪ್ರಕ್ರಿಯೆ ಅಲ್ಲ. ಏಕೆಂದರೆ ಒಂದು ಭಾಷೆ ಹೀಗೆ ಬೇರೆ ಬೇರೆ ಆಕಾರಗಳನ್ನು ಪಡೆಯುವುದು ಅದರ ಜೈವಿಕತೆಯ ಲಕ್ಷಣವಾಗಿದೆ[೪]. ಎನ್ನುತ್ತಾರೆ. ಕೆ. ವಿ. ಎನ್. ಅವರು ಕನ್ನಡ : ಆತಂಕಗಳು ಎನ್ನುವ ಲೇಖನದಲ್ಲಿ.

ಮತ್ತೊಂದು ಅವರ ಭಾಷಿಕ ಚಿಂತನೆಯ ಅಂಶವೆಂದರೆ ಭಾಷೆಯನ್ನು ಅಧ್ಯಯನದಲ್ಲಿ ಚಲನಶೀಲವಾಗಿ ಕಾಣುವುದು. ಅಂದರೆ ಈವರೆಗೆ ಭಾಷೆಯನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಅವೂ ಸಹ ಭಾಷೆಯನ್ನು ಚಲನಶೀಲವಾದದ್ದು; ಹರಿಯುವ ನೀರು ಇದ್ದಂತೆ – ಎಂದು ಹೇಳುತ್ತಲೇ ನಿಂತ ನೀರನ್ನು ಕುರಿತು ವಿಶ್ಲೇಷಣೆ ನಡೆಸುವುದು ಸಾಮಾನ್ಯವಾದ ಸಂಗತಿಯಾಗಿದೆ. ಕೆ. ವಿ. ಎನ್. ಅವರು ಚಲನಶೀಲವಾದ ನೆಲೆಯಲ್ಲಿಯೇ ಅಧ್ಯಯನಕ್ಕೆ ಒಳಪಡಿಸುತ್ತಾರೆ. ಹಾಗಾಗಿ ಇವರ ಬರಹಗಳೂ ವರ್ತಮಾನದಿಂದ ಭವಿಷ್ಯತ್ತಿನ ಕಡೆ ಮುಖಮಾಡಿರುವುದು ಹಲವು ಕನ್ನಡಗಳನ್ನು ಒಳಗೊಂಡುದಾಗಿದೆ. ಬದಲಾದ ಕಾಲಘಟ್ಟ ಸಹ ಕೆ. ವಿ. ಎನ್. ಅವರಿಗೆ ಮುಖ್ಯವಾಗಿರುತ್ತದೆ. ಹಲವು ಅಧ್ಯಯನಗಳು ತನ್ನ ಕಾಲದ ಭಾಷೆಯ ಸ್ವರೂಪವನ್ನು ದಾಖಲಿಸುವುದೇ ಇಲ್ಲ. ಹೀಗಾಗಲೇ ನಡೆದು ಬಂದ ದಾರಿಗೆ ಕಾಣಿಕೆ ಸಲ್ಲಿಸುತ್ತಿರುತ್ತಾರೆ. ಒಂದು ಹೊಸ ಪದ ಕೆ. ವಿ. ಎನ್. ಅವರ ಕಿವಿಗೆ ಬಿದ್ದರೆ ಅದು ಶಬ್ದದ ಒಳಗಿನಿಂದಲೇ ಅರ್ಥಮಾಡಿಕೊಳ್ಳುವ ಬೆಳಕಿನ ದಾರಿಗಳು ತೆರೆದುಕೊಳ್ಳುತ್ತವೆ. ಹೀಗಾಗಿಯೇ ಇವರ ತೊಂಡು ಮೇವು ಕಂತೆ – ಎಂಟು ಅಂತಹ ದೃಷ್ಟಿಕೋನದ ಕಂತೆಯಾಗಿದೆ. ಕನ್ನಡವು ಶಿಕ್ಷಣದಲ್ಲಿ, ಆಡಳಿತದಲ್ಲಿ, ನ್ಯಾಯಾಲಯದಲ್ಲಿ, ರಾಜಕಾರಣದಲ್ಲಿ, ಪ್ರಾದೇಶಿಕ ಸನ್ನಿವೇಶದಲ್ಲಿ, ಸಾಮಾಜಿಕ ಸನ್ನಿವೇಶದಲ್ಲಿ, ತಂತ್ರಜ್ಞಾನದಲ್ಲಿ ಭಾಷೆಯು ಹೇಗೆಲ್ಲ ರೂಪ – ವಿರೂಪವನ್ನು ಹೊಂದುತ್ತಿದೆ ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿ, ಕುತೂಹಲದಿಂದ, ಕಾಣುತ್ತ ವಿವರಿಸುವುದರಲ್ಲಿ ಕೆ. ವಿ. ಎನ್. ಅವರು ಹೆಚ್ಚು ಆಸಕ್ತರಾಗುತ್ತಾರೆ. ಆಯ್ಕೆಯ ಸವಾಲಿನ ದಾರಿಗಳನ್ನು ಭಾಷಿಕರಿಗೆ ಮುಂದಿಡುವುದು ಇವರ ಪ್ರಿಯವಾದ ಕೆಲಸ. ಇದನ್ನೇ ಆಯ್ಕೆಮಾಡಿ ಎನ್ನುವ ಆದೇಶ ಇವರ ನುಡಿಯಲ್ಲಿ ಇಲ್ಲ. ಮತ್ತು ಇರಬಾರದು ಎಂಬುದು ಕೂಡ ಸತ್ಯ.

## ಭಾಷಾವಿಜ್ಞಾನದ ಮೂಲ ತತ್ವಗಳು

### ( ೧೯೯೮ – ಐದನೆಯ ಮುದ್ರಣ) – ಡಾ. ಎಂ. ಚಿದಾನಂದಮೂರ್ತಿ

'ಭಾಷಾವಿಜ್ಞಾನದ ಮೂಲ ತತ್ವಗಳು' ಈ ಪುಸ್ತಕ ಮೊದಲು ಮುದ್ರಣಗೊಂಡದ್ದು ೧೯೬೫. ಭಾಷಾ ವಿಜ್ಞಾನವನ್ನು ಕುರಿತು ಅದಾಗಲೇ ಪಾಶ್ಚಾತ್ಯ ಚಿಂತಕರು ಸಾಕಷ್ಟು ಯೋಚಿಸಿಯಾಗಿತ್ತು. ಆ ಮೂಲಕ ಭಾಷೆಯೆಂದರೇನು? ಭಾಷೆಯನ್ನು ಹೇಗೆ ಅಧ್ಯಯನ ಮಾಡುವುದು. ಭಾಷೆಯು ಲೋಕದಲ್ಲಿ ಹೇಗೆ ಬದುಕುತ್ತದೆ? ಹೇಗೆ ಬದಲಾಗುತ್ತದೆ? ಇನ್ನೊಂದು, ಮತ್ತೊಂದು ಭಾಷೆಯೊಂದಿಗಿನ ಸಂಬಂಧದಿಂದ ಏನೆಲ್ಲ ಬದಲಾವಣೆಗಳು ಉಂಟಾಗಬಹುದು. ಒಂದು ಭಾಷೆಯಲ್ಲಿ ಅಥವಾ ಭಾಷೆಯ ಮೇಲೆ ಇನ್ನೊಂದು ಭಾಷೆಯ ಪರಿಣಾಮ ಪ್ರಭಾವಗಳು ಹೇಗೆ ನಡೆಯುತ್ತವೆ? ಹೀಗೆ ಹತ್ತಾರು ಪ್ರಶ್ನೆಗಳನ್ನು ಕೇಳಿಕೊಂಡು ವ್ಯಾಖ್ಯಾನ ಮತ್ತು ಉತ್ತರಗಳನ್ನು ಸಾಕಷ್ಟು ನೀಡಿದ್ದರು ಮತ್ತು ಆ ಬಗ್ಗೆ ಆಸಕ್ತಿ ಹೊಂದಿ ಕ್ರೀಯಾಶೀಲರಾಗಿದ್ದರು. ಕಂಡುಕೊಂಡ ವಿವರಗಳು ತೃಪ್ತಿಯಿಲ್ಲದಿದ್ದರೂ ಅದಾಗಲೆ ಸಾಕಷ್ಟು ಭಾಷಾವಿಜ್ಞಾನದ ತಿಳುವಳಿಕೆಯನ್ನು ಪಾಶ್ಚಾತ್ಯರು ಹೊಂದಿದ್ದರು. ಹೀಗೆ ಹಲವು ಪಾಶ್ಚಾತ್ಯ ಚಿಂತಕರ ಚಿಂತನೆಯ ಆಯಾಮಗಳನ್ನು ದಾಖಲಿಸಲಾಗಿತ್ತು. ಇನ್ನಷ್ಟು ಶೋಧದ ಹಂಬಲದೊಂದಿಗೆ ದೇಶ – ವಿದೇಶಗಳಲ್ಲಿ ತರಗತಿ, ತರಬೇತಿಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಇಂತಹ ಸನ್ನಿವೇಶದಲ್ಲಿ ಕರ್ನಾಟಕದ ಹಲವು ವಿದ್ವಾಂಸರ ಮೇಲೆಯೂ ಭಾಷಿಕ ತಿಳುವಳಿಕೆಯ ನೆಲೆಯಲ್ಲಿ ಪ್ರಭಾವ ಬೀರಿದವು. ಅಂತಹವರಲ್ಲಿ ಡಾ. ಎಂ. ಚಿದಾನಂದಮೂರ್ತಿ ಅವರು ಕೂಡ ಒಬ್ಬರು. ಅಂತಹ ಬೇಸಿಗೆ ಶಿಬಿರದಲ್ಲಿ ಪಾಲ್ಗೊಂಡ ಡಾ. ಎಂ. ಚಿದಾನಂದಮೂರ್ತಿಯವರು ತಮ್ಮನ್ನು ತೊಡಗಿಸಿಕೊಂಡು ಯೋಚಿಸಿದ್ದರ ಫಲವಾಗಿ "ಭಾಷಾವಿಜ್ಞಾನದ ಮೂಲ ತತ್ವಗಳು" ಕೃತಿಯಾಗಿದೆ. ಕನ್ನಡದ ಸನ್ನಿವೇಶದಲ್ಲಿ ಅದೇ ಸಮಯಕ್ಕೆ ಮೈಸೂರು, ಧಾರವಾಡ ವಿಶ್ವವಿದ್ಯಾಲಯಗಳ ಕಡೆಯಿಂದ ಪ್ರಖರವಾಗಿ ಅಲ್ಲದಿದ್ದರೂ ಭಾಷಾಶಾಸ್ತ್ರದ ಕುರಿತು ಯೋಚಿಸಲು ಆರಂಭಗೊಂಡ ಕಾಲ. ಕನ್ನಡದಲ್ಲಿ ಕವಿರಾಜಮಾರ್ಗ, ಶಬ್ಬಮಣಿದರ್ಪಣ ಸೇರಿದಂತೆ ಭಾಷೆ ವ್ಯಾಕರಣಾಂಶಗಳ ಕುರಿತು ಕೆಲ ಚಿಂತನೆಗಳು ಇದ್ದವು. ಅವು ಸಂಸ್ಕೃತದ ನೆರಳಿನಲ್ಲಿ ಇದ್ದವುಗಳಾಗಿದ್ದವು. ಭಾಷಾಶಾಸ್ತ್ರದ ಪರಿಕಲ್ಪನೆಯೂ ಹಾಗೆಯೇ ಮುಂದುವರಿಯುತ್ತಿತ್ತು. ಈ ಪಾಶ್ಚಾತ್ಯ ಪ್ರಭಾವವೂ ಒಂದು ಹೊಸ ಬಾಗಿಲನ್ನು ತೆಗೆಯಿತು.

ಆದರೂ ಈ ಪಾಶ್ಚಾತ್ಯ ಭಾಷಾವಿಜ್ಞಾನವು ಹಾಗೆ ತೂರಿ ಬರದ ಬೆಳಕಿನಲ್ಲೇ ಇವರ ಪ್ರಜ್ಞೆ ಬೆರಗುಗೊಂಡು ಕಳೆದಂತಿತ್ತೇ ವಿನಹ, ಕನ್ನಡ ಭಾಷೆಯ ನಿರ್ದಿಷ್ಟವಾದ ಹೊಸ ಲಕ್ಷಣಗಳನ್ನೇನು ಹೇಳಲಿಲ್ಲವೆಂದು ಕಾಣುತ್ತದೆ. ಅಂದರೆ ಪಾಶ್ಚಾತ್ಯರು ತಮ್ಮ ಭಾಷೆಯ ಸನ್ನಿವೇಶದಲ್ಲಿ ಕಂಡುಕೊಂಡ ಸಂಗತಿಗಳನ್ನು ನೇರವಾಗಿ ಕನ್ನಡದಲ್ಲಿ ಅನುವಾದ ಪ್ರಜ್ಞೆಯಲ್ಲಿ ಇವರ ಮನಸ್ಸು ಆಲೋಚನೆ ಮಾಡಿತು. ಹಾಗಾಗಿ ಇಲ್ಲಿಯ ಚಿಂತನೆ, ಸಿದ್ಧಾಂತ, ಉದಾಹರಣೆಗಳು ಸಹ ಇಂಗ್ಲೀಷ್ ಮೂಲಕವೇ ಕನ್ನಡದ ಬಾಗಿಲನ್ನು ತಟ್ಟುತ್ತಿವೆ ಅಥವಾ ಯಾವುದೇ ಭಾಷೆಯನ್ನು ಕುರಿತು ಯೋಚಿಸಬಹುದಾದ ಸಿದ್ಧಾಂತ ಮಾದರಿಗೇ ನಿಷ್ಠೆಯನ್ನು ಹೊಂದಿದವುಗಳಾಗಿದ್ದವು. ಮತ್ತು ಪಾಶ್ಚಾತ್ಯರು ರೂಪಿಸಿದ ಸಿದ್ಧಾಂತಗಳ ಮೂಲಕ ಕನ್ನಡ ಭಾಷೆಯನ್ನು ಕುರಿತು ಚಿಂತಿಸಲಾರಂಬಿಸಿದರು. ಹಾಗಾಗಿ ಇವು ಮೊದಲು ಸಿದ್ಧಮಾದರಿಯ ಕನ್ನಡಕವನ್ನು ಧರಿಸಿದ ಭಾಷಿಕ ಚಿಂತನೆಗಳು. ಅದೇನೇ ಇರಲಿ ೧೯೬೦ – ೭೦ ರ ದಶಕದಲ್ಲಿ ಕನ್ನಡ ಭಾಷಾಧ್ಯಯನದ ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ, ಆಸಕ್ತರಿಗೆ ಭಾಷೆಯನ್ನು ಕುರಿತು ಒಂದಷ್ಟು ಹೊಸ ಬಗೆಯ ಮತ್ತು ಪಾಶ್ಚಾತ್ಯದ ಸಿದ್ಧಾಂತಗಳ ಚಿಂತನೆ ಮೂಡಿಸಲು ಪ್ರಯತ್ನಿಸಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ.



ಸುಮಾರು ಹದಿಮೂರು ಅಧ್ಯಾಯಗಳಲ್ಲಿ ಚಾಚಿಕೊಂಡಿರುವ ಈ ಕೃತಿ ಭಾಷೆಯೆಂದರೇನು?, ಭಾಷಾಧ್ಯಯನದ ಚಾರಿತ್ರಿಕತೆ, ಭಾಷೆಯ ಉಗಮ ಕುರಿತು ಪಾಶ್ಚಾತ್ಯರ ಚರ್ಚೆ, ಚಿಂತನೆ, ಭಾಷೆಯ ವರ್ಗೀಕರಣ ಸ್ವರೂಪ, ಧ್ವನಿ, ಅರ್ಥ, ಭಾಷಾಸ್ವೀಕರಣ, ಭಾಷೆಯ ವ್ಯತ್ಯಸ್ಥ ಬಗೆಗಳು, ಧ್ವನಿ ವಿಜ್ಞಾನ, ಭಾಷಾಧ್ಯಯನದ ವಿಧಾನಗಳು – ಮುಖ್ಯವಾಗಿ ವಿವರಣಾತ್ಮಕ, ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನ, ಅಲ್ಲದೆ ಭಾಷಾವಿಜ್ಞಾನ ಬೆಳೆದು ಬಂದ ಬಗೆ, ಭಾಷೆಯ ಎರಡು ಸ್ವರೂಪಗಳಾದ ಮಾತು/ಭಾಷೆ ಮತ್ತು ಬರಹಗಳನ್ನು ಕುರಿತು ಸಿದ್ಧಾಂತಾತ್ಮಕವಾಗಿ ಮಂಡಿಸಲಾಗಿದೆ. ಭಾಷಾವಿಜ್ಞಾನದ ಈ ಮೂಲ ತತ್ವಗಳನ್ನು ಅತ್ಯಂತ ಸರಳವಾಗಿ ವಿವರಿಸಲಾಗಿದೆ. ಇದೊಂದು ಪರಿಚಯಾತ್ಮಕ ಕೃತಿಯಾಗಿದೆ. ಇದರ ರಚನೆಯ ಕಾಲವೂ ಸಹ ಭಾಷಾವಿಜ್ಞಾನ/ಅಧ್ಯಯನವನ್ನು ಪರಿಚಯ ಮಾಡಿಕೊಳ್ಳುವುದಾಗಿತ್ತು. ಹೀಗಾಗಿ ಇದು ಪರಿಚಯಾತ್ಮಕ ನೆಲೆಯ ಉತ್ತಮ ಕೃತಿಯಾಗಿದೆ.

## ನುಡಿನೋಟ ( ೨೦೦೫ ) – ಡಾ. ಡಿ. ಪಾಂಡುರಂಗಬಾಬು

ಕಾಲ ನಿಲ್ಲುವುದಿಲ್ಲ, ಜೀವಂತವಾಗಿರುವುದು ಯಾವುದೂ ನಿಂತಿರುವುದಿಲ್ಲ. ಮನುಷ್ಯ ತನ್ನ ಅಸ್ತಿತ್ವವನ್ನು ಸದಾ ಕಾಲದೊಂದಿಗೆ ತೋರ್ಪಡಿಸುತ್ತಲೇ ಇರುತ್ತಾನೆ. ಅದು ಶಾಸನಗಳ ಕಾಲದಿಂದ ಕಾಗದ ರಹಿತವಾಗಿಸಿ ನಿಂತ ಯಂತ್ರಗಳ ಈ ಕಾಲದವರೆಗೂ ಚಾರಿತ್ರಿಕ ನಡೆಯನ್ನು ನೋಡಬಹುದಾಗಿದೆ. ತನ್ನ ಬದುಕಿನ ಶೈಲಿಯಲ್ಲಿ, ಬದುಕುತ್ತಿರುವ ಜಗತ್ತಿನಲ್ಲಿ ಮತ್ತು ತನ್ನ ಬಳಕೆಯ ವಸ್ತು, ಸಂಗತಿಗಳಲ್ಲೂ ಒಂದಲ್ಲ ಒಂದು ಬದಲಾವಣೆಯನ್ನು ತರುತ್ತಲೇ ಇರುತ್ತಾನೆ. ಹಾಗೆ ತರುವ ಬದಲಾವಣೆಯು ಸೌಲಭ್ಯಕಾಂಕ್ಷಿಯಾಗಿರಬೇಕು ಮತ್ತು ತನ್ನನ್ನು ಸುಖವಾಗಿರುವಂತೆ ಕಾಪಾಡಬೇಕು ಈ ನಿಮಿತ್ತವಾಗಿಯೇ ಮನುಷ್ಯನ ಹತ್ತು – ಹಲವು ಸಂಶೋಧನೆಗಳು ನಿರಂತರಗೊಂಡಿರುವುದಾಗಿದೆ. ಮನುಷ್ಯನ ಎಲ್ಲಾ ಆಲೋಚನೆ, ಭಾವನೆ, ಬಯಕೆಗಳನ್ನು ರೂಪಿಸಲು ಅಥವಾ ಸಾಧ್ಯವಾಗಿಸಲು ಹೂಮಾಲೆಯಲ್ಲಿ ಹುದುಗಿ ಬೆಸೆಯುವ ದಾರದಂತೆ, ಮನುಷ್ಯ ಉಸಿರಾಡುವ ಎಲ್ಲಾ ರಂಗಕ್ಕೂ ಭಾಷೆಯು ಅತ್ಯಗತ್ಯವಾಗಿ ಬೇಕು. ಆ ಕಾರಣವಾಗಿ ಭಾಷೆಯು ಮನುಷ್ಯನನ್ನು ಮನುಷ್ಯನನ್ನಾಗಿ ರೂಪಿಸಿದೆ. ಮತ್ತು ರಾಕ್ಷಸನಂತೆ ಎಲ್ಲವನ್ನೂ ಕಂಡುಕೊಳ್ಳಲು ಹೀರಲು ಎಳೆಗಳನ್ನು ರೂಪಿಸಿಕೊಳ್ಳಲೂ ಮೂಲ ಕಾರಣವೂ ಆಗಿದೆ.

ಹೀಗೆ ಮನುಷ್ಯ ಕಾಲದಿಂದ ಕಾಲಕ್ಕೆ ಹೇಗೆ ಬದಲಾವಣೆಯನ್ನು, ಜಗತ್ತಿನೊಂದಿಗೆ ಯಂತ್ರಗಳೊಂದಿಗೆ ಅಥವಾ ಸಾಲಸೌಲಭ್ಯಕಾಂಕ್ಷಿಯಾಗಿ ಏನೆಲ್ಲ ಚಟುವಟಿಕೆಯನ್ನು ನಿರಂತರವಾಗಿ ಮಾಡುತ್ತಲೇ ಇದ್ದಾನೋ ಅಲ್ಲೆಲ್ಲ ಭಾಷೆಯೂ ಆಯಾ ಸನ್ನಿವೇಶಕ್ಕೆ ತಕ್ಕಹಾಗೆ ರೂಪಿತಗೊಂಡಿದೆ ಮತ್ತು ಬಳಸಲ್ಪಟ್ಟಿದೆ. ಹಾಗಾಗಿ ಇವತ್ತು ಎಸ್. ಎಂ. ಎಸ್. ನಲ್ಲಿ ಬಳಕೆಯಾಗುವ ಭಾಷೆಗೂ, ಪತ್ರಗಳಲ್ಲಿ, ಹಲವು ಜಾತಿ ಜನಾಂಗಗಳಲ್ಲಿ, ಶಾಸನಗಳಲ್ಲಿ, ಕಥೆ, ಕಾದಂಬರಿ, ಕಾವ್ಯ ಹೀಗೆ ಹಲವು ಹತ್ತು ನೆಲೆಯಲ್ಲಿ ವಿಭಿನ್ನವಾಗಿ ಭಾಷೆಯು ಬಳಕೆಗೊಂಡಿರುವುದನ್ನು ಕಾಣಬಹುದಾಗಿದೆ.

ಅಂತಹ ಅಂಶಗಳನ್ನು ಸೂಕ್ಷ್ಮವಾಗಿ ಭಾಷಾಧ್ಯಯನವು ಅಧ್ಯಯನ ಮಾಡುವುದರ ಮೂಲಕ ಲೋಕದ ಚರಿತ್ರೆಗಳನ್ನು ದಾಖಲಿಸಬಹುದಾಗಿದೆ ಎಂದು ಕಾಣುತ್ತದೆ. 'ನುಡಿನೋಟ' ಪುಸ್ತಕದಲ್ಲಿ ಪ್ರಸ್ತುತದ ಸನ್ನಿವೇಶದಲ್ಲಿ ನಮ್ಮ ಸುತ್ತಲು ಭಾಷೆಯು ಬಳಸಲ್ಪಡುತ್ತಿರುವ ಮತ್ತು ಆಗುತ್ತಿರುವ ಬದಲಾವಣೆಯ ಸ್ವರೂಪವನ್ನು ನಿದರ್ಶನಗಳ ಖಚಿತತೆಯ ಮೂಲಕ ವಿವರಿಸಲ್ಪಡುತ್ತದೆ. ನಮ್ಮ ಸಮಾಜದಲ್ಲಿ ಹಲವು ನಂಬಿಕೆಗಳಿದ್ದಾವೆ ಮತ್ತು ನಂಬಿಕೆಗಳಿಲ್ಲ. ಇಂತಹ ಸನ್ನಿವೇಶದ ಭಾಷೆ,

ಭಾಷಾಶೋಧನೆ, ಮತ್ತು ಕಲಿಕೆಯ ಸಮಸ್ಯೆಗಳು ಮುಂತಾಗಿ ಒಟ್ಟು ಹನ್ನೆರಡು ಲೇಖನಗಳು ಇವೆ. ಭಾಷೆಯ ಸೂಕ್ಷ್ಮ ಸ್ವರೂಪವನ್ನು ಕುರಿತು ಮಾತಾಡಿದರೂ ಒಂದರೊಳಗೊಂದು ಬೆಸುಗೆಯ ಹಾಗೆ ಹರಡಿಕೊಂಡಿದೆಯೇ ವಿನಃ ಪುನರಾವರ್ತನೆಯಾಗದೆ ಇಲ್ಲಿನ ಒಟ್ಟು ಬರವಣಿಗೆಯ ಹಿಂದೆ ಅತ್ಯಂತ ಸೂಕ್ಷ್ಮವಾದ ಭಾಷಿಕ ಮನಸ್ಸು ಕೆಲಸ ಮಾಡಿರುವುದು ಕಾಣಬರುತ್ತದೆ.

ಜಾಹೀರಾತಿನ ಭಾಷಾ ಬಳಕೆ ಅಥವಾ ಭಾಷಾಂತರ ಭಾಷೆಯ ಸಾಂಸ್ಕೃತಿಕ ತೊಡಕುಗಳನ್ನು ಪ್ರಶ್ನಿಸಿಕೊಂಡು ಉತ್ತರಗಳನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ಹಾಗೆಯೇ ಭಾಷೆಯ ಒಂದು ಪ್ರದೇಶಕ್ಕೆ ಅನ್ಯದೇಶಿಯವಾದ ವಸ್ತು ವಿಷಯ ಸಂಗತಿಗಳು ಹರಿದುಬರುತ್ತಿರುವ ಹಾಗೆ ಶಬ್ದಗಳೂ ಬರುತ್ತಿವೆ. ಅಂದರೆ ಬದಲಾಗುತ್ತಿರುವ ಕಾಲಮಾನದ ಹೊಸತನ್ನು ಹೇಳಲು ಭಾಷೆಯು ಸೋಲುತ್ತಿರುವಾಗ ಇನ್ನೊಂದು ಮತ್ತೊಂದು ಪದವನ್ನು ಸೃಷ್ಟಿಸಿಕೊಳ್ಳಬೇಕಾಗುತ್ತದೆ. ಹಾಗೆ ಸೃಷ್ಟಿಸಿದ ಪದವು ಕೊಡುವ ಅರ್ಥ ಸಮರ್ಥವಲ್ಲದಿದ್ದಾಗ ಜನಸಾಮಾನ್ಯರು ಅಂತಹ ಪದವನ್ನು ಬಳಸುವುದಿಲ್ಲ. ಬದಲಾಗಿ ವಸ್ತುವಿನೊಂದಿಗೆ ಶಬ್ದವನ್ನೂ ಸ್ವೀಕರಿಸುತ್ತಾರೆ. ಇಂತಹ ಕಡೆ ಇನ್ನೊಂದು ಭಾಷೆಯ ಶಬ್ಧವೆನ್ನುವುದಕ್ಕಿಂತ ತನ್ನದೇ ಆಗಿ ಮಾರ್ಪಡಿಸಿಕೊಳ್ಳುತ್ತದೆ ಎಂದು ಅರ್ಥ ಸೂಕ್ಷ್ಮತೆಯನ್ನು ತಿಳಿಸಿಕೊಡುತ್ತಾರೆ. ಅದು ನಾವು ಸ್ವೀಕರಿಸುವ ವಸ್ತುವಿನಂತೆ. ಉದಾ: ಕಂಪ್ಯೂಟರ್ (ಗಣಕಯಂತ್ರ) ಮೊಬೈಲ್, (ನಡೆನುಡಿ, ಜಂಗಮವಾಣಿ) ಇತ್ಯಾದಿ. ಹಾಗೆಯೇ ಇವರು ನೀಡುವ ಉದಾಹರಣೆಗಳು: ಅಂಕಲ್, ಆಂಟಿ, ಕ್ಯಾಚಿಡಿ, ಟರ್ನಾಗು, ಗೇಟ್ – ಬಾಗಿಲು......ಮುಂತಾದವು. ಇವು ಯಾವ ಭಾಷೆಯ ಶಬ್ಧಗಳೆಂದು ಬಗೆದಿದ್ದೇವೇ?, ಕನ್ನಡದ ಸಂದರ್ಭದಲ್ಲಿ ಬಳಕೆಯಾಗುವಾಗ ಕನ್ನಡದ್ದೇ ಆದ ಅರ್ಥದ ದೀಕ್ಷೆಯನ್ನು ನೀಡಲಾಗಿರುತ್ತದೆಂದು ಆಲೋಚನೆಗೆ ಹಚ್ಚುತ್ತಾರೆ. ಮತ್ತು ಭಾಷೆಯು ಹೀಗೆ ಬಳಸುವ ರಾಜಕಾರಣ ಎಂತಹದು. ಅಂದರೆ ಕಾಲಕ್ಕೆ ಕೊಡುವ ಉತ್ತರವೋ ಅಸಮರ್ಥತೆಯೋ ಎಂಬುದನ್ನು ನಿಜಕ್ಕೂ ಒಬ್ಬ ಭಾಷಾಧ್ಯಯನಕಾರರಾಗಿ ಸೂಕ್ಷ್ಮವಾದ ಸಂಶಯ ಒಳನೋಟಗಳನ್ನು ನೀಡುತ್ತಾರೆ. ಹೀಗೆ ಇಲ್ಲಿರುವ ಹನ್ನೆರಡು ಲೇಖನಗಳೂ ಅರ್ಥ ವಿಜೃಂಭಿಸುವುದಿಲ್ಲ. ನಮ್ಮ ದಿನನಿತ್ಯದ ಸಹಜ ನಿದರ್ಶನಗಳೇ ಇಷ್ಟು ಅಚ್ಚರಿಯಾಗಿ ಆಲೋಚನೆಗೆ ಎಳೆಯುತ್ತವೆ.

## ನಮ್ಮ ಕನ್ನಡ (೨೦೦೬) – ಕೆ. ವಿ. ತಿರುಮಲೇಶ್

ಕೆ. ವಿ ತಿರುಮಲೇಶ್ ಅವರು 'ನಮ್ಮ ಕನ್ನಡ' ಪುಸ್ತಕದಲ್ಲಿ ಭಾಷೆಯನ್ನು ಕುರಿತು ಈಗಾಗಲೇ ಜಾಗತಿಕ ಮಟ್ಟದಲ್ಲಿ ನಡೆದ ಹಲವು ಸಂಗತಿಗಳನ್ನೂ ಸಮೀಕರಿಸಿಕೊಂಡು ಪ್ರಸ್ತುತ ಕನ್ನಡ ಕುರಿತು ಚಿಂತನೆ ನಡೆಸಿದ್ದಾರೆ. ಅದು ಭಾಷಾವಿಜ್ಞಾನದ ವಿದ್ಯಾರ್ಥಿಯಂತೆ. ಹಾಗೆ ಭಾಷಾಶಾಸ್ತ್ರದ ಸಂಪ್ರದಾಯವಾದಿಯಂತೆ, ಕೋರ್ಟ್‌ನಲ್ಲಿರುವ ಕೇಸೊಂದರ ಪರ ಕಟ್ಟಕಡೆಯ ವಕಾಲತುಗಾರನಂತೆ, ಮೊಂಡು ಕುಸ್ತಿಗಾರರಂತೆ..... ಹೀಗೆ ಹಲವು ಬಗೆಯಲ್ಲಿ ವಾದಿಸುತ್ತಾರೆ. ಮುಖ್ಯವಾಗಿ ಈಗಾಗಲೆ ನಡೆದು ನಡೆದು ಸೃಷ್ಟಿಗೊಂಡ ದಾರಿಯಲ್ಲೇ ನಡೆಯುತ್ತಾರೆ. ಹೊಸಬಗೆಯಲ್ಲಿ ಅಷ್ಟಾಗಿ ಹೊಳಪುಗಳನ್ನೇನು ನೀಡುವುದಿಲ್ಲ. ಹಾಗೇನೆ ಹಠವನ್ನೂ ಬಿಟ್ಟು ಅಗ್ರಹಾರದಾಚೆ ಬೀದಿಯಲ್ಲಿ ಬಳಕೆಯಾಗುತ್ತಿರುವ ಕನ್ನಡ ಭಾಷೆಯ ಬಗ್ಗೆಯೂ ಅಂತಹ ಕುತೂಹಲವೇನೂ ಇಲ್ಲ. ಕನ್ನಡ ಪರಿಸರದಲ್ಲಿ ಸತ್ಯವನ್ನು ಕಾಣುವುದಕ್ಕಿಂತ ಹೆಚ್ಚಾಗಿ, ಈಗಾಗಲೇ ಗೊತ್ತಿರುವುದನ್ನೇ ಅವಲಂಬಿತರಾಗುತ್ತಾರೆ. ದಿನ ದಿನಕ್ಕೂ ಬದಲಾಗುತ್ತಿರುವ ಭಾಷಿಕ ಮಗ್ಗಲುಗಳು ನೋಡುವ ಹಠಾರಗಳನ್ನು ಇವರು ತಿರಸ್ಕರಿಸುತ್ತಾರೆ. ಇದು ಇವರ ಮಿತಿ ಎನ್ನುವುದರಲ್ಲಿ ಅನುಮಾನವಿಲ್ಲ.

ಇವರು ಮೂಲತಃ ಕವಿ. ಹಾಗಾಗಿ ಭಾಷೆಯನ್ನು ಕವಿ ಮನಸ್ಸಿನ ದೃಷ್ಟಿಯಲ್ಲಿ ಅಥವಾ ಅಂತಹದೊಂದು ಕನ್ನಡಕವನ್ನು ಧರಿಸಿ ನೋಡುತ್ತಾರೆ. ಸಮಾಜದಲ್ಲಿ ಭಾಷೆಯು ಬಳಕೆಯಾಗುವ ಬಗೆ. 'ಸರಿ'ಯಾಗಿ ಅರ್ಥಮಾಡಿಕೊಳ್ಳುವುದು ಹೇಗೆ? ಎಂದು ಪ್ರಶ್ನಿಸಿಕೊಳ್ಳುತ್ತ (ಕಾವ್ಯಾತ್ಮಕ) ಸೃಜನಾತ್ಮಕವೆಂದುಕೊಳ್ಳತ್ತ ಅಸಂಗತಗೊಳಿಸುತ್ತಾರೆ. (ಅಸಂಗತತೆ ಕಾವ್ಯದಲ್ಲಿ ಸೂಕ್ತವಾದ ಸಂಗತಿ. ಭಾಷೆಯನ್ನು ಕುರಿತ ಬರಹಗಳ ವಿಚಾರದಲ್ಲಿ ಅಸಂಗತತೆ ಇರಬಾರದು) ಇಂತಹ ಮಾತುಗಳನ್ನು ಒಬ್ಬೊಬ್ಬರು ಒಂದೊಂದು ಬಗೆಯಲ್ಲಿ ಅರ್ಥೈಸುವರೇನೋ? ಹೀಗಾಗಿ ಇವರ ವಿವರಣೆಯ ನೆಲೆಯ ಒಳಗೆನೇ ಹಲವು ಬಿರುಕುಗಳನ್ನು ಉಳಿಸುತ್ತಾರೆ ಮತ್ತು ಸೃಷ್ಟಿಸುತ್ತಾರೆ. ಹತ್ತು – ಹಲವು ಸನ್ನಿವೇಶದಲ್ಲಿ ಹಾಗೆ ಭಿನ್ನ ಅರ್ಥಹೊಮ್ಮಿಸುವ ಪ್ರಕ್ರಿಯೆಯಲ್ಲಿ ಬಳಸುವುದು ಸೃಜನಾತ್ಮಕತೆ ಎಂದು ಇವರು ಉತ್ತರಿಸುತ್ತಾರೆ.

ಭಾಷೆಗೆ ತನ್ನದೇ ಆದ ಚೌಕಟ್ಟು ಮತ್ತು ಮಿತಿ ಇರುತ್ತದೆ. ವ್ಯಾಕರಣ ನಿಯಮಗಳು ಭಾಷೆಯನ್ನು ಬಂಧಿಸಿರುತ್ತದೆ. ಸದಾ ವ್ಯಾಕರಣ ಬದ್ಧವಾಗಿ ಮಾತಾಡದಿದ್ದರೂ ವ್ಯಾಕರಣ ನಿಯಮ ಮೀರಿದಾಗಲೂ, ಮೀರುವುದು ಸಹ ಒಂದೊಂದು ಕ್ರಮದೊಳಗೇ ನಡೆದಿರುತ್ತದೆ. ಕನ್ನಡ ಪರಿಸರ ಅಥವಾ ಕರ್ನಾಟಕದ

ಹೊರಗೆ ಇರುವ ಕೆ. ವಿ ತಿರುಮಲೇಶ್ ಅವರಿಗೆ ಪರಕೀಯ ಪ್ರಜ್ಞೆ ಇವರನ್ನು ಕಾಡಿದೆ. ಅದನ್ನು ಭಾಷೆಯ ಸಂಗಡ ಸಮೀಕರಿಸಿ, ಬಹುಮುಖ ಸಂಸ್ಕೃತಿ, ಏಕಮುಖ ಸಂಸ್ಕೃತಿಯ ಎರಡು ಬಗೆಗಳನ್ನು ಪ್ರಸ್ಥಾಪಿಸುತ್ತಾರೆ. ಜೀವಂತವಾದ ಭಾಷೆ ಯಾವಾಗಲು ಬಹುಮುಖಿ ಸಂಸ್ಕೃತಿಯನ್ನು ಹೊಂದಿರುತ್ತದೆ. ಏಕಮುಖಿ ಸಂಸ್ಕೃತಿಯನ್ನು ಹೊಂದಿರುವುದು ಭಾಷೆಯ ಸನ್ನಿವೇಶ ತೀರಾ ವಿರಳ. ಯಾವ ವ್ಯಕ್ತಿಯೂ ನಡುಗಡ್ಡೆಯಲ್ಲ. ವ್ಯಕ್ತಿಗೆ ವ್ಯಕ್ತಿಯ ಸಂಬಂಧ ಇದ್ದೇ ಇರುತ್ತದೆ. ಯಾವ ಭಾಷೆಯೂ ಪರಿಶುದ್ಧವಲ್ಲ. ಶ್ರೇಷ್ಠ ಅಥವಾ ನಿಕೃಷ್ಟವಲ್ಲ. ಮನುಷ್ಯ ಜನಾಂಗಗಳಂತೆ ಭಾಷೆಗಳು ಸಹ ಒಂದರಿಂದೊಂದು ಪಡೆಯುತ್ತವೆ ಮತ್ತು ಕೊಡುತ್ತವೆ. ಪರಸ್ಪರ ಪರಿಣಾಮ ಬೀರುತ್ತವೆ. ಇದು ಭಾಷೆಯ ಜಾಯಮಾನ ಎಂದರೆ ಮನುಷ್ಯ ಸಹಜ ಪ್ರವೃತ್ತಿ ಎಂದರ್ಥ. ಮನುಷ್ಯನಿಗೆ ಮನಸ್ಸಿದೆ. ಭಾಷೆಗೆ ಮನಸ್ಸಿಲ್ಲ ಅಥವಾ ಮನುಷ್ಯನೇ ಭಾಷೆಯ ಮನಸ್ಸು. ಮನಸ್ಸಿರುವ ಮನುಷ್ಯ ವ್ಯವಹರಿಸುವುದರಿಂದ ಭಾಷೆಯ ಬೆಳವಣಿಗೆ ಮತ್ತು ಅವನತಿ ಇದೆ. ಶುದ್ಧೋದನ ತನ್ನ ಮಗ ಬುದ್ಧ (ಗೌತಮ) ನನ್ನು ಸಾಮ್ರಾಜ್ಯದೊಳಗೆ ಸಕಲಸೌಭಾಗ್ಯದೊಂದಿಗೆ ನೋಡಿಕೊಂಡದ್ದು ಹೊರಗಿನ ಪ್ರಪಂಚ ಜ್ಞಾನ ತಿಳುವಳಿಕೆ ಇಲ್ಲವಾದಂತಾಗುವಿಕೆಗೆ ಕಾರಣ. ಗೌತಮನಂತೆ ತಮಿಳು ಭಾಷೆ ಅನ್ಯ ಬೆಳಕನ್ನು ಪಡೆಯುವುದರಲ್ಲಿ ಸೋಲುತ್ತಿದೆ. ಸುದೈವವಶಾತ್ ಕನ್ನಡ ಸುತ್ತಲ ಪರಿಸರ ಭಾಷೆಗಳೊಂದಿಗೆ ಸಹಜವಾಗಿ ಜೀವಂತಿಕೆಯಿಂದ ಸ್ಪಂದಿಸುತ್ತಿದೆ ಎನ್ನುತ್ತಾರೆ. ಕನ್ನಡವು – ಹಿಂದಿ, ಪರ್ಷಿಯನ್, ಸಂಸ್ಕೃತ, ಪ್ರಾಕೃತ, ಮರಾಠಿ, ಇಂಗ್ಲೀಷ್ ಮುಂತಾದ ಭಾಷೆಗಳ ಸಂಗಡ ಬೆಳೆದುದ್ದು ಬದುಕಿದ್ದನ್ನೂ ಗುರುತಿಸುತ್ತಾರೆ.

ಏಕಮುಖಿ ಸಂಸ್ಕೃತಿ ಹೊರಗಿನ ಎಲ್ಲಾ ಸಂಗತಿಗಳಿಗೆ ಪೂರ್ತಿಯಾಗಿ ಮುಚ್ಚಿಕೊಂಡರೆ ಮಾತ್ರ ಏಕಮುಖಿ ಸಂಸ್ಕೃತಿ ಇರುವುದು ಸಾಧ್ಯ. ಕೆಲವು ಬುಡಕಟ್ಟುಗಳು ಇಂಥ ಏಕಮುಖಿಯಾದವುಗಳೆನ್ನುತ್ತಾರೆ.

ಹಾಗೆ ಕನ್ನಡ ಇವತ್ತು ಬಿಕ್ಕಟ್ಟನ್ನೂ ಎದುರಿಸುತ್ತದೆ. ಅದನ್ನೂ ಕಾಪಾಡಬೇಕು ಉಳಿಸಬೇಕು ಬೆಳೆಸಬೇಕು ಎಂದು ಕರ್ನಾಟಕ ರಕ್ಷಣಾವೇದಿಕೆ, ಕನ್ನಡದ ಕೆಲ ಬೀದಿಯ ಭಾವುಕ ಚಳುವಳಿಗಾರರ ಭಾವುಕತೆಯನ್ನೂ ಅವಾಹಿಸಿಕೊಳ್ಳುತ್ತಾರೆ. ಅವರು ಕೊಡುವ ಉದಾಹರಣೆಗಳೂ ಸಹ ಇಂತಹ ಚಳುವಳಿಗಾರರು ನೀಡುವ ನಿದರ್ಶನಗಳಿಗಿಂತ ಭಿನ್ನವಾಗೇನು ಸೂಕ್ಷ್ಮತೆಯನ್ನು ಪಡೆದುಕೊಂಡೀತೆಂದು ಹೇಳಲಾಗದು. ಹಾಗೆನೆ ಬಾಲಿಶವಾದವೂ ಇವೆ. ವಿಜ್ಞಾನ, ತಂತ್ರಜ್ಞಾನ, ಪತ್ರಿಕೆ, ಮುದ್ರಣ ಮುಂತಾದವನ್ನು ಪ್ರೋತ್ಸಾಹಿಸುವುದು ಅನುವಾದವನ್ನು ಕೈಗೊಳ್ಳುವುದು ನಿಘಂಟುಗಳನ್ನು ರಚಿಸುವುದು ಈ ಭಾಗದಲ್ಲಿ ಅವರು ಕೊಡುವುದು ವೃತ್ತಿಪರ

ಪದಕೋಶಗಳನ್ನು ತರುವುದು, ಸಂಪಾದಿಸುವುದು ಅಗತ್ಯ ಎನ್ನುತ್ತಾರೆ. ಬಡಗಿ, ಮೋಚಿ, ಕುಂಬಾರ ದರ್ಜಿ, ಒಕ್ಕಲಿಗ ಮುಂತಾಗಿ ಸಂಗ್ರಹಿಸಬೇಕು ನಿಜ. ಆದರೆ ವೃತ್ತಿಗಳನ್ನು ಇವತ್ತಿನ ಕೈಗಾರಿಕೀರಣ, ಯಂತ್ರ ಜಗತ್ತು ನಾಶಮಾಡಿರುವಾಗ, ವೃತ್ತಿಗಳಿಲ್ಲದೆ ವೃತ್ತಿಪದಗಳನ್ನು ಬಳಸಲು ಉಳಿಸಲು ಸಾಧ್ಯವೇ? ಅವೆಲ್ಲ ಅತ್ಮಹತ್ಯ ಮಾಡಿಕೊಂಡು ದಶಕಗಳೇ ಕಳೆದಿವೆ. ವೃತ್ತಿ ಪದಕೋಶಗಳೂ ಈಗಾಗಲೇ ಕೆಲವು ಬಂದು ಕತ್ತಲೆಗೆ ಬಿದ್ದಿವೆ.

ಹಾಗೇನೆ ಸಾರ್ವತ್ರಿಕ ಶಿಕ್ಷಣ, ಅಕ್ಷರ ವಿದ್ಯೆ, ಪತ್ರಿಕೆ, ಸಿನೆಮಾ, ನಾಟಕ, ಚಳುವಳಿ ಮುಂತಾದವನ್ನೂ ಕನ್ನಡ ಉಳಿಸುವ ಪ್ರಯತ್ನಗಳಾಗಿವೆ. ಅವುಗಳನ್ನೂ ಪ್ರೋತ್ಸಾಹಿಸಬೇಕು ಎನ್ನುತ್ತಾರೆ. ನಿಜವೆಂದರೆ ಇವುಗಳನ್ನು ಯಾವ ಬಗೆಯಲ್ಲಿ ಪ್ರೋತ್ಸಾಹಿಸಬೇಕು. ಇವುಗಳು ಎಷ್ಟರಮಟ್ಟಿಗೆ ಹೇಗೆ ಭಾಷೆಯನ್ನು ಕಾಪಾಡುತ್ತವೆ ಎನ್ನುವ ಬಗ್ಗೆ ಮಾತಾಡುವುದಿಲ್ಲ. ನಿಜವೆಂದರೆ ಇವು ಕನ್ನಡ ಭಾಷೆಯನ್ನು ಬೆಳೆಸುತ್ತಿವೆಯೇ, ತಿನ್ನುತ್ತವೆಯೇ? ನಾಶಗೊಳಿಸುವ ವ್ಯವಸ್ಥೆಯನ್ನು ವ್ಯವಸ್ಥಿತಗೊಳಿಸಿದ್ದೇವಾ? ಎನ್ನುವುದು ಯೋಚಿಸಬೇಕಿದೆ. ಈ ಕುರಿತು ಅಸ್ಪಷ್ಟವಾಗಿದ್ದಾರೆ.

ಕನ್ನಡ ಭಾಷೆ ದೈವೀಕರಿಸುವಿಕೆ, 'ಕನ್ನಡ ಮಾತೆ' ಎಂದು ಭಾವನಾತ್ಮಕವಾಗಿ ಗುರುತಿಸುತ್ತೇವೆ. ಇದು ಅತಿರೇಕಕ್ಕೆ ಹೋದರೆ ಅನವಶ್ಯಕತೆ. ಭಾಷೆಯ ಸಾವು ಅಥವಾ ಭಾಷೆಯನ್ನು ಕೊಂದಂತೆಯೇ ಎಂದು ಸೂಕ್ಷ್ಮವಾಗಿ ಚಿಂತಿಸಿದಂತೆ ಅನಿಸುತ್ತದೆ. ದೇವರಿಂದ ಮುಕ್ತರಾಗುವುದು ಎಂದರೆ ನಮ್ಮ ಜವಾಬ್ದಾರಿಯನ್ನು ನಾವೇ ತೆಗೆದುಕೊಳ್ಳುವುದು ಎಂದರ್ಥ – ನೀಶೆ. ಇದನ್ನು ಕನ್ನಡ ಭಾಷೆಗೆ ಅನ್ವಯಿಸಿ ಚಿಂತಿಸುತ್ತಾರೆ. ನಾವು ಎಲ್ಲಿಯ ತನಕ ಕನ್ನಡವನ್ನು ಮೀರುವುದು ಸಾಧ್ಯವಿಲ್ಲವೋ ಅಲ್ಲಿಯತನಕ ಕನ್ನಡದ ಉದ್ಧಾರವೂ ಸಾಧ್ಯವಾಗದು. ಮೀರಬೇಕು ನಿಜ. ಮೀರುವುದು ಹೇಗೆ? ಎಂಬ ಗೊಂದಲ ಇನ್ನೂ ಉಳಿಯುತ್ತದೆ. ನಾನು ಅದಾಗಲೇ ಹೇಳಿದಂತೆ ಚಳುವಳಿಗಾರರ ಶೋಷಣೆ ಅಧಿಕವೆಂದು. ಅಂದರೆ; ಕನ್ನಡ ಅಭಿವೃದ್ಧಿ ಎಂದರೆ ಅಂಗಡಿ ಫಟಕ, ಬಸ್ ನಂಬರ್ ಪ್ಲೇಟ್ ಮುಂತಾದವನ್ನು ಕನ್ನಡಕ್ಕೆ ಬದಲಿಸುವುದು. ಅಂಕೆಗಳನ್ನು ಕನ್ನಡದಲ್ಲಿ ಬರೆಯುವುದು ಎನ್ನುತ್ತಾರೆ. ಆದರೆ ವ್ಯವಸ್ಥೆಯ ಬಗ್ಗೆ ಕುರುಡರಾಗುತ್ತಾರೆ. ಅಥವಾ ಪರವಾಗಿ ನಿಲ್ಲುತ್ತಾರೆ. ಒಳಗೆ ಬೇರುಕೊಯ್ದು ಹೊರಗೆ ನೀರು ಹಾಕುವ ತಂತ್ರದಂತಿದೆ ಇವರ ವಾದ. ಸಂಸ್ಕೃತ ವಿ. ವಿ. ಕನ್ನಡದ ಅಂಗಳದಲ್ಲಿ ಆಗುತ್ತಿರುವುದು ಕನ್ನಡದ ಕನ್ನಡತ್ವಕ್ಕೆ ಉಪಯೋಗವೆಂದು ರಾಜಕೀಯ ಅಥವ ಆಡಳಿತ ಪಕ್ಷದ ವಕ್ತಾರರಂತೆ ಚಿಂತಿಸುತ್ತಾರೆ. ಹಾಗೇನೆ ಇದೇ ವಿಚಾರವನ್ನು ಕುರಿತು

ಒಂದು ಲೇಖನವನ್ನು ಬರೆದಿದ್ದಾರೆ. ಅಕ್ಷರ ವ್ಯವಸ್ಥೆ ಯಾವತ್ತೂ ಎಲ್ಲ ಧ್ವನಿ ಸೂಕ್ಷ್ಮಗಳನ್ನು ಪ್ರತಿನಿಧಿಸಲಾರದು. ಅದೇ ರೀತಿ ಧ್ವನಿ ವ್ಯವಸ್ಥೆ ಯಾವಾಗಲೂ ಅಕ್ಷರವ್ಯವಸ್ಥೆಗೆ ಬದ್ಧವಾಗಿಯೂ ಇರಲಾರದು. ಇವೆರಡೂ ಸಮ ಸಮವಾಗಿರುವ ಸಂಜ್ಞಾ ವ್ಯವಸ್ಥೆಗಳೇ ಬೇರೆ ಎಂದು ವಾದಿಸುವ ಇವರು ವಿಚಾರದಲ್ಲಿ ಎಡಬಲ ಪಕ್ಷಗಳನ್ನು ಆರೋಪಿಸುತ್ತವೆ ಎಂದು ತಾವೂ ಒಬ್ಬ ಮೂಲಭೂತವಾದಿಯಾಗುತ್ತಾರೆ.

ಎಡ ಬಲ ಮೂಲಭೂತವಾದಿಗಳ ಕೈಯಲ್ಲಿ ಕನ್ನಡ ಸೊರಗುತ್ತದೆ ಎನ್ನುವ ಇವರು 'ಖ' ಅಕ್ಷರದ ವಿಚಾರದಲ್ಲಿ ವಾದ ಮುಂದುವರೆದು ಮೊಂಡುವಾದವನ್ನು ಮುಂದಿಡುತ್ತಾರೆ. ಮತ್ತು ಅದಕ್ಕೆ ಬೇಕಾದ ಅಥವಾ ಅದರಾಚೆಗೆ ನೋಡುವ ದೃಷ್ಟಿಯನ್ನು ಕುಬ್ಜಗೊಳಿಸಿಕೊಂಡು ತಾವೇ ಸ್ವತಃ ಶುದ್ಧ ಮೂಲಭೂತವಾದಿಯಂತೆಯೇ ವಾದವನ್ನು ಮುಂದಿಡುತ್ತಾರೆ.

ಶಬ್ದಮಣಿದರ್ಪಣಕಾರ, ಚಿರಲ್, ಕೊರಲ್ ಎಂದು ಬಳಸುವಂತೆ ಹೇಳಿದ ಮಾತನ್ನು ಮೀರಿ ಭಾಷೆ ಕೊರಳ್ ಬೆರಳ್ ಆಗಿದೆ ಎನ್ನುವ ಇವರು ಯಾವುದೇ ಒಬ್ಬ ಮೂಲಭೂತವಾದಿಯ ಅಥವಾ ಭಾಷಾವಿಜ್ಞಾನಿಯ ಮಾತು ನಡೆಯೋಲ್ಲ. ಭಾಷೆಯು ಜನ ಸಮುದಾಯದ ಉಸಿರು ಎಂಬುದನ್ನು ಗೊತ್ತಿಲ್ಲದವರಂತೆ ವರ್ತಿಸುತ್ತಾರೆ. ಭಾಷೆ ಯಾರೊಬ್ಬರ ಮಾತು ಕೇಳಿ ಅಥವ ಅವರ ಆದೇಶದಂತೆ ಜೀವಿಸೋಲ್ಲ ಎಂಬ ಸತ್ಯ ಗೊತ್ತಿದ್ದು ಹೀಗೆ ಹೇಳುತ್ತಿರುವುದು ಸೋಜಿಗ. ಇಂತಹ ವಾದಕ್ಕಾಗಿ ಅವರು ಹೀಗೆ ತಿರುಚುತ್ತಾರೆ. ಸೂರ್ಯ – ಸೂರ್ಯ, ರ್‍ಯಾಂಕ್ – ರ್‍ಯಾಂಕ್ ಎಂದು ಹಂಗಿಸಲು ಬಳಸಲು ಮುಂದಾದಂತೆ ಕಾಣುತ್ತದೆ. ಮತ್ತೆ ಇದು ಕಣ್ಣಿಗೆ ಸರಿಕಾಣಲ್ಲ ಎನ್ನುತ್ತಾರೆ. ಆದರೆ ಆ ಪದಗಳನ್ನು ಸೂರ್ಯ, ಸ್ವರ್ಗ, ಪೂರ್ವ – ಹೀಗೆ ಬಳಸಿದ್ದು ಉಂಟೇ ವಿನಹಃ ಅವರು ವಾದಿಸುವಂತೆ ಬಳಸಿದ್ದು ಎಲ್ಲೂ ಕಾಣೆವು.

ಇಂತಹದ್ದೇ ವಾದಗಳ ಸಮೀಕರಣದಲ್ಲಿ "ಖ"ನ್ನೂ ನೋಡುತ್ತಾರೆ. ಅಂದರೆ 'ಖ' ಪ್ರಾಚೀನ ಕಾಲದಿಂದ ಬಂದಿದೆ. ಹಾಗಾಗಿ ಅದನ್ನು ತೆಗೆದಾಕುವ ವಿಚಾರ ಮಾಡಬಾರದು. ಬಳಕೆಯ ಸಾಧ್ಯತೆಯ ಸ್ವರೂಪ, ವಿಸ್ತೃತತೆ, ಅಗತ್ಯಗಳನ್ನೂ ಕಾಣುವುದಿಲ್ಲ. ಇದರಿಂದಲೇ ಇವರ ವಾದದ ಮಿತಿ ಗೊತ್ತಾಗುತ್ತದೆ. ಹಾಗೆ ಮಹಾಪ್ರಾಣ ಅಕ್ಷರದ ವಿಚಾರವಾಗಿ ಇವರು ಹೇಳುತ್ತಾರೆ. ಒಟ್ಟಾರೆ ಈ ಎರಡು ಸಂಗತಿಯನ್ನು ಗಮನಿಸಿದಾಗ ಇವರಿಗೆ ಪ್ರಾಚೀನ ಕಾಲದಿಂದಲು ಅಕ್ಷರದಲ್ಲಿ ಬೆಳೆದು ಬಂದ ಕನ್ನಡ ಗೊತ್ತು. ಆದರೆ ಕರ್ನಾಟಕದಲ್ಲಿ ಬಳಕೆಯಾಗುವ "ಕನ್ನಡಗಳು" ಗೊತ್ತಿಲ್ಲ. ಅಥವಾ ಇವರು ಈಗಾಗಲೆ ಮಾನಸಿಕವಾಗಿ ಉದ್ದಿಷ್ಟವಾಗಿ ತಯಾರಾದ

ವಾದವನ್ನೂ ಸಾಧಿಸಲು ಹೊರಟಂತೆ ಕಾಣುತ್ತದೆ. ಒಂದು ರಾಜಕೀಯ ಪಕ್ಷದ ನಾಯಕನಂತೆ. ಹೀಗಾಗಿ ಸಂಪ್ರಾದಾಯಿಕ ಭಾಷಾಶಾಸ್ತ್ರದಾಚೆ ನೋಡುವ್ಯದೆಂದರೆ ಇವರಿಗೆ ಮುಜುಗರದ ವಿಷಯವಾದಂತೆ ಕಾಣುತ್ತದೆ. ಅಥವಾ ಅದೊಂದು ಅನಗತ್ಯ ಕಾರ್ಯ ಎನ್ನುವ ಮೊಂಡುತನ ಇರಬಹುದೇನೋ?

## ದ್ವಿಭಾಷಿಕರು (೨೦೦೭) – ಡಾ. ಎಂ. ಭಾಗ್ಯಲಕ್ಷ್ಮಿ

'ದ್ವಿಭಾಷಿಕರು' ಎಂಬ ಈ ಪುಸ್ತಕವು ಡಾ. ಎಂ. ಭಾಗ್ಯಲಕ್ಷ್ಮಿ ಅವರ ಪಿಎಚ್.ಡಿ.ಯ ಮಹಾಪ್ರಬಂಧವಾಗಿದೆ. ಈ ಅಧ್ಯಯನವು'ಬಳ್ಳಾರಿ ಪರಿಸರದ ಕನ್ನಡ – ತೆಲುಗು ದ್ವಿಭಾಷಿಕತೆ ಸಮಾಜೋಭಾಷಿಕ ಅಧ್ಯಯನ'ವಾಗಿದೆ. ಸಾಮಾಜಿಕ ಭಾಷಾಧ್ಯಯನದ ಭಾಗವೇ ಆಗಿ ಈ ಅಧ್ಯಯನದ ಚಲನೆಯಾಗಿ ಇದೆ. ಕರ್ನಾಟಕ ಮಾತ್ರವಲ್ಲ ಜಗತ್ತು ಪ್ರಸ್ತುತ ಸನ್ನಿವೇಶದಲ್ಲಿ ಒಂದು ಭಾಷೆಯು ಕಲಿಕೆಗಿಂತ ಹಲವು ಭಾಷೆಗೆ ಆಹ್ವಾನವನ್ನು ನೀಡುತ್ತಿದೆ. ಅಥವಾ ಇನ್ನೊಂದು ಮತ್ತೊಂದು ಭಾಷಾ ಕಲಿಕೆಯ ಅನಿವಾರ್ಯತೆಯನ್ನು ರೂಪಿಸುತ್ತಿದೆ. ದ್ವಿಭಾಷಿಕತೆ, ಬಹುಭಾಷಿಕತೆಗೆ ಹಲವು ಕಾರಣಗಳಿರಬಹುದು. ರಾಜಕೀಯ, ಸಾಮಾಜಿಕ, ಭೌಗೋಳಿಕ, ಜಾಗತೀಕರಣ, ಉದ್ಯೋಗಾಕಾಂಕ್ಷೆ ಮುಂತಾದ ನೆಲೆಯ ನಿಮಿತ್ತತೆಯು ಇದ್ದೇ ಇದೆ. ಹೈದರಾಬಾದ್ ಕರ್ನಾಟಕ ಪ್ರದೇಶದ ಮೇಲೆ ಉರ್ದುವಿನ ಪ್ರಭಾವಕ್ಕೆ ರಾಜಕೀಯ ಕಾರಣವಿದೆ. ಅದು ನಿಜಾಮರ ಆಳ್ವಿಕೆ ಇರಬಹುದು. ಗಡಿಪ್ರದೇಶದ ಅಥವಾ ನೆರೆರಾಜ್ಯಗಳ ಮತ್ತೊಂದು ಭಾಷೆ. ಜಾಗತಿಕ ಮಾರುಕಟ್ಟೆಗೆ ಮಾರುಹೊಗಿರುವ ಇಂಗ್ಲಿಷ್, ಶೈಕ್ಷಣಿಕ ಕ್ಷೇತ್ರದ ಭಾಷೆ, ಹೀಗೆ ಇದೆಲ್ಲ ಒಂದು ಪ್ರಭಾವಳಿ ಅಥವಾ ಆವಾಹನೆಯಾಗಿದೆ.

ಈ ನಿಬಂಧವು ಬಳ್ಳಾರಿ ಜಿಲ್ಲೆಯ ಪರಿಸರದಲ್ಲಿ ಬಳಕೆಯಾಗುತ್ತಿರುವ ಕನ್ನಡ ಮತ್ತು ತೆಲುಗು ದ್ವಿಭಾಷಿಕತೆಯನ್ನು ಕುರಿತು ಕುತೂಹಲ ತಾಳಿದೆ. ಅಲ್ಲದೆ ಸಾಕಷ್ಟು ಕ್ಷೇತ್ರಕಾರ್ಯದ ಮೂಲಕ ಅಧ್ಯಯನವೂ ಮಾಡಿದ್ದಾರೆ. ಜಾಗತೀಕರಣದ ಸನ್ನಿವೇಶದಲ್ಲಿ ಇವತ್ತು ಭಾಷೆ ಮತ್ತು ಸಂಸ್ಕೃತಿಗಳು ಕೋಟೆ, ಕಂದಕಗಳಲ್ಲಿ ಬದುಕುತ್ತಿಲ್ಲ. ಹಾಗೆ ಮನುಷ್ಯ ಸಹ. ಗೌಡ, ಪಟೇಲ, ಜಮೀನುದಾರ ಹೀಗೆ ರಿಮೋಟ್‌ಗಳ ಬೆರಳಾಟಕ್ಕೆ ಕುಣಿಯುವ ಗೊಂಬೆಗಳಾಗಿಯೇನು ಉಳಿದಿಲ್ಲ. ಇನ್ನೊಂದು ಮತ್ತೊಂದು ಭಾಷೆ, ತಂತ್ರಜ್ಞಾನ, ನಗರ, ಮಾರುಕಟ್ಟೆ, ದೇಶ, ವಿದೇಶ, ಮಾಧ್ಯಮಗಳು ಮುಂತಾದವುಗಳು ಸೆಳೆಯುತ್ತಿರುವ ಮೋಹಕತೆಯಿಂದಾಗಿ ಭಾಷೆಯು ತರುತ್ತಿರುವ ಅಥವಾ ಬಳಕೆಗೊಳ್ಳುತ್ತಿರುವಲ್ಲಿ ಉಂಟಾಗುತ್ತಿರುವ ಬದಲಾವಣೆ ಅಥವಾ

ಕಾಣಿಸಿಕೊಳ್ಳುತ್ತಿರುವ ವೈವಿಧ್ಯತೆ ಒಂದು ಬಗೆಯಾದರೆ. ಈ ಮೊದಲು ಪಾರಂಪರಿಕ ನೆಲೆಯಲ್ಲಿ ಬಳಕೆಯಾಗುತ್ತಿರುವ ಜಾತಿ ಮತ್ತು ಪ್ರಾದೇಶಿಕ ನೆಲೆಯ ಸತ್ವದ ಭಾಷೆಯು ಮತ್ತೊಂದು ಬಗೆ. ಇಂತಹ ಎರಡೂ ಗುಣಗಳನ್ನು ಮಿಳಿತಗೊಳಿಸಿಕೊಂಡು ಬಳಕೆಗಿರುವ ಆಯಾ ಪ್ರದೇಶದ ಚರಿತ್ರೆ, ರಾಜಕೀಯದ ಮಗ್ಗಲುಗಳನ್ನೂ ನೆರವೇರಿಸಿಕೊಂಡಿರುತ್ತದೆಂಬುದನ್ನು ಬಲ್ಲ ಅಧ್ಯಯನಕಾರರು ಬಳ್ಳಾರಿ ಜಿಲ್ಲೆಯ ದ್ವಿಭಾಷಿಕ ಪರಿಸರದ ಹಿನ್ನೆಲೆಯಾಗಿ, ಭೌಗೋಳಿಕ ಐತಿಹಾಸಿಕ, ರಾಜಕೀಯ ಇತಿಹಾಸವನ್ನು ಕುರಿತು ಸಹ ಸಾಕಷ್ಟು ಮಾಹಿತಿಯನ್ನು ಸೂಕ್ತ ಕ್ರಮದಲ್ಲಿ ವಿವರಿಸುತ್ತಾರೆ. ಶೈಕ್ಷಣಿಕ ಸ್ವರೂಪ, ದ್ವಿಭಾಷಿಕತೆಯ ಸಂರಚನೆಯ ಸ್ವರೂಪ, ಜಾತಿ, ವರ್ಗ, ಕಸುಬು, ದ್ವಿಭಾಷಿಕತೆಯ ಮೇಲೆ ಬೀರುವ ಪ್ರಭಾವದ ಬಗೆಯನ್ನು ಕುರಿತು ವಿವರಿಸಿದ್ದಾರೆ. ಕನ್ನಡಿಗರು ದ್ವಿಭಾಷಿಕರಾಗುತ್ತಿರುವ ಪ್ರಮಾಣ, ತೆಲುಗರು ದ್ವಿಭಾಷಿಕರಾಗುತ್ತಿರುವ ತಲೆಮಾರುಗಳಲ್ಲಿ ಏರುತ್ತಿರುವುದು; ತಲೆಮಾರುಗಳಲ್ಲಿ ಬದಲಾಗುತ್ತಿರುವ ತೆಲುಗು ಭಾಷೆಯ ಸಾಕ್ಷರತೆಯ ಕೌಶಲ್ಯಗಳು; ಲಿಂಗಾಧಾರಿತ ತಲೆಮಾರುಗಳಲ್ಲಿ ಉಂಟಾಗುತ್ತಿರುವ ತೆಲುಗಿನ ಸಾಕ್ಷರತೆಯ ಕೌಶಲಗಳು ಇಂತಹ ಮಾಹಿತಿಯನ್ನು ಸಾಕಷ್ಟು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿ ಕರ್ನಾಟಕದ ಬಹುಭಾಷಿಕ ಪರಿಸ್ಥಿತಿ ಮತ್ತು ಭಾಷೆಗಳ ಸ್ವರೂಪವನ್ನು ಇಂತಹ ಅಧ್ಯಯನಗಳಿಂದ ಖಚಿತವಾದ ಹಲವು ಉತ್ತರಗಳು ಲಭಿಸುತ್ತವೆ. ಇದು ಸಂಸ್ಕೃತಿ, ಜನಾಂಗ, ನಾಡು ಆಂತರ್ಯದಲ್ಲಿ ಹೊಂದುತ್ತಿರುವ ಚಹರೆಗಳನ್ನು ಹಾಗೂ ನಡೆಯುತ್ತಿರುವ ಬಿರುಕುಗಳನ್ನು ಕಾಣಬಹುದು. ಸೂಕ್ತ ತಿಳುವಳಿಕೆಯಿಂದ ಸೂಕ್ತ ಪರಿಹಾರ ಕಂಡುಕೊಳ್ಳುವುದು ಸಾಧ್ಯವಾಗುತ್ತದೆ. ಅಂದರೆ ಯಾವುದಾದರು ಒಂದು ಪ್ರದೇಶದಲ್ಲಿ ಮಾತ್ರ, ಯಾವುದಾದರೊಂದು ನಿರ್ದಿಷ್ಟ ಪ್ರದೇಶದಲ್ಲಿ ಇನ್ನೊಂದು ಭಾಷೆಗೆ ಜನರು ಹೆಚ್ಚು ಮೊರೆಹೋಗುತ್ತಿದ್ದರೆ ಕಾರಣಗಳನ್ನು ಕಂಡುಕೊಳ್ಳುವುದು ಮತ್ತು ಆ ಪ್ರದೇಶದ ಭಾಷೆಯ ಜೀವಂತಿಕೆಗೆ ನೆರವಾಗಬಹುದು. ರಾಜಕೀಯ, ಸೌಲಭ್ಯ ಇನ್ನಿತರೆ ಯಾವುದೇ ಕಾರಣಗಳಿರಬಹುದು.

ಆದ್ದರಿಂದ ಇಂತಹ ಅಧ್ಯಯನಗಳು ಕೊಡುವ ಫಲಿತತೆಯು ಅತ್ಯಂತ ಸೂಕ್ಷ್ಮ ನೆಲೆಯದ್ದು ಮತ್ತು ಅತ್ಯಂತ ಪರಿಣಾಮಕಾರಿಯಾದದ್ದು ಆಗಿರುತ್ತದೆ. ಭಾಷೆಗೆ ತಾಗಿರುವ/ತಾಗುತ್ತಿರುವ ರೋಗಗಳನ್ನು ಪತ್ತೆ ಹಚ್ಚಲು ಸಹ ಇದು ಸಾಧ್ಯ. ವರ್ಷದಿಂದ ವರ್ಷಕ್ಕೆ ದ್ವಿಭಾಷಿಕರಲ್ಲಾಗುವ ಬದಲಾವಣೆ, ಪ್ರಮಾಣ, ಒಲವುಗಳನ್ನು ಅರ್ಥಮಾಡಿಕೊಳ್ಳಬೇಕಿದೆ. ಇಂತಹ ಒಂದು ಅಮೂಲ್ಯವಾದಂತಹ ಅಧ್ಯಯನವನ್ನು ಡಾ. ಎಂ. ಭಾಗ್ಯಲಕ್ಷ್ಮಿ ಅವರು ನಡೆಸಿದ್ದಾರೆ. ಸಾಕಷ್ಟು ಕ್ಷೇತ್ರಕಾರ್ಯದ ನಂತರ

ಇವರು ನಿರ್ವಹಿಸಿದ ಅಧ್ಯಯನದ ಪ್ರೌಢಿಮೆಯು ಸಹ ಅಗತ್ಯಕ್ಕೆ ತಕ್ಕಂತೆ ಕೋಷ್ಟಕ ಮತ್ತು ನಕ್ಷೆಯ ಮೂಲಕ ಸರಳವಾಗಿ ಸ್ಪಷ್ಟಗೊಳಿಸುತ್ತಾರೆ. ೧೯೫೧ ರಿಂದ ೧೯೯೧ರ ವರೆಗಿನ ಬಳ್ಳಾರಿ ಜಿಲ್ಲೆಯ ಜನಗಣತಿಯ ಆಧಾರಿತ ಕನ್ನಡ – ತೆಲುಗು ಭಾಷೆಯ ವಿವರಗಳು ಬಳ್ಳಾರಿ ಜಿಲ್ಲೆಯ ಜನಜೀವನದ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ. ಇಂತಹ ಸಾಕಷ್ಟು ಮಾಹಿತಿಯ ಮೂಲಕ ಈ ಅಧ್ಯಯನವು ದ್ವಿಭಾಷಿಕ ಬಳಕೆ, ಶೈಕ್ಷಣಿಕ, ವಲಸೆ, ಕಸುಬು, ಮುಂತಾದವುಗಳ ಮೂಲಕ ಮತ್ತು ಕಸುಬುದಾರಿಕೆಯನ್ನೂ ಸಹ ಖಚಿತವಾಗಿ ಸ್ಪಷ್ಟಪಡಿಸುತ್ತದೆ.

## ಇಂದಿನ ಕನ್ನಡ : ರಚನೆ ಮತ್ತು ಬಳಕೆ

**ಎಸ್. ಎನ್. ಶ್ರೀಧರ್ – ( ೨೦೦೯–ದ್ವಿತೀಯ ಮುದ್ರಣ )**

ಕಳೆದ ಒಂದು ಶತಮಾನದಲ್ಲಿ ಜಗತ್ತಿನ ಬಹುಪಾಲು ಭಾಷೆಗಳಲ್ಲಿ ಕ್ರಾಂತಿಕಾರಕ ಪ್ರಕ್ರಿಯೆಗಳು ನಡೆದಿವೆ. ಭಾರತದ ಸನ್ನಿವೇಶದಲ್ಲಿ ಈ ವಿಚಾರ ಕಳೆದ ೫೦ – ೬೦ ವರ್ಷಗಳಲ್ಲಿ ಎಂದು ಹೇಳಬಹುದು. ಸ್ಪಷ್ಟವಾಗಿ ಸ್ವಾತಂತ್ರ್ಯಾನಂತರ. ಅದಕ್ಕೂ ಮೊದಲು ಕವಿರಾಜಮಾರ್ಗದ 'ಕನ್ನಡ ಜಗತ್ತು', ಶಬ್ದಮಣಿದರ್ಪಣದ ವ್ಯಾಕರಣ ಪ್ರಜ್ಞೆ ನಮ್ಮ ಮಿದುಳನ್ನು ಆವರಿಸಿತ್ತು. ಬಹು ಭಾಷಿಕ ಭಾರತ, ಭಾಷಾವಾರು ರಾಜ್ಯಗಳು ರಚನೆಯಾದದ್ದು, ಬ್ರಿಟೀಷರು ಭಾರತವನ್ನು ಬಿಟ್ಟು ಹೋದದ್ದು, ಅನಂತರ ಆಡಳಿತದ ಭ್ರಮೆಗಳು ಕಳಚಿದ್ದು, ಪ್ರಾಶ್ಚಾತ್ಯ ಜಗತ್ತಿಗೆ ನಮ್ಮ ಕಣ್ಣು, ಮನಸ್ಸು ತೆರೆದುಕೊಂಡದ್ದು ಇದೆ. ಮಾರುಕಟ್ಟೆಯ ರೂಪ ಪಡೆದ ಜಗತ್ತು ಅಥವಾ ವ್ಯಾಪಾರದ ದೃಷ್ಟಿಯಿಂದ ಇವತ್ತು ಒಂದೇ ಒಂದು ಜಗತ್ತು, ಒಂದು ಮಾರುಕಟ್ಟೆ ಎನ್ನುವಂತೆ ವರ್ತಿಸತೊಡಗಿತು. ನಿಮಿತ್ತವಾಗಿ ಹಲವು ವಿದ್ಯಮಾನಗಳೂ, ಶಿಕ್ಷಣ, ಮಾಧ್ಯಮ, ಸಮೂಹ ಮಾಧ್ಯಮ, ತಂತ್ರಜ್ಞಾನ ಹೊಸ ಹೊಸ ಸೌಲಭ್ಯಾಕಾಂಕ್ಷೆ ಸರಕುಗಳು ಮುಂತಾದವುಗಳು ಗಡಿಗಳಿಲ್ಲದೆ ವ್ಯವಹರಿಸತೊಡಗಿದವು. ಇಂತೆಲ್ಲದರ ಕಾರಣವಾಗಿ ಸ್ಥಳೀಯತೆಯ ಮನಸ್ಸು ಸಂಕುಚಿತತೆಯನ್ನು ಬಿಟ್ಟು ಹಾರಾಡತೊಡಗಿತು. ಪರಿಣಾಮವಾಗಿ ನಗರಗಳು ಬೆಳೆಯತೊಡಗಿದವು. ಹಳ್ಳಿಗಳಿಗೂ ಅಂತರ್ ರಾಷ್ಟ್ರೀಯ ಉತ್ಪಾದನೆಗಳು ಲೀಲಾಜಾಲವಾಗಿ ತಲುಪತೊಡಗಿದವು... ಹತ್ತು ಹಲವು ಬದಲಾವಣೆಗಳ ಆಯಾಮಗಳು ಕ್ಷೀಣಿಸಿಕೊಂಡವು. ಇಂತಹ ಬದಲಾವಣೆಯೆಂಬುದು ಒಟ್ಟು ಭಾಷೆಯ ಸನ್ನಿವೇಶದಲ್ಲಿ ಪ್ರತ್ಯೇಕವಾಗಿಯೇನು ಇಲ್ಲ.

ಭಾಷೆಯ ಹೃದಯ ಮಿಡಿತವೂ ಹಲವು ಆಯಾಮವಾಗಿ ಆವರಿಸಿ ಬೇಕಾದದ್ದನ್ನು ಸ್ವೀಕರಿಸಿದೆ. ತನ್ನೊಳಗಿನದ್ದೂ ಅನವಶ್ಯಕ ಸುಲಭವಲ್ಲದ್ದು ಎನ್ನಿಸಿದ್ದನ್ನು ಕೈಬಿಟ್ಟಿದೆ. ಪರಿವರ್ತನಾಶೀಲ ಪರಿಸರಕ್ಕೊಂದು ಭಾಷೆ ತನ್ನೊಳಗೆ ರೂಪಿಸಿಕೊಂಡಿತು. ಹೀಗಾಗಿ ಒಂದೇ ವೇದಿಕೆಯ ಮೇಲೆ ಐದು ಜನ ಮುಖಂಡರು/ರಾಜಕಾರಣಿಗಳ ಭಾಷಣಗಳು ಬಹು ಸ್ಪಷ್ಟವಾಗಿ ಅವು ಐದು ಅಥವಾ ಆರು ವಿಭಿನ್ನತೆಯನ್ನು ಪಡೆದಿರುತ್ತವೆ. ಅಂದರೆ ಪ್ರಸ್ತುತ ಕಾಲು ಶತಮಾನದಲ್ಲಿ ಕನ್ನಡ ಭಾಷೆಯ ಸ್ವರೂಪ ಸಾಕಷ್ಟು ಬದಲಾವಣೆಯನ್ನು ಪಡೆದುಕೊಂಡಿದೆ ಎಂಬುದನ್ನು ಸ್ಪಷ್ಟವಾಗಿ ಈ ಪುಸ್ತಕ ನಿದರ್ಶನದ ಮೂಲಕ ನಮ್ಮ ಮುಂದಿಡುತ್ತದೆ. ಈ ಪುಸ್ತಕದ ಹೆಸರೇ ಹೇಳುತ್ತದೆ. 'ಇಂದಿನ ಕನ್ನಡ : ರಚನೆ ಮತ್ತು ಬಳಕೆ'. ಮುಖ್ಯವಾಗಿ ಲೇಖಕರು ಇಲ್ಲಿ ವಿವರಣಾತ್ಮಕ ವ್ಯಾಕರಣದ ವಿಧಾನವನ್ನು ಅನುಸರಿಸಿದ್ದಾರೆ. ಬಳಕೆಯ ನಿದರ್ಶನಗಳನ್ನು ಮುಂದಿಟ್ಟುಕೊಂಡು ವಿವರಣೆಗೆ ಮುಂದಾಗುತ್ತಾರೆ. ಇದು ಇಂತಹ ಅಧ್ಯಯನ ಅಥವಾ ಪ್ರಸ್ತುತ ಕನ್ನಡದ ಸನ್ನಿವೇಶದಲ್ಲಿ ಇದು ಇವತ್ತು ಮಾಡಬೇಕಾದ ಅಧ್ಯಯನವೆಂದು ಕಾಣುತ್ತದೆ. ಯಾಕೆಂದರೆ ಕನ್ನಡ ಭಾಷೆಯ ಅಥವಾ ಸಾಹಿತ್ಯದ ಚರಿತ್ರೆಯೂ ನಡೆದ ದಾರಿಯ ಗತಿಯಲ್ಲೇ ಮುಂದುವರಿಯುತ್ತಿರುವುದು ಕುದುರೆ ಪಟ್ಟಿಯಂತೆ ಮಿತಿಯ ಜಾಡುವಾಗಿದೆ. ಕಾಣಬಹುದಾದ ಹಲವು ಮಗ್ಗಲುಗಳನ್ನು ಮಡಿಚಿರುತ್ತದೆ ಮತ್ತು ಮರೆಮಾಡುತ್ತದೆ. ಇಂತಹ ಸಿಕ್ಕುಗಳನ್ನು ಬಿಡಿಸಿಕೊಳ್ಳುವ ಪ್ರಕ್ರಿಯೆ ಕಳೆದ ಐವತ್ತು ವರ್ಷಗಳಲ್ಲಿ ಸಾಕಷ್ಟು ನಡೆಯುತ್ತಿದೆ ಎಂದೇ ನಾನು ಭಾವಿಸುತ್ತೇನೆ. ಡಾ. ಡಿ. ಎನ್. ಶಂಕರ ಭಟ್, ಎಸ್. ಎನ್. ಶ್ರೀದರ, ಡಾ. ಕೆ. ವಿ. ನಾರಾಯಣ, ಡಾ. ಎಚ್, ಎಸ್, ಬಿಳಿಗಿರಿ, ಮತ್ತು ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ ವಿಭಾಗ. ಇಂತಹ ಅಗತ್ಯ ಹಲವು ಶೋಧಗಳ ಮೂಲಕ ನೋಡುವ ಕಾಣುವ ಯತ್ನ ನಡೆದಿದೆ. ಇಂತಹದೇ ಮುಂದುವರಿಕೆಯಾಗಿ ಪ್ರಸ್ತುತ ಪುಸ್ತಕ ಅಥವಾ ಲೇಖಕರಾದ ಎಸ್. ಎನ್. ಶ್ರೀಧರ್ ಅವರನ್ನು ಕಾಣಬಹುದಾಗಿದೆ.

ಬಹುಮುಖ ಆಯಾಮವನ್ನು ಪಡೆದುಕೊಂಡಿರುವ ಭಾಷೆಯ ಇವತ್ತಿನ ಸನ್ನಿವೇಶದ ಕನ್ನಡವನ್ನು ರಚನಾತ್ಮಕ, ಸಾಮಾಜಿಕ, ಅನ್ವಯಿಕ ನೆಲೆಯಲಿ ಇವರು ನೋಡುತ್ತಾರೆ. ಬಹುಭಾಷಿಕತೆಯ ಸಾಮಾಜಿಕ, ಚಾರಿತ್ರಿಕ ಹಾಗೂ ಸಾಹಿತ್ಯಕ ಆಯಾಮಗಳು ಭಾಷಾ ಸಂಪರ್ಕದ ಪರಿಣಾಮಗಳಾದ ಭಾಷಾಬೆರಕೆ, ಭಾಷಾಪಲ್ಲಟ, ಭಾಷಾಸ್ವೀಕರಣ, ಶೈಲಿ ಸಂಕೀರ್ಣತೆ – ಹಲವು ಭಾಷೆಗಳೊಂದಿಗೆ ಹೊಂದಾಣಿಕೆ, ಸಂಸ್ಕೃತೀಕರಣ, ಆಧುನೀಕರಣ, ಜಾಗತೀಕರಣ ಮುಂತಾದ ಬೃಹತ್ ಪರಿವರ್ತನೆಯ

ಸನ್ನಿವೇಶದಲ್ಲಿ ಕನ್ನಡ. ಇಚಿತಹ ಪ್ರಶ್ನೆಗಳನ್ನ ಅಥವಾ ಸಂಘರ್ಷವನ್ನಿಟ್ಟುಕೊಂಡು ಈ ಪುಸ್ತಕ ಚರ್ಚಿಸಲೆತ್ನಿಸುತ್ತದೆ.

ಈ ಪುಸ್ತಕದಲ್ಲಿ ಒಟ್ಟು ಏಳು ದೀರ್ಘ ಲೇಖನಗಳಿವೆ. ಕನ್ನಡದ ಪರಿಸರದಿಂದ ಹೊರಗೆ ಇದ್ದು ಕನ್ನಡದ ಬಗ್ಗೆ ಚಿಂತಿಸುವ ಕೆಲವೇ ಕೆಲವು ಕನ್ನಡ ಕಾಳಜಿಯನ್ನು ಹೊಂದಿರುವವರಲ್ಲಿ ಎಸ್. ಎನ್. ಶ್ರೀಧರ್ ಒಬ್ಬರು. ಇಲ್ಲಿರುವ ಲೇಖನಗಳನ್ನು ಮೊದಲು ಇಂಗ್ಲೀಷ್‌ನಲ್ಲಿ ಬರೆದವುಗಳಾಗಿದ್ದು ಇವುಗಳನ್ನು ಬೇರೆ ಬೇರೆಯವರು ಭಾಷಾವಿಜ್ಞಾನದಲ್ಲಿ ಆಸಕ್ತಿಯುಳ್ಳ ಚಿಂತಕರು ಕನ್ನಡಕ್ಕೆ ಅನುವಾದಿಸಿದ್ದಾರೆ. ಪ್ರಸ್ತುತ ಕನ್ನಡ ಭಾಷೆಯ ಬಗ್ಗೆ ಅತ್ಯಂತ ಸೂಕ್ಷ್ಮವಾಗಿ ಒಳನೋಟಗಳನ್ನು ಬೀರುವ ಕೃತಿ ಇದಾಗಿದೆ. ಈ ಮೂಲಕ ಇಂದು ಮತ್ತು ನಾಳೆಯ ಕನ್ನಡವನ್ನು ಕುರಿತು ಚಿಂತಿಸುವಂತೆ ಮಾಡುತ್ತದೆ.

ಇವತ್ತು ಅನ್ಯ ಭಾಷೆಯ ಅನಿವಾರ್ಯ ವಾತಾವರಣದಲ್ಲಿ ಕನ್ನಡದ ಅಸ್ಮಿತೆಯನ್ನು ಉಳಿಸಿಕೊಳ್ಳುತ್ತಲೇ ಬೆಳೆಯಬೇಕಿರುವ ಸ್ಥಿತಿಯನ್ನು ವಿಶ್ಲೇಷಿಸುತ್ತಾರೆ. ನುಡಿಬೆರಕೆ, ಸ್ವೀಕರಣ, ನುಡಿಪಲ್ಲಟ, ಭಾಷಾ ಆಧುನಿಕತೆ, ಭಾಷಾಮಿಶ್ರಣ ಮುಂತಾದ ಸಂಗತಿಗಳನ್ನು ವಿಶ್ಲೇಷಿಸುತ್ತ ಕನ್ನಡ ಭಾಷಿಕ ಉಸಿರಾಟವನ್ನು ಕಾಣಿಸುತ್ತಾರೆ. ಕನ್ನಡ ನುಡಿಬೆರಕೆಯ ರಚನಾತ್ಮಕ ಲಕ್ಷಣಗಳನ್ನು ವಿವರಿಸುತ್ತ ಇವರು ಬೆರಕೆಯಾಗುವುದು ಬಿಡಿ ಬಿಡಿ ಪದಗಳು ಮಾತ್ರವಲ್ಲ ವ್ಯಾಕರಣದ ಎಲ್ಲಾ ಹಂತಗಳಲ್ಲೂ ಬೆರಕೆ ನಡೆಯುತ್ತದೆ. ನಾಮಪದಗಳು, ಕ್ರಿಯಾಪದಗಳು, ಗುಣವಾಚಕಗಳು, ಅನ್ವಯಗಳು, ನಾಮ, ಕ್ರಿಯಾಪುಂಜಗಳು, ಅವಲಂಬಿತ ವಾಕ್ಯಗಳೆಲ್ಲವೂ ಬೆರೆಯಬಹುದು ಎನ್ನುತ್ತಾರೆ. ಇದಕ್ಕೆ ಕೈಲಾಸಂ ಅವರ ನಾಟಕವೊಂದರ ಉದಾಹರಣೆ ಕೊಡುತ್ತಾರೆ.

'..... ಕ್ಷಮಿಸು ಡಿಯರ್ ಬಾಯ್, ನಾನು **ಯೂಸ್** ಮಾಡಿದ ಸ್ಟ್ರಾಂಗ್ ಲಾಂಗ್ವೇಜ್‌ಉ ಎಷ್ಟೋ **ಕಂಟ್ರೋಲ್** ಮಾಡೋಕ್ಕೋದ್ದೆ......'[೨] **ಯೂಸ್** ಮತ್ತು **ಕಂಟ್ರೋಲ್** ಎನ್ನುವುದು ಈ ಎರಡು ಪದಗಳು ಕ್ರಿಯಾಪದಗಳು ಎಂದು ಇಂಗ್ಲಿಷ್ ಮೂಲಕ ಚಿಂತಿಸಿದಂತಿದೆ. ಅಥವಾ ಅವು ಕ್ರಿಯಾಪದವೇ, ಆದರೆ ಅವುಗಳನ್ನು ಹಾಗೇ ಯೋಚಿಸಬೇಕೆ ಎನ್ನುವ ಅನುಮಾನಕ್ಕೆ ಕಾರಣವೂ ಆಗುತ್ತದೆ. ಯಾಕೆಂದರೆ ಅವರು ಸೂಚಿಸುವ ಅಥವಾ ಪಡೆದ ಕ್ರಿಯಾಪದದ ಮುಂದಿನ ಪದ ಕನ್ನಡದ್ದೇ ಆದ ಕ್ರಿಯಾ ಪದ ಇದೆ. ಹೀಗಾಗಿ ಅಲ್ಲಿ ಬಳಕೆಯಾಗಿರುವುದು ವಾಕ್ಯದಲ್ಲಿರಬಹುದಾದ ಅಸಂಗತತೆಯನ್ನು ಸೂಚಿಸುವ ನಾಮಪದ ಏಕಾಗಿರಬಾರದು? ಕ್ಯಾಚ್ ಹಿಡಿ, ಟರ್ನಾಗು – ಮುಂತಾದವುಗಳನ್ನು ಕುರಿತು ಯೋಚಿಸಬೇಕಿದೆ. ಎರಡು

ಕ್ರಿಯಾಪದಗಳು ಒಂದು ವಾಕ್ಯದಲ್ಲಿ ಒಟ್ಟಿಗೆ ಬರಲಾರವು. ಇಂತಹ ಸಣ್ಣಪುಟ್ಟ ಸಂಗತಿಯನ್ನು ಬಿಟ್ಟರೆ ಇದು ನಿಜಕ್ಕೂ ಇಂದಿನ ಕನ್ನಡ ರಚನೆ ಮತ್ತು ಬಳಕೆಗೆ ಕನ್ನಡಿಹಿಡಿವ ಯತ್ನ ಮಾಡುತ್ತದೆ ಎನ್ನುವುದರಲ್ಲಿ ಅನುಮಾನವಿಲ್ಲ.

**ಭಾಷಾತಂತ್ರಜ್ಞಾನ (೨೦೦೯) – ಸಂ. ಡಾ. ಸಾಂಬಮೂರ್ತಿ**

ಇವತ್ತಿನ ಮಾನವ ಚಟುವಟಿಕೆಯಲ್ಲಿ ತಂತ್ರಜ್ಞಾನ ಪ್ರಮುಖ ಪಾತ್ರವನ್ನು ನಿರ್ವಹಿಸುತ್ತಿದೆ. ಇವತ್ತಿನ ಜಗತ್ತು ಮತ್ತು ನಾವು ಮಾಹಿತಿ ತಂತ್ರಜ್ಞಾನದ ಮಾಯಾಜಾಲದಲ್ಲಿದ್ದೇವೆ. ಹಾಗಾಗಿ ಇದನ್ನು ಕಂಪ್ಯೂಟರ್ ಯುಗವೆಂತಲೂ ಕರೆಯಲಾಗುತ್ತದೆ. ಕಂಪ್ಯೂಟರ್ ಮಾರುಕಟ್ಟೆ ಜಗತ್ತಿನಲ್ಲಿ ಮಾತ್ರವಲ್ಲ ಮನುಷ್ಯನ ಹತ್ತು – ಹಲವು ಚಟುವಟಿಕೆಗಳಲ್ಲಿ ಅತ್ಯಂತ ಪ್ರಮುಖ ಪಾತ್ರಧಾರಿಯಾಗಿದೆ. ಭಾಷಿಕ ಜಗತ್ತಿನಲ್ಲೂ ಕ್ರಾಂತಿಕಾರಿಯೇ ಆಗಿ ಕಾರ್ಯಪ್ರವೃತ್ತವಾಗಿದೆ. ಇದು ಭಾಷೆಗೆ ಪೂರಕವಾಗಿದೆ ಎನ್ನುವಂತೆ, ಭಾಷೆಯ ಜೀವಂತಿಕೆಯನ್ನೂ ಸಹ ನಾಶಮಾಡುತ್ತದೆ. ಅಂದರೆ ಯಂತ್ರದಂತೆ – ಯಾಂತ್ರಿಕ ಭಾಷೆಯನ್ನು ಹುಟ್ಟು ಹಾಕುತ್ತದೆ ಎಂಬ ಅಳುಕು ಸಹ ಇದೆ. ಅದೇನೆ ಇರಲಿ ಕಂಪ್ಯೂಟರನ್ನು ತಳ್ಳಿ ಇವತ್ತು ಭಾಷೆಯು ಚಲಿಸಲಾರದು ಎನ್ನುವ ಹಂತದಲ್ಲಿ ಇದ್ದೇವೆ.

ಭಾಷಾ ತಂತ್ರಜ್ಞಾನ ಎನ್ನುವ ಈ ಪುಸ್ತಕ ಕೇವಲ ಭಾಷೆ ಮತ್ತು ಕಂಪ್ಯೂಟರನ್ನು ಕುರಿತು ಮಾತ್ರ ಪರಸ್ಪರ ಪ್ರಭಾವ, ಬೆಳವಣಿಗೆಯನ್ನು ಕುರಿತುಹೇಳುವುದಿಲ್ಲ. ಭಾಷೆಯ ಚಾರಿತ್ರಿಕತೆಯ ಬೆಳವಣಿಗೆಯಲ್ಲಿ ತಂತ್ರಜ್ಞಾನ ನಿರ್ವಹಿಸಿದ ಪಾತ್ರ, ಆ ಮೂಲಕ ಭಾಷೆಯು ಬೆಳೆದು ಬಂದ ಬಗೆಯನ್ನು ವಿವರಿಸುತ್ತದೆ. ಇವತ್ತು ಭಾಷೆಯ ಹಲವು ವಲಯಗಳನ್ನು ಹೇಗೆ ತಂತ್ರಜ್ಞಾನ ನಿರ್ವಹಿಸತ್ತದೆ ಎಂಬುದನ್ನು ವಿವರಿಸುತ್ತದೆ. ಬರಹ ಎಂಬುದು ಇವತ್ತು ಮೂಡಿಸುವ ಕ್ರಿಯೆಯಾಗಿದೆ. ಮಾತು, ಬರಹ, ಮೂಡಿಸುವುದು ಮತ್ತು ಬರಹ ಹಾಗೂ ಮೂಡಿಸುವಿಕೆಯ ಸಾಮಾಗ್ರಿಗಳಾದ ಕಲ್ಲು, ಲೋಹ, ತಾಳೆಗರಿ, ಕಾಗದ, ಹಾಗೂ ಕಾಗದ ರಹಿತ ಸ್ಥಿತಿಯು ಬೆಳವಣಿಗೆಯ ಹಂತಗಳು ಮತ್ತು ಆಯಾ ಸನ್ನಿವೇಶದ ಭಾಷಿಕ ಸ್ಥಿತಿಯಾಗಿರುತ್ತದೆ.

ತಂತ್ರಜ್ಞಾನದ ಪೂರ್ವದ ಭಾಷೆಯ ಬಳಕೆಯ (ಬರಹ) ಮಿತಿ ಮತ್ತು ೧೯ನೇ ಶತಮಾನದಲ್ಲಿ ತಂತ್ರಜ್ಞಾನ ಉಂಟುಮಾಡಿದ ಕ್ರಾಂತಿ. ತಾಂತ್ರಿಕ ನೆಲೆಯ ಜಿಗಿತಕ್ಕೆ ಕಾರಣವಾಯಿತು. ಹೀಗೆ ತಂತ್ರಜ್ಞಾನದ ವಿಕಾಸ ಮತ್ತು ಭಾಷೆಯ ಬೆಳವಣಿಗೆ ಮುದ್ರಣ, ಯಂತ್ರ, ಕಂಪ್ಯೂಟರ್, ರೆಕಾರ್ಡರ್, ಮೊಬೈಲ್, ಎಸ್. ಎಂ. ಎಸ್, ಈ-ಮೇಲ್ ಮುಂತಾದ ಸೌಲಭ್ಯಗಳು. ಮತ್ತು ಇವುಗಳ ನಿಮಿತ್ತವಾಗಿ ಭಾಷೆಯಲ್ಲಿ ಕಾಣಿಸಿಕೊಂಡ ಬದಲಾವಣೆಗಳನ್ನು ಸಂಕ್ಷಿಪ್ತವಾಗಿಯಾದರೂ ಸ್ಪಷ್ಟವಾಗಿ ಸೂಕ್ತವಿವರಣೆಯನ್ನು ಕೊಡಲಾಗಿದೆ. ಹಸ್ತಪ್ರತಿಗಳ ಸಂಸ್ಕರಣೆ, ಸಂರಕ್ಷಣೆ ಮತ್ತು ವ್ಯಾಪಕತೆಯನ್ನು ಸಹ ವಿವರಿಸಲಾಗಿದೆ. ತಂತ್ರಜ್ಞಾನದ ಸೌಲಭ್ಯದಿಂದ ಬರಹದಲ್ಲಿ ತರಬಹುದಾದ ವೈವಿಧ್ಯತೆಯೇ ಮೋಹಕತೆ. ಇದು ಅಕ್ಷರಗಳ ಸ್ಪಷ್ಟತೆ, ಸೌಂದರ್ಯ ಹಾಗೂ ಮುದ್ರಣದಲ್ಲಿ ಇವು ಕಾಣುವ ಬಗೆಯನ್ನು ಹಲವು ಮುದ್ರಿತ ಬಗೆಯ ವಿನ್ಯಾಸದ ವಿಚಾರದವರೆಗೆ ವಿವರಿಸಲಾಗಿದೆ. ಕನ್ನಡದಲ್ಲಿ ಪ್ರಕಾಶಕ್, ನುಡಿ, ಶ್ರೀಲಿಪಿ, ಆಕೃತಿ, ಬರಹ, ಪ್ರಜಾ, ಐಲೀಪ್ ಹಾಗೂ ಅನು ಮುಂತಾದ ತಂತ್ರಾಂಶಗಳು ಕಾರ್ಯನಿರ್ವಹಿಸುತ್ತವೆ. ಹಾಗೇನೆ ಭಾಷಾಂತರದ ಹಲವು ಬಗೆಗಳನ್ನು ಇವತ್ತು ಕ್ಷೀಣಿಸುತ್ತ ತಂತ್ರಜ್ಞಾನವೇ ಭಾಷಾಂತರಿಸುವತ್ತ ಹೆಜ್ಜೆ ಹಾಕುತ್ತಿದೆ. ಅಂದರೆ ಮಷಿನ್ ಟ್ರಾನ್ಸ್‌ಲೇಷನ್. ಒಟ್ಟಾರೆ ಮನುಷ್ಯ ಭಾಷೆ ಬಳಸುವ ಹಲವು-ಹತ್ತು ಸನ್ನಿವೇಶದಲ್ಲಿ ಭಾಷೆಯು ಹೇಗಿರಬೇಕು ಎಂದು ಆಲೋಚಿಸುತ್ತಿದ್ದ. ಇವತ್ತು ತಂತ್ರಜ್ಞಾನದ ವ್ಯಾಪಕತೆಯಿಂದಾಗಿ ಅಂತಹ ಸನ್ನಿವೇಶದಲ್ಲಿ ಭಾಷೆ ಹೀಗೆ ಇರಬೇಕು ಎಂದು ತಂತ್ರಜ್ಞಾನ ನೀಡುತ್ತದೆ. ಒಂದು ಕಾಡಿನಲ್ಲಿ ಮರಗಳು ಹೇಗಂದರಾಗೆ ಬೆಳೆಯುವುದು ಅವುಗಳ ಜೈವಿಕ ಗುಣ. ತಂತ್ರಜ್ಞಾನದಿಂದಲೋ ಇನ್ನಿತರೆ ಆಕಾಂಕ್ಷೆಯಿಂದಲೋ ಮರಗಳು ಹೀಗೆ ಇರಬೇಕೆಂದು ಕತ್ತರಿಸಿಯೋ ಕಸಿಮಾಡಿಯೋ ಎತ್ತರ, ಗಾತ್ರ, ಸ್ವರೂಪವನ್ನು ನಿರ್ಧರಿಸುವ ಬಗೆ ಎನ್ನುವುದು ಮನುಷ್ಯನೊಳಗೆ ಇರುವ ಸೌಂದರ್ಯವೆನ್ನುವ ಪ್ರಜ್ಞೆ ಕತ್ತರಿಯಾಡುತ್ತಿರುತ್ತದೆ. ಇಂತಹದೇ ಸ್ಥಿತಿ ಭಾಷೆಗೂ ತಂದುಕೊಳ್ಳುತ್ತೇವೆ. ಪಾಂಡುರಂಗಬಾಬು ಅವರು ತಮ್ಮ ಲೇಖನದ ಕೊನೆಯಲ್ಲಿ ಹೇಳುವಂತೆ ಸಮಸ್ಯೆಯೆಂದರೆ ಭಾಷಾತಂತ್ರಜ್ಞಾನವೆನ್ನುವುದು "ನಮ್ಮ ಅಗತ್ಯಗಳನ್ನು ಪೂರೈಸಬೇಕೇ ಹೊರತು ತಂತ್ರಜ್ಞಾನದ ಅಗತ್ಯಗಳಿಗೆ ನಮ್ಮನ್ನು ಹೊಂದಿಕೊಳ್ಳುವುದು ಸೂಕ್ತವಾಗಲಾರದು" ಎಂಬುದು. ಇದನ್ನೇ ಬೇರೆ ಮಾತುಗಳಲ್ಲಿ ಹೇಳುವುದಾದರೆ ಭಾಷೆಗಾಗಿ ತಂತ್ರಜ್ಞಾನವೋ, ತಂತ್ರಜ್ಞಾನಕ್ಕಾಗಿ ಭಾಷೆಯೋ? ಎನ್ನುವ ಕವಲು ಸ್ಥಿತಿ ಇದೆ.

## ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು.

**ಪ್ರಾಥಮಿಕ ಶಾಲೆಯ ಉರ್ದುಭಾಷಿಕ ಮಕ್ಕಳನ್ನು ಅನುಲಕ್ಷಿಸಿ. ( ೨೦೦೯ ) – ಡಾ. ಪಿ. ಮಹದೇವಯ್ಯ.**

ಪ್ರಸ್ತುತತೆಯನ್ನು ಅರಿಯಬೇಕಿದ್ದರೆ ಕೇವಲ ಪ್ರಸ್ತುತವನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಅರ್ಥವಾಗದು. ಯಾವುದೇ ಆಗಲಿ ವರ್ತಮಾನದಲ್ಲಿ ಉಸಿರಾಡುತ್ತಿರುತ್ತದೆ. ಭೂತದಲ್ಲಿ ಬೇರುಗಳು ಇರುತ್ತವೆ. ಹಾಗೆ ಭವಿಷ್ಯದತ್ತ ದೃಷ್ಟಿನೆಟ್ಟಿರುತ್ತದೆ. ಹಾಗಾಗಿ ಒಂದು ಸಂಸ್ಕೃತಿ, ಭಾಷೆ, ಜನಾಂಗದಂತಹ ಸನ್ನಿವೇಶದ ಅರಿವು ಮತ್ತು ಆತಂಕಗಳನ್ನು ಕಾಣಲು ಇಂತಹ ಮೂರು ನೆಲೆಗಳನ್ನು ಹೊಕ್ಕುಬರಬೇಕಾಗುತ್ತದೆ. ಉದಾ: ಪ್ರಾದೇಶಿಕ ಭಿನ್ನತೆಗಳು, ಜಾತಿ, ಧರ್ಮ, ಪ್ರಾದೇಶಿಕ, ರಾಜಕೀಯ. ಹೀಗೆ ಹಲವು ಕಾರಣಗಳ ನಿಮಿತ್ತವಾಗಿ ಒಂದು ಭಾಷೆಯಲ್ಲಿ ಹಲವು ಭಿನ್ನತೆಗಳು ಕಾಣಲು ಉಂಟು. ಇಂತಹ ವ್ಯತ್ಯಸ್ಥ ಸ್ಥಿತಿಗಳನ್ನು ಈವರೆಗೆ ಇದು ಹೀಗಿದೆ, ಅದು ಹಾಗಿದೆ ಎನ್ನುವ ವರದಿಯೋಪಾದಿಯಲ್ಲಿ ಮಂಡಿಸಿದ್ದಾಯಿತು. ಅಥವಾ ಸಂಸ್ಕೃತದ ತಿರುಳಿನಲ್ಲಿ ನಡೆದದ್ದಾಯಿತು. ಯಾವುದಾದರೊಂದು ಭಾಷೆ, ಜನಾಂಗ ಹೀಗಿದೆ ಎಂಬುದನ್ನು ಈಗಾಗಲೆ ರೂಢಿಗತವಾದ ನೆಲೆ, ಸಿದ್ಧಾಂತಗಳನ್ನು ತಲೆಯಲ್ಲಿ ತುಂಬಿಕೊಂಡು ಹೋಗುವ ಬದಲು, ಅದರ ಸಮಸ್ಯೆಗಳನ್ನು, ವೈವಿಧ್ಯತೆಗಳನ್ನು ಅದರೊಳಗೇ ಕಂಡುಕೊಳ್ಳಬೇಕು ಎಂಬ ಮಾದರಿಯ ನೆಲೆಯಿಂದ ನಡೆದಾಗ ಹೊಸ ದರ್ಶನಗಳು ಕಾಣತೊಡಗಿದವು. ಉದಾ : ಈವರೆಗಿನ ಕನ್ನಡ ಭಾಷೆಯ ಅಧ್ಯಯನಗಳು ಮತ್ತು ಡಾ. ಡಿ. ಎನ್. ಶಂಕರ ಭಟ್ ಅವರ 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ'ಯ ವ್ಯತ್ಯಾಸವನ್ನು ಗಮನಿಸಿದಾಗ ಆ ಸತ್ಯ ನಮ್ಮ ಗಮನಕ್ಕೆ ಬರುತ್ತದೆ. ಅಥವಾ ಡಾ. ಕೆ. ವಿ. ನಾರಾಯಣ ಮತ್ತು ಡಾ. ಡಿ. ಎನ್. ಶಂಕರ ಭಟ್ ಅವರ ಒಟ್ಟು ಬರಹಗಳನ್ನು ಮತ್ತು ಕನ್ನಡ ಭಾಷಾಧ್ಯಯನವೆಂಬ ಹೆಜ್ಜೆ ಗುರುತನ್ನು ಗಮನಿಸಿದಾಗ ವ್ಯತ್ಯಾಸ ಹಾಗೂ ಹೊಸದಾರಿ ಕಾಣತೊಡಗುತ್ತದೆ.

ಕರ್ನಾಟಕವೆಂದರೆ ಕೇವಲ ಕನ್ನಡಿಗರು ಮಾತ್ರ ವಾಸಿಸುತ್ತಿದ್ದಾರೆ ಮತ್ತು ಇಲ್ಲಿ ಏಕೈಕ ಕನ್ನಡ ಭಾಷೆ ಮಾತ್ರ ವಾಸ ಮಾಡುತ್ತಿದೆ ಎಂದು ಯಾರೂ ಉತ್ತರಿಸಲಾರರು. ಹಲವು ಭಾಷಿಕ ಗುಂಪುಗಳು ಇವೆ. ದ್ವಿಭಾಷಿಕ, ಬಹುಭಾಷಿಕ ವಾತಾವರಣವೂ ಇದೆ. ಹೆಚ್ಚು ಭಾಷೆಗಳನ್ನು ಕಲಿಸುವ ಅಥವಾ ನೀನಾವ ಭಾಷಿಕನಾಗಿರು, ಆದರೆ ಇಂಗ್ಲೀಷನ್ನು ಕಲಿಯಲೇಬೇಕು ಎಂಬ ಒತ್ತಡವನ್ನು ಇವತ್ತಿನ ಜಗತ್ತು ನಮ್ಮ ಮುಂದಿಟ್ಟಿದೆ. ಇಂತಹ ಜಗತ್ತಿಗೆ ನಮ್ಮನ್ನು ಒಡ್ಡಿಕೊಳ್ಳುವಾಗ ಶಿಕ್ಷಣವು ಪ್ರಮುಖ

ಪಾತ್ರವನ್ನು ನಿರ್ವಹಿಸಿದೆ. ಶಾಲೆಯಲ್ಲಿ ಕಲಿಯುವ ಭಾಷೆ, ಪರಿಸರದ ಭಾಷೆ, ಮನೆಭಾಷೆ ಇವುಗಳಲ್ಲೆಲ್ಲ ವ್ಯತ್ಯಾಸಗಳು ಇಲ್ಲವೆಂದು ಖಂಡಿತ ಹೇಳಲಾಗದು. ಹಾಗೆನೇ ಉರ್ದುಭಾಷಿಕ ಮಕ್ಕಳು ಕನ್ನಡವನ್ನು ಕಲಿಯುವಾಗ ಎದುರಾಗುವ ಸಮಸ್ಯೆಗಳು ಎಂತಹವು? ಕನ್ನಡಿಗರು ಕಳೆದ ೬೦ ವರ್ಷಗಳಿಂದ ಎದುರಿಸುತ್ತಿರುವ ಇಂಗ್ಲೀಷ್ ಕಲಿಕೆಯ ಸಮಸ್ಯೆ ಎಂತಹದ್ದು? ಇವತ್ತೂ ಅಸಂಖ್ಯಾತ ಹಳ್ಳಿಯಿಚಿದ ಬಂದ ಮಕ್ಕಳು ಎಲ್ಲಾ ವಿಷಯಗಳು ಉತ್ತೀರ್ಣರಾಗಿ ಇಂಗ್ಲೀಷ್ ವಿಷಯದಲ್ಲಿ ಮಾತ್ರ ಅನುತ್ತೀರ್ಣರಾಗುತ್ತಿರುವುದು ಸಾಮಾನ್ಯವಾಗಿದೆ. ಕರ್ನಾಟಕದ ವೈವಿಧ್ಯತೆ, ಜನಾಂಗ, ಜಾತಿ, ಆರ್ಥಿಕ ಪರಿಸ್ಥಿತಿ ಮುಂತಾದ ಹತ್ತು ಹಲವು ಆಯಾಮಗಳು ಇದೆಲ್ಲದರ ಹಿಂದೆ ಇರುವವೆಂದು ಕಾಣುತ್ತದೆ. ಇವು ಹಲವು ಅಧ್ಯಯನಗಳಿಗೆ ಆಕರವಾದೀತು. ಒಂದು ನಿರ್ದಿಷ್ಟಪಡಿಸಿಕೊಳ್ಳುವುದಾದರೆ ಅಥವಾ ಉರ್ದು ಭಾಷಿಕ ಮಕ್ಕಳು ಪ್ರಾಥಮಿಕ ಹಂತದಲ್ಲಿ ಕನ್ನಡ ಭಾಷೆಯನ್ನು ಕಲಿಯುವಾಗ ಎದುರಾಗುವ ಸಮಸ್ಯೆಗಳನ್ನು ಕುರಿತು ಡಾ. ಪಿ. ಮಹಾದೇವಯ್ಯ ಅವರು ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿ ಅತ್ಯಂತ ಮೌಲಿಕ ಅಧ್ಯಯನ ಫಲಿತವನ್ನುಕೊಟ್ಟಿದ್ದಾರೆ.

ಯಾವುದೇ ಮಗು ಮಾತೃ ಭಾಷೆಯಲ್ಲಿ ಸುಲಭವಾಗಿ ಕಲಿಯಬಲ್ಲದು. ಅಥವಾ ಏನನ್ನಾದರು ಒಂದು ಮಗು ಗ್ರಹಿಸಲು ಸಾಧ್ಯವಾಗುವುದು ಮಾತೃಭಾಷೆಯ ಮೂಲಕ ಹೆಚ್ಚು ಸುಲಭ. ಧ್ವನ್ಯಂಗಗಳು ಸಹ ಮಾತೃಭಾಷೆಯ ಲಯಕ್ಕೆ ಒಗ್ಗಿಕೊಂಡಿರುತ್ತವೆ. ಒಂದು ಭಾಷೆಯ ಲಯಕ್ಕೆ ಒಗ್ಗಿದ ಧ್ವನ್ಯಂಗಗಳನ್ನು ಇನ್ನೊಂದು ಭಾಷೆಯ ಧ್ವನಿಗಳನ್ನು ಹೊರಡಿಸುವಾಗ ಸಮಸ್ಯೆ ಎದುರಾಗುತ್ತದೆ. ಅಥವಾ ಅಷ್ಟು ಸಲೀಸಾಗಿ ಉಚ್ಚಾರಣೆ ಆಗಲಾರದು. ತೆಲುಗರು, ಮುಸ್ಲೀಮರು ಮುಂತಾದವರು ಕನ್ನಡವನ್ನು ಉಚ್ಚರಿಸುವಾಗ ತಟ್ಟನೆ ಗೊತ್ತಾಗುತ್ತದೆ. ಯಾಕೆಂದರೆ ಅವರ ಧ್ವನ್ಯಂಗಗಳು ಅವರದೇ ಆದ ಮಾತೃ ಭಾಷೆಗೆ ಹೊಂದಿಕೊಂಡಿರುತ್ತವೆ. ಮತ್ತೊಂದು ಭಾಷೆಯನ್ನು ವ್ಯಕ್ತಿಯ ಬೆಳವಣಿಗೆಯ ಒಂದು ಹಂತದ ನಂತರ ಹೊರಡಿಸುವಾಗ, ಈ ಎರಡನೆಯ ಭಾಷೆಯ ಧ್ವನಿಯನ್ನು ಸಹಜವಾಗಿ ಹೊರಡಿಸಲಾಗದು, ಆಗ ಅಸಹಜವೆನಿಸದೆ ಇರಲಾರದು.

ಉರ್ದುಭಾಷಿಕ ಮಕ್ಕಳ ಮನೆಯಲ್ಲಿ ಕನ್ನಡ ಬಳಕೆ ಇರುವುದಿಲ್ಲ. ಅಥವಾ ಇದ್ದರೂ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಶಾಲೆಯ ಆವರಣದಲ್ಲಿ ಮಕ್ಕಳು ಕನಿಷ್ಟ ಒಂದು ವಿಷಯವಾಗಿ ಕನ್ನಡವನ್ನು ಕಲಿಯಬೇಕೆಂದ ಹಾಗೆ ಮನೆಮಾತಾದ ಉರ್ದು ಭಾಷೆಯು, ಕನ್ನಡ ಭಾಷೆಯ ಕಲಿಕೆಯ ಮೇಲೆ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದೆ ಎಂಬುದನ್ನು ಈ ಪುಸ್ತಕದಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಹಾಗೆ ಕನ್ನಡದ

ಅಕ್ಷರಗಳನ್ನು ಬರೆಯುವಾಗ ಮತ್ತು ಗ್ರಹಿಸುವಾಗ ಹೇಗೆ ಆಲೋಚಿಸುತ್ತಾರೆ. ಮತ್ತು ಕನ್ನಡ ಭಾಷೆಯ ಕಲಿಕೆಯ ಸನ್ನಿವೇಶದಲ್ಲಿ ಉರ್ದುಭಾಷೆಯು ನಿಯಂತ್ರಿಸುವ ಬಗೆಯನ್ನು ಸಹ ಅಧ್ಯಯನ ಮಾಡಲಾಗಿದೆ. 'ಶ', 'ಷ' ಧ್ವನಿಗಳಿಗೆ ಬದಲಾಗಿ ಕೇವಲ 'ಸ' ಧ್ವನಿಯನ್ನು ಬಳಸುವುದು. ಉಚ್ಚಾರಣೆ ಮತ್ತು ಬರವಣಿಗೆಯಲ್ಲಿ ಉಂಟಾಗುವ ವ್ಯತ್ಯಾಸ. ಅಂದರೆ ಗ್ರಹಿಕೆ ಸರಿಯಾಗಿದ್ದು ಉಚ್ಚಾರಣೆ ತಪ್ಪಾಗುವುದು. ಮಕ್ಕಳಿಗೆ ಸಾಮಾನ್ಯವಾಗಿ ಚಿತ್ರಗಳ ಮೂಲಕವಾದ ಕಲಿಕೆ ಅತ್ಯಂತ ಪರಿಣಾಮಕಾರಿಯಾದದ್ದು. ಚಿತ್ರ ಯಾವ ಭಾಷೆಯದ್ದು ಅಲ್ಲ. ಉದಾಹರಣೆಗೆ 'ಕೋಳಿ' ಕೋಳಿಯನ್ನು 'ಮುರ್ಗ' ಎಂದುಕೊಂಡು ಅನಂತರ ಕನ್ನಡದತ್ತ ಚಲಿಸುವುದು. ಓದು ಮತ್ತು ಬರವಣಿಗೆಯಲ್ಲಿನ ಸಮಸ್ಯೆಗಳೂ, ಗುಣಿತಾಕ್ಷರಗಳ ಸನ್ನಿವೇಶದಲ್ಲಿ ಎದುರಾಗುವ ಸಮಸ್ಯೆಗಳು, ಒತ್ತಕ್ಷರಗಳ ಸನ್ನಿವೇಶದಲ್ಲಿ ಕಾಣಿಸಿಕೊಳ್ಳುವ ಸಮಸ್ಯೆ, ಉಚ್ಚಾರಣೆ, ಕಥೆ ಹೇಳುವಾಗ ಕಾಣಿಸಿಕೊಳ್ಳುವ ಸಮಸ್ಯೆಗಳು – ಹೀಗೆ ಹಲವು ನೆಲೆಯಲ್ಲಿ ಉರ್ದು ಭಾಷಿಕ ಮಗು ಕನ್ನಡವನ್ನು ಎರಡನೆಯ ಭಾಷೆಯಾಗಿ ಕಲಿಯಬೇಕಾದ ಸನ್ನಿವೇಶದಲ್ಲಿ ಮಾಡುವ ತಪ್ಪುಗಳನ್ನು ಸಾಕಷ್ಟು ಕಾರಣ ಸಹಿತವಾಗಿ ವಿವರಿಸಲಾಗಿದೆ. ಒಂದು ತಪ್ಪಿನ ಸನ್ನಿವೇಶದಲ್ಲಿ ನೇರವಾಗಿ ಇದು ತಪ್ಪು ಎಂದು ದೂರುವ ಬದಲಾಗಿ ಆ ಮಗುವಿನ ಮಾತೃಭಾಷೆಯ ಮೂಲಕವೂ ಅಂದರೆ ಆ ಭಾಷಿಕರು ಮಾಡುವ ಸಾಮಾನ್ಯವಾದ ತಪ್ಪು ಅಥವಾ ಉಲ್ಲಂಘನೆಯನ್ನು ಪರಿಗಣಿಸಿ ಆಲೋಚಿಸಲಾಗಿದೆ.

ಪ್ರಾಥಮಿಕ ಶಿಕ್ಷಣ ಅತ್ಯಮೂಲ್ಯವಾದ ಕಾಲಘಟ್ಟವಾಗಿದೆ. ಇಲ್ಲಿ ಉಂಟಾಗುವ ಶಿಕ್ಷಣದ ಪರಿಣಾಮ ಪ್ರಮುಖವಾದುದು. ಹೀಗಾಗಿ ಈ ಹಂತದ ಇಂತಹ ಅಧ್ಯಯನಗಳ ಫಲಿತವಾಗಿ ಶಿಕ್ಷಣ ಇಲಾಖೆಗೂ ಆ ಮೂಲಕ ಭಾಷೆಗೂ, ಜನಾಂಗಕ್ಕೂ ಚೈತನ್ಯದ ಮಾದರಿಯಾಗುವುದು.

### ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ (೨೦೦೯) – ಡಾ. ರಂಗನಾಥ ಕಂಟನಕುಂಟೆ.

ಮನುಷ್ಯ ಸಂಘಜೀವಿ. ಸಂಘಜೀವಿಯಾಗಿ ಬದುಕಲು ಮನುಷ್ಯ ಸಮಾಜವನ್ನು ರೂಪಿಸಿಕೊಂಡಿದ್ದಾನೆ. ಹಾಗೆ ರೂಪಿಸಿಕೊಂಡ ಸಮಾಜವು ವ್ಯವಸ್ಥೆಯಿಂದ ಒಡಗೂಡಿದೆ. ಹಾಗೆಯೇ ವ್ಯವಸ್ಥೆಗೆ ನಿಯಮಗಳನ್ನು ಹೆಣೆಯಲಾಗಿದೆ. ಆಳುವ; ಆಳ್ವಿಕೆಗೆ ಒಳಪಡುವ, ದುಡಿಯುವ; ದುಡಿಸಿಕೊಳ್ಳುವವರಿಗೆ ಹಲವು ಆಯಾಮಗಳಿವೆ. ಆ ಆಯಾಮಗಳು ಒಂದೇ ಅಂಕಣದಲ್ಲಿವೆ. ಪ್ರಭುತ್ವಗಳು

ಆಹ್ವಾನಿಸುತ್ತವೆ. ಹೀಗಾಗಿ ಅವರ ಒಟ್ಟು ಬದುಕಿನ ಪಾಲುದಾರಿಕೆ ಅಥವಾ ರೀತಿಯಲ್ಲಿ ಭಾಷೆಯು ಬಳಕೆಯಾಗುವ ಬಗೆಯೂ ಭಿನ್ನ. ಹಾಗೂ ಭಾಷೆಯ ರಾಜಕಾರಣ ಮತ್ತು ಭಾಷೆಯ ಅಧೀನತೆ ತನ್ನ ಅವಯವಗಳನ್ನು ಒಂದು ವಾಗ್ವಾದದಂತೆ ಗುರುತುಗಳನ್ನು ಬಿತ್ತರಿಸುತ್ತದೆ. ಪ್ರಭುತ್ವದ ಗುರುತು ಇದನ್ನು ಸ್ಪಷ್ಟಗೊಳಿಸುತ್ತದೆ. ಜನಸಾಮಾನ್ಯರಿಲ್ಲದೆ ಸಾಮ್ರಾಜ್ಯವಿಲ್ಲ ಎನ್ನುವ ಸತ್ಯದಂತೆ, ಪ್ರಭುತ್ವ ಭಾಷೆಯ ಚಲನೆಗೆ ಅಧೀನತೆಯೂ ದಿಕ್ಕಾಗಿರುತ್ತದೆ ಎಂಬುದು ಕೂಡ ಸತ್ಯ ಸಂಗತಿಯೇ. ಯಾಕೆಂದರೆ ಯಾವುದೇ ಭಾಷೆ ಸಂವಹನ ಮಾತ್ರವೇ ಅಲ್ಲ ವ್ಯವಹಾರ ಮಾಧ್ಯಮವೂ ಹೌದು. ಮನುಷ್ಯ ತನ್ನ ಬದುಕಿನ ಸ್ಥಿತಿಗನುಗುಣವಾಗಿ ಕ್ರಿಯಾಶೀಲನಾಗಿರುತ್ತಾನೆ. ಅಂತೆಯೇ ಅದರಾಳದಲ್ಲಿ ಭಾಷೆಯ ಜೀವಂತಿಕೆ ಅಡಗಿರುತ್ತದೆ.

ಭಾಷಾ ಬೆಳವಣಿಗೆ, ಭಾಷಾಮೇಲಾಧಿಪತ್ಯ, ಭಾಷಾಸಂಘರ್ಷ, ಭಾಷಾದುರಾಭಿಮಾನ ಮುಂತಾದವು ರಾಜಕಾರಣದಂತೆಯೇ ಇವೆ. ಇಂತಹ ಪ್ರಭುತ್ವ ಸಾಧಿಸುವ ರಾಜಕಾರಣ ಭಾಷೆಯ ಆಳದಲ್ಲಿಯೂ ತನ್ನ ಪ್ರಭಾವವನ್ನು ಬೀರುತ್ತದೆ. ಭಾಷೆಯ ಹೊಸ ಆಯಾಮಕ್ಕೆ ಕಾರಣವೂ ಅಗಬಹುದು ಮತ್ತು ಒಂದು ಭಾಷೆಯ ಇಕ್ಕಟ್ಟಿಗೂ ಕಾರಣವಾಗಬಲ್ಲದು. ಇಂತಹ ಸನ್ನಿವೇಶದಲ್ಲಿ ಅಧೀನತೆ ಸಹಜವಾಗಿ ಮಿತಿಗೊಳ್ಳುವದಾಗುತ್ತದೆ. ಪ್ರಭುತ್ವದ ಭಾಷೆಯೂ ಇನ್ನೊಂದು ಮತ್ತೊಂದು ಆಯಾಮವನ್ನು ಪಡೆದಿರುತ್ತೆ. ಒಂದು ಅಧೀನ ಭಾಷೆಯ ಹಲವು ಅಂಶಗಳನ್ನು ಹೀರಿಕೊಳ್ಳಬಹುದು ಅಥವಾ ಹೀರಿಕೊಳ್ಳದೇ ಸವಾರಿ ಮಾಡುವ ಭರದಲಿ ಹೊಸತನವನ್ನು ಅನಿವಾರ್ಯವಾಗಿ ಕಂಡುಕೊಳ್ಳುತ್ತಿರುತ್ತದೆ. ಬೇರೆಡೆಯ ಭಾಷೆಗಳ ಬೆಳಕನ್ನು ಪಡೆಯುವ ಶಕ್ತಿಯನ್ನು, ಸಂಪರ್ಕ ಸಾಧ್ಯತೆಯನ್ನು ಸಾಧಿಸಿರುತ್ತದೆ. ಕನ್ನಡ ತುಳು, ಲಂಬಾಣಿ, ಸೋಲಿಗಾಸ್ ಭಾಷೆಗಳ ಸಂಪರ್ಕ ಒಂದು ಬಗೆಯದಾದರೆ, ಕನ್ನಡದ ಹಲವು ಪ್ರಬೇಧಗಳನ್ನೇ ಗಮನಿಸಬಹುದು. ಮಂಗಳೂರು ಭಾಷೆಯನ್ನು ತಮಾಷೆ ಮಾಡಲಿಕ್ಕಾಗಿಯೇ ಸಿನಿಮಾಗಳಲ್ಲಿ ಬಳಸಲಾಗುತ್ತಿತ್ತು. ಗುಲ್ಬರ್ಗ ಅಥವಾ ಧಾರವಾಡ ಕನ್ನಡವನ್ನೂ ಗೇಲಿಮಾಡುವ ರಾಜಧಾನಿಯ ಪ್ರಭುತ್ವ ಪ್ರಜ್ಞೆ, ಹಾಗೇನೆ ಬ್ರಾಹ್ಮಣರು ಮತ್ತು ದಲಿತರು, ಸಂಸ್ಕೃತ – ಕನ್ನಡ ಮುಂತಾಗಿ ಭಾಷಿಕ ಚಾರಿತ್ರಿಕ ಪ್ರಜ್ಞೆಯನ್ನು ಗಮನಿಸಬಹುದಾಗಿದೆ. ಹಾಗೇನೆ ಶಿಕ್ಷಣದ ಮಾಧ್ಯಮ ಭಾಷೆ ಕನ್ನಡವೋ, ಇಂಗ್ಲೀಷೋ? ಕನ್ನಡವಾದರೆ ಯಾವ ಕನ್ನಡ? ಮುಂತಾಗಿ ಕಣ್ಮುಂದೆ ನಿಲ್ಲಿಸುವ ಈ ಪ್ರಶ್ನೆಗಳು ಭಾಷೆಯ ಸಂಘರ್ಷವನ್ನು ತೋರ್ಪಡಿಸದೆ ಇರಲಾರದು.

ಪ್ರಸ್ತುತ ಅಧ್ಯಯನವು ಸುದೀರ್ಘವಾಗಿದ್ದರೂ ಸೂಕ್ತ ಚೌಕಟ್ಟನ್ನು ನಿರ್ಮಿಸಿಕೊಂಡಿರುವುದಾಗಿದೆ. ಅಲ್ಲದೆ ಪ್ರಸ್ತಾವನೆಯಲ್ಲಿಯೇ ಅಧ್ಯಯನಕಾರರು

ಅಧ್ಯಯನದ ನಿಲುವುಗಳನ್ನು ವ್ಯಕ್ತಪಡಿಸುತ್ತಾರೆ. ಅಧ್ಯಯನಕ್ಕೆ ಪೂರಕ ಅಧ್ಯಯನಗಳ ಅಥವಾ ಈ ಕ್ಷೇತ್ರದಲ್ಲಿ ಈಗಾಗಲೆ ನಡೆದ ಅಧ್ಯಯನಗಳನ್ನು ಸಂಶೋಧಕರು ವಿವರಣೆಯ ಬದಲಾಗಿ ತಮ್ಮ ಸಂಶೋಧನೆಯ ಪ್ರಜ್ಞೆಯನ್ನು ಕಟ್ಟಿಕೊಡುತ್ತಾರೆ. ಮತ್ತು ಆ ನೆಲೆಯಲ್ಲಿಯೇ ನಿಲುವುಗಳನ್ನು ತಾತ್ವಿಕಗೊಳಿಸಿಕೊಳ್ಳುತ್ತಾರೆ.

ಸಮಾರೋಪವೂ ಸೇರಿದಂತೆ ಒಟ್ಟು ಏಳು ಅಧ್ಯಾಯಗಳಿಗೆ ಈ ಸಂಶೋಧನಾ ಮಹಾಪ್ರಬಂಧದ ವ್ಯಾಪ್ತಿ ಹರಡಿಕೊಂಡಿದೆ. ಮೊದಲ ಅಧ್ಯಾಯದಲ್ಲಿ ಕ್ನನಡ ಭಾಷಿಕ ವಾಗ್ವಾದ ವಾದಗಳನ್ನು ಚರ್ಚಿಸಲಾಗಿದೆ. ಕರ್ನಾಟಕತ್ವ, ಸಂಸ್ಕೃತಿ, ಚಳುವಳಿ, ಚಿಂತನೆಗಳನ್ನು ಕುರಿತು ಕಟ್ಟಿಕೊಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಆಧುನಿಕ ಪ್ರಭುತ್ವ ಭಾಷೆಯ ರಾಜಕಾರಣದ ಸೂಕ್ಷ್ಮತೆಗಳನ್ನು ರಾಷ್ಟ್ರಪ್ರಭುತ್ವದ ಸೋಗು, ಸಾಮ್ರಾಜ್ಯಶಾಹಿತ್ವ, ಬೇರೆ ಬೇರೆ ನೆಲೆಯಲ್ಲಿ ದಾಳಿಯಿಡುವ ಬಗೆಯನ್ನು ಕುರಿತು ಶೋಧಿಸಲಾಗಿದೆ. ಅನಂತರದ ಅಧ್ಯಾಯಗಳಲ್ಲಿ ವಸಾಹತುಶಾಹಿಯ ಆಕ್ರಮಣ; ಇಂಗ್ಲಿಷ್ ಹೇರಿಕೆಗೆ ಅಡಿಗಲ್ಲು ಎಂದು, ಇಂಗ್ಲಿಷ್ ಉಂಟುಮಾಡುವ ತಾರತಮ್ಯ, ಸಂಘರ್ಷವನ್ನು ಕುರಿತು ಚಿತ್ರಿಸಲಾಗಿದೆ. ಹೀಗೆ ಭಾಷೆಯನ್ನು ಸಮಾಜ, ಪ್ರಭುತ್ವ, ಮಾರುಕಟ್ಟೆ, ಹಣಕಾಸು ವ್ಯವಹಾರ, ರಾಜಕೀಯ ನೆಲೆಗಟ್ಟುಗಳಲ್ಲಿ ವಿಶ್ಲೇಷಿಸಲಾಗಿದೆ. ಸಮಾಜ ಅಂದರೆ ಜನಸಾಮಾನ್ಯರ ಬದುಕಿನೊಂದಿಗೆ ಅನುಸಂಧಾನ ಮಾಡಲಾಗಿದೆ. ಅಂದರೆ ಭಾಷೆ ಸಮಾಜದಲ್ಲಿನ ಎಲ್ಲಾ ಆಗುಹೋಗುಗಳಿಂದ ಪ್ರತ್ಯೇಕವಾಗಿ ಇರುವುದಿಲ್ಲ. ಅದು ಅವೆಲ್ಲದರೊಂದಿಗೆ ನೇರ ಸಂಬಂಧ ಹೊಂದಿರುವುದಾಗಿರುತ್ತದೆ. ಸಮಾಜದ ಸಂಪತ್ತಿನ ಮೇಲೆ ಹಿಡಿತ ಸಾಧಿಸಿರುವವರು ಭಾಷೆಯನ್ನು ಹಿಡಿತಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುತ್ತಿರುತ್ತಾರೆ. ಸಮಾಜವನ್ನು ಇಲ್ಲವೇ ಒಂದು ಸಮುದಾಯವನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಭಾಷೆಯನ್ನು ಬಳಸಲಾಗುತ್ತದೆ. ಖಾಸಗಿ ಆಸ್ತಿ, ಪ್ರಭುತ್ವಗಳ ಉಗಮವಾದ ಕಾಲಘಟ್ಟದಿಂದಲೂ ಆರಂಭವಾಗಿ ರಾಜಪ್ರಭುತ್ವಗಳಿಂದ ಹಿಡಿದು ವಸಾಹತು ಮತ್ತು ನವವಸಾಹತು ವ್ಯವಸ್ಥೆಗಳಲ್ಲೂ ನಾವಿದನ್ನು ಕಾಣಬಹುದಾಗಿದೆ. ಇವತ್ತಿನ ಜಾಗತೀಕರಣದ ಮಾರುಕಟ್ಟೆಯ ಹಿತಾಸಕ್ತಿಗಳಲ್ಲಿ ಭಾಷಾ ರಾಜಕಾರಣ ಸಾಕಷ್ಟು ವ್ಯಾಪಕವಾಗಿ ನಡೆದಿದೆ. ಸಾಮ್ರಾಜ್ಯಶಾಹಿ ಶಕ್ತಿಗಳ ಹಾಗೂ ಆಳುವ ವರ್ಗಗಳ ಆರ್ಥಿಕ ಹಾಗೂ ರಾಜಕೀಯ ಹಿತಾಸಕ್ತಿಗಳಿಗೆ ಅಗತ್ಯವಾಗಿರುವುದರಿಂದ ಹಾಗೆ ಮಾಡಲಾಗುತ್ತದೆ. ಆರ್ಥಿಕತೆ, ಭಾಷೆ, ಶಿಕ್ಷಣ, ಸಂಸ್ಕೃತಿ, ವ್ಯಾಪಾರ ಎಲ್ಲವೂ ತನ್ನ ಹಿಡಿತಕ್ಕೆ ತೆಗೆದುಕೊಂಡು ತನ್ನ ಅಗತ್ಯಕ್ಕೆ ಅನುಗುಣವಾಗಿ ಪರಿವರ್ತಿಸಿಕೊಳ್ಳುತ್ತದೆ. ಉದಾಹರಣೆಗೆ : ಇಂಗ್ಲಿಷ್ ಇವತ್ತು ಅಂತಹ ಸಾಮ್ರಾಜ್ಯಶಾಹಿ ಭಾಷೆಯಾಗಿದೆ.

ಇವತ್ತು ಇಂಗ್ಲಿಷ್‌ನ ಕಲಿಕೆಯಂತೆ ಹೇರಿಕೆಯೂ ಇಲ್ಲದಿಲ್ಲ. ಪರಿಸರದ ಮೂಲಕ ಕಲಿತ ಭಾಷೆಯನ್ನು ಶಿಕ್ಷಣದ ಮೂಲಕ ಪುನಃ ಕಲಿತಾಗಲೂ ಅದು ಅವನ ಬದುಕಿಗೆ ಪ್ರಸ್ತುತವಾಗದಿದ್ದರೆ ಆ ಭಾಷೆ ಕಲಿತು ಪ್ರಯೋಜನವೇನು? ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಪ್ರಭುತ್ವದ ಕೃಪೆಗೊಳಗಾದ ಭಾಷೆಗಳು ಮೇಲ್ಚಲನೆಗೊಳಗಾಗುತ್ತಿರುವುದನ್ನು ಗಮನಿಸಲಾಗಿದೆ. ಎಂದು ಈ ನಿಬಂಧದ ಮೌಲ್ಯ ಮಾಪಕರಲ್ಲೊಬ್ಬರಾದ ಪ್ರೊ. ಎಚ್. ಎಂ. ಮಹೇಶ್ವರಯ್ಯ ಅಭಿಪ್ರಾಯಪಡುತ್ತಾರೆ. ಹೀಗೆ ತನ್ನ ವ್ಯಾಪ್ತಿಯನ್ನು ಪಡೆದಿರುವ ಈ ಪ್ರಬಂಧವು ವಿಶ್ಲೇಷಣಾತ್ಮಕ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಅಲ್ಲದೆ ಮೊದಲ ಮಾತು ಬರೆದಿರುವ ಪ್ರೊ. ಕಿ. ರಂ. ನಾಗರಾಜ್ ಅವರು ಗುರುತಿಸುವಂತೆ ಸಮಾಜಿಕ ಭಾಷಾಶಾಸ್ತ್ರ, ಇವುಗಳನ್ನು ಪರಿಶೀಲಿಸಿ ಭಾಷೆಯ ಸಂಬಂಧವಾಗಿ ಏರ್ಪಡುವ ಪಾಶ್ಚಾತ್ಯ ಅಹಂಕಾರ ಹಾಗೂ ಪೌರ್ವಾತ್ಯದ ಕೀಳರಿಮೆಯ ಪ್ರಶ್ನೆಗಳನ್ನು ಇಲ್ಲಿ ವಿವೇಚಿಸಿದ್ದಾರೆ. ಭಾಷೆಗೂ ಮಾರುಕಟ್ಟೆಗೂ ಇರುವ ಸಂಬಂಧಗಳೂ ಬಹುತ್ವದ ಭಾಷಾ ಕಲ್ಪನೆಗೂ ಏಕಾಕೃತಿಯ ಒತ್ತಡಕ್ಕೂ ಮಧ್ಯ ಹುಟ್ಟಿರುವ ಘರ್ಷಣೆಗಳನ್ನು ಈ ಕೃತಿ ವಿವೇಚಿಸುತ್ತದೆ. ಹೇರಿಕೆಯ ಭಾಷೆಯಾಗಿ ಇಂಗ್ಲಿಷ್, ಬೇಡಿಕೆಯ ಭಾಷೆಯಾಗಿ ಇಂಗ್ಲಿಷ್, ಸರ್ಕಾರಿ ಪ್ರಣೀತವಾದ ಇಂಗ್ಲಿಷ್ ಇಂತಹ ಮುಖ್ಯ ಪ್ರಶ್ನೆಗಳು ಇಲ್ಲಿ ಚರ್ಚಿತವಾಗಿವೆ. ಜಾಗತೀಕರಣದ ಇಂದಿನ ದಿನಗಳಲ್ಲಿ ಭಾಷೆ ನಿರ್ವಹಿಸುತ್ತಿರುವ ಅಸಮಾನತೆಯನ್ನು ಈ ಕೃತಿ ವಿಶ್ಲೇಷಿಸುತ್ತದೆ. ಭಾಷೆ, ಸಂಸ್ಕೃತಿ, ರಾಜಕಾರಣ, ಆಕ್ರಮಣಶೀಲತೆ – ಮುಂತಾದ ಆಯಾಮಗಳನ್ನು ಸಂಸ್ಕೃತಿಯ ಕೇಂದ್ರದ ಪ್ರಶ್ನೆಯಾಗಿರಿಸಿಕೊಂಡಿರುವುದೇ ಇದರ ಮುಖ್ಯ ನೆಲೆ ಎನ್ನುತ್ತಾರೆ.

ಜನಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ ಕೃತಿಯು ಪ್ರಸ್ತುತ ಸನ್ನಿವೇಶದಲ್ಲಿನ ಮತ್ತು ಭಾಷಾರಾಜಕಾರಣ ಕುರಿತು ತಿಳಿಸಿಕೊಡುವ ಉಪಯುಕ್ತ ಅಧ್ಯಯನವಾಗಿದೆ.

**ಅಡಿ ಟಿಪ್ಪಣಿಗಳು :**

**೧. ಅರ್ವಿಯಸ್ ಸುಂದರಂ – ಶಾಸ್ತ್ರೀಯ ಕನ್ನಡ ಭಾಷೆ ಪುಟ – ೮**

**೨. ಎಚ್. ಎಸ್. ರಾಘವೇಂದ್ರ ರಾವ್ – ನಮಸ್ಕಾರ**

**೩. ಕೆ. ವಿ. ನಾರಾಯಣ – ತೊಂಡು ಮೇವು ಕಂತೆ – ೧**

**೪. ಕೆ. ವಿ. ನಾರಾಯಣ – ತೊಂಡು ಮೇವು ಕಂತೆ – ೭ ಪುಟ – ೨೮೮**

# ಅಧ್ಯಾಯ : ೩

# ಜಾಗತಿಕ ಮತ್ತು ಭಾರತೀಯ ಸಂದರ್ಭದಲ್ಲಿ ನಡೆದ ಅಧ್ಯಯನದ ಸಂಕ್ಷಿಪ್ತ ಚರಿತ್ರೆ

ಜಾಗತಿಕ ಮತ್ತು ಭಾರತೀಯ ಸಂದರ್ಭದಲ್ಲಿ ನಡೆದ ಅಧ್ಯಯನದ ಸಮೀಕ್ಷೆ. ಈ ಅಧ್ಯಾಯದ ಹೆಸರೇ ಸೂಚಿಸುವಂತೆ ಇದೊಂದು ಸಂಕ್ಷಿಪ್ತವಾಗಿ ಜಾಗತಿಕ ಭಾಷಾವಿಜ್ಞಾನ ನಡೆದು ಬಂದ ದಾರಿಯನ್ನು ಕಾಣುವ ಬಗೆಯದು. ಭಾಷಾವಿಜ್ಞಾನದ ಚರಿತ್ರೆಯನ್ನು ಕಟ್ಟುವುದಲ್ಲ, ಹಕ್ಕಿ ನೋಟದಂತೆ ಕಂಡುಕೊಳ್ಳುವುದು ಈ ಅಧ್ಯಾಯದ ತುರ್ತು. ಮುಂದಿನ ಅಧ್ಯಾಯಕ್ಕೆ ಇದೊಂದು ಪೂರಕವಾದ ಅಧ್ಯಾಯ. ಹಾಗಾಗಿ ಈ ಅಧ್ಯಾಯದಲ್ಲಿ ಕಾಣಿಸಿಕೊಳ್ಳುವ ಅನೇಕ ಸಂಗತಿಗಳನ್ನು ವಿವರವಾಗಿಯಾಗಲಿ, ವಿಮರ್ಶಾತ್ಮಕವಾಗಿಯಾಗಲಿ ಚರ್ಚೆಯನ್ನು ಮಾಡುವುದಿಲ್ಲ. ಪೂರಕವಾದ ಅಧ್ಯಾಯವಾಗಿರುವುದರಿಂದ ಮುಖ್ಯವಾದ ಅಧ್ಯಾಯಕ್ಕೆ ಪ್ರವೇಶಿಕೆಯಾಗಿ ಬಾಗಿಲು ಕಿಟಕಿಗಳನ್ನು ಕಂಡುಕೊಳ್ಳುವ ಬಗೆಯದು. ಆದ್ದರಿಂದಲೇ ಇಲ್ಲಿ ಬರುವ ಭಾಷಾವಿಜ್ಞಾನದ ಅನೇಕ ಮಾದರಿಗಳಾಗಲಿ, ಅಸಂಖ್ಯಾತ ಭಾಷಾಧ್ಯಯನಕಾರರನ್ನಾಗಲಿ ಸಂಪೂರ್ಣವಾಗಿ ಎಳೆ ಎಳೆಯಾಗಿ ಕಂಡುಕೊಳ್ಳಲಾಗಿಲ್ಲ. ಒಂದೊಂದು ಭಾಗದಿಂದ ಒಬ್ಬೊಬ್ಬರನ್ನು ಅಥವಾ ಕೆಲವು ಉದಾಹರಣೆಗಳನ್ನು ಹೇಳಲಾಗಿದೆ. ಜಗತ್ತಿನಾದ್ಯಂತಹ ಭಾಷಾವಿಜ್ಞಾನಿಗಳ ಸಂಗತಿಯನ್ನು ವಿವರವಾಗಿ ಚರ್ಚಿಸುತ್ತ ಕಟ್ಟಿಕೊಳ್ಳುತ್ತಾ ಹೋದರೆ ಈ ಅಧ್ಯಯನದ ದಿಕ್ಕು ತಪ್ಪೀತು. ಅಂದರೆ ಎಲ್ಲಾ ದಾಖಲೆಗಳನ್ನು ಹೇಳಲಾಗದು. ಸುದೀರ್ಘ ಚರ್ಚೆ ಇದರ ಉದ್ದೇಶ ಅಲ್ಲ. ಮುಖ್ಯ ಅಧ್ಯಯನಕ್ಕೊಂದು ಪೂರಕವಾದ ಸಂಕ್ಷಿಪ್ತ ಚರಿತ್ರೆ ಹೇಳುವುದು ಇದರ ಉದ್ದೇಶ.

ಭಾಷಾಶಾಸ್ತ್ರ, ಭಾಷಾವಿಜ್ಞಾನ, ಭಾಷಾಧ್ಯಯನ ಹೀಗೆ ಪರಿವರ್ತನೆಯ ದಾರಿಯಲ್ಲಿ ಭಾಷಾಧ್ಯಯನವು ಚಲಿಸಿಕೊಂಡುಬಂದಿರುವುದು ಈಗ ಇತಿಹಾಸ. ಇಂತಹದೊಂದು ಇತಿಹಾಸವು ಏಕ್‌ದಮ್ ಕಾಣಿಸಿಕೊಂಡದ್ದೇನು ಅಲ್ಲ. ಇತರ ಜ್ಞಾನಶಾಖೆಗಳಂತೆ ಇವತ್ತು ಭಾಷಾವಿಜ್ಞಾನವು ರೂಪಿತಗೊಂಡದ್ದು ಇದೆ. ಆದರೆ ಅದಕ್ಕೆ ಅದರದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸುತ್ತಲೇ ಬಂದಿದೆ. ಭಾಷೆ ಈ ಲೋಕದ ಸರ್ವತೋಮುಖ ಅಭಿವೃದ್ಧಿಗೆ ಬೆಳಕಾಗಿರುವಂತೆ ಭಾಷೆಯ ಹಲವು ಪರಿವರ್ತನೆಗಳಿಗೆ ಹಾಗೆ ಬಳಸಲ್ಪಡುವ ಲೋಕ ಮೂಲಕ್ಕೂ ಬಹು ಮುಖ್ಯ

ಕಾರಣವೂ ಆಗಿರುತ್ತದೆ. ಅಂದರೆ ಭಾಷೆಯ ಬೆಳಕಿನಲ್ಲಿ ಬದುಕುವ ಮನುಷ್ಯ ಕಟ್ಟಿಕೊಳ್ಳುವ ಸಂಸ್ಕೃತಿ, ಕಂಡುಕೊಳ್ಳುವ ಜ್ಞಾನ ಸೇರಿದಂತೆ ನಿತ್ಯದ ಬದುಕಿಗೆ ಭಾಷೆಯೇ ಜೀವಾಳ. ಅಂತೆ ಬಳಸಲ್ಪಡುವ ಭಾಷೆಯ ಪ್ರಣೀತತೆಯಿಂದ ತನಗೆ ಬೇಕಾದ, ಬೇಕು-ಬೇಡಗಳನ್ನು ಮೀರಿ ವರ್ತಿಸುವ, ಕಂಡುಕೊಳ್ಳುವ ತಂತ್ರಜ್ಞಾನ, ಮಾರುಕಟ್ಟೆ ಇತ್ಯಾದಿ ಇತ್ಯಾದಿಗಳು ಭಾಷೆಯ ಮೇಲೆ ಪ್ರಭಾವ ಬೀರುತ್ತಿರುವುದು. ಇದು ಎಂದಿನಿಂದಲೂ ನಡೆದುಬಂದ ಬಗೆಯೂ ಆಗಿರುವುದು ಇದೆ.

ಇಂತಹ ಇತಿಹಾಸದ ಮಗ್ಗಲುಗಳನ್ನು ಕುರಿತು ಆಯಾ ಕಾಲಕ್ಕೆ ಕೆಲವರಾದರೂ ಭಾಷಾವರ್ತನೆಗಳನ್ನು ಕುರಿತು ಕುತೂಹಲ ಮೂಡಿ ಅಧ್ಯಯನ ಮಾಡಿರುವುದುಂಟು. ಅಂತಹ ಅಧ್ಯಯನವೂ ತನ್ನದೇ ಆದ ಇತಿಹಾಸವನ್ನು ಕಟ್ಟಿಕೊಂಡಿದೆ. ಅಂತಹ ಇತಿಹಾಸವನ್ನು ಕುರಿತು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಕಟ್ಟಿಕೊಳ್ಳುವ ಪ್ರಯತ್ನ ಮಾಡಲಾಗುವುದು.

ಪ್ರಪಂಚದ ವ್ಯಾಕರಣದ ಇತಹಾಸಕ್ಕೆ ಭಾರತದ ಕೊಡುಗೆ ಅತ್ಯಂತ ಮಹತ್ವಪೂರ್ಣವೂ ಅಪೂರ್ವವಾದುದು ಆಗಿದೆ. ಸಂಸ್ಕೃತದಲ್ಲಿ ವ್ಯಾಕರಣದ ಚರಿತ್ರೆ ವೇದಗಳಷ್ಟು ಹಳೆಯದು. ಋಗ್ವೇದದ ಹತ್ತನೆಯ ಮಂಡಲದಲ್ಲಿ ಇದಕ್ಕೆ ಉಲ್ಲೇಖ ದೊರೆಯುತ್ತದೆ. ಕ್ರಿ. ಶ. ಪೂ. ಎಂಟನೆಯ ಶತಮಾನದ ನಿಘಂಟುಕಾರನಾದ ಯಾಸ್ಕನು ಮೊದಲ ಭಾಷಾಶಾಸ್ತ್ರಜ್ಞನೆನಿಸಿದ್ದಾನೆ. ಅಲ್ಲಿಂದ ಮುಂದೆ ಸಂಸ್ಕೃತದಲ್ಲಿ ಸುಮಾರು ಹದನಾಲ್ಕು ವ್ಯಾಕರಣ ಸಂಪ್ರದಾಯಗಳು ಬೆಳೆದುಬಂದವು. ನೂರಾರು ವ್ಯಾಕರಣಗಳ ಸಹಸ್ರಾರು ವೃತ್ತಿ ವ್ಯಾಖ್ಯಾನಗಳ ಪರಂಪರೆಯೇ ಬೆಳೆಯಿತು. ಯಾಸ್ಕನ ತರುವಾಯ ಸುಮಾರು ಒಂದು ಶತಮಾನ ಗತಿಸಿದ ಮೇಲೆ ಪಾಣಿನಿ ಸುಮಾರು ಒಂದು ಸಾವಿರ ಸೂತ್ರಗಳ ಬೃಹತ್ ಅಷ್ಟಾಧ್ಯಾಯಿ ವ್ಯಾಕರಣ ಕೃತಿಯನ್ನು ರಚಿಸಿ ತನ್ನ ಸಂಪ್ರದಾಏ ಒಂದನ್ನು ಗಟ್ಟಿ ಬುನಾದಿಯ ಮೇಲೆ ನಿಲ್ಲಸಿದನು. ಯಾಸ್ಕ ಹಾಗೂ ಪಾಣಿನಿ ಇವರ ನಡುವಿನ ಕಾಲದಲ್ಲಿ ಇಂದ್ರಗೋಮಿನ್ ಎಂಬ ವೈಯಾಕರಣ ಪ್ರಾರಂಭಿಸಿದ ಐಂದ್ರ ಎಂಬ ವ್ಯಾಕರಣ ಸಂಪ್ರದಾಯ ಒಂದಿರಬೇಕೆಂದು ಊಹೆ ಇದೆ. ಆದರೆ ಅಷ್ಟಾಧ್ಯಾಯಿಯ ಸಹಶಾಸ್ತ್ರೀಯತೆ-ಅಚ್ಚುಕಟ್ಟು ಮುಂದೆ ಬಂದ ಯಾಔ ಸಂಪ್ರದಾಯದಲ್ಲೂ ಕಾಣದೆ ಇರುವುದರಿಂದ ಇಂದಿಗೂ ಅದುವೇ ಸಂಸ್ಕೃತದ ಪ್ರಮಾಣ ವ್ಯಾಖರಣವೆನ್ನಿಸಿದೆ. ಹಾಗೆಯೇ ಇವತ್ತಿಗೂ ಮತ್ತೆ ಮತ್ತೆ ಚರ್ಚೆಗೆ ಒಳಗಾಗುತ್ತಿರುವ ವ್ಯಾಕರಣ ಕೃತಿಯಾಗಿದೆ. ಅಷ್ಟಾಧ್ಯಾಯಿಯನ್ನೇ ಆಶ್ರಯಿಸಿದ ಚಂದ್ರಗೋಮಿಯ ವ್ಯಾಕರಣ ಚಾಂದ್ರ ಸಂಪ್ರದಾಯ ಎಂಬ ಸಂಪ್ರದಾಯವನ್ನೇ ನಿರ್ಮಿಸುವಷ್ಟು ಜನಪ್ರೀಯವಾಯಿತು. ಇದು ಬೌದ್ಧ ವ್ಯಾಕರಣವೆರನ್ನಿಸಿದೆ.

ಪಾಣಿನಿಯ ಸಂಪ್ರದಾಯದಿಂದ ಹನ್ನೊಂದನೆಯ ಶತಮಾನದಲ್ಲಿ ಹುಟ್ಟಿದ ಮತ್ತೊಂದು ವ್ಯಾಕರಣ ಹೇಮಚಂದ್ರನ 'ಶಬ್ದಾನುಶಾಸನ' ಪಾಣೀನಿಯನ್ನು ಅನುಸರಿಸಿಯೂ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡು ಕ್ಲಿಷ್ಟತೆಗಳನ್ನು ತೊಡೆದು ಹಾಕಿ ಸಾಮಾನ್ಯರೂ ಅರ್ಥಮಾಡಿಕೊಳ್ಳುವಂತೆ ಜನಪ್ರೀಯ ವ್ಯಾಕರಣವನ್ನು ರಚಿಸಿರುವ ಕೀರ್ತಿ ಪ್ರಾಯಶ: ಕರ್ನಾಟಕದವನಾಗಿರಬೇಕೆಂದು ಹೇಳಲಾಗುವ ಶರ್ವವರ್ಮನಿಗೆ ಸಲ್ಲುತ್ತದೆ. ಇವನ 'ಕಾತಂತ್ರ' ವ್ಯಾಕರಣ ಸಂಪ್ರದಾಯ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ತುಂಬ ಪ್ರಚಲಿತವಿದ್ದಂತೆ ತೋರುತ್ತದೆ. ಸಂಸ್ಕೃತದಲ್ಲಿ ಸ್ವರೂಪಾಚಾರ್ಯನ ಸಾರಸ್ವತ ಸಂಪ್ರದಾಯ 'ಮುಗ್ಧಭೋಧ' ರಚಿಸಿದ ಭೋಪದೇವನ ಸಂಪ್ರದಾಯ, 'ಸಂಕ್ಷಿಪ್ತಸಾರ'ದ ಕರ್ತೃ ಜುಮಾರನಂದಿಯ ಸಂಪ್ರದಾಯ, ಪದ್ಮನಾಭ ಭಟ್ಟನ 'ಸೌಪದ್ಮಸಂಪ್ರದಾಯ' ಮುಂತಾಧ ಸಂಪ್ರದಾಯಗಳು ಬಂದಿವೆ. ಎಲ್ಲಾ ಶಾಸ್ತ್ರ ಅಥವಾ ಜ್ಞಾನ ಶಾಖೆಗಳಂತೆ ಭಾಷಾವಿಜ್ಞಾನಕ್ಕೂ ಒಂದು ಇತಿಹಾಸವಿರುವುದು. ಅಧ್ಯಯನಕ್ಕೆ ತೊಡಗಿದಾಗ ಬಿಚ್ಚಿಕೊಳ್ಳುವ ಪದರುಗಳ ಕ್ರಮವೇ ನಿದರ್ಶನವೆಂದು ಕಾಣುತ್ತದೆ. ಭಾಷಾವಿಜ್ಞಾನ ಆಧುನಿಕತೆಯನ್ನು ಕಂಡುಕೊಂಡದ್ದು ಇತ್ತೀಚೆಗೆ. ಅಂದರೆ ಇಪ್ಪತ್ತನೆಯ ಶತಮಾನದ ಆರಂಭದ ಹಂತದಲ್ಲಿ. ಅದಕ್ಕೂ ಮೊದಲು ಭಾಷೆಗಳ ಅಧ್ಯಯನವನ್ನು ವ್ಯಾಕರಣಗಳಲ್ಲಿ ಕಾಣಬಹುದಾಗಿದೆ. ಹಾಗೆ ವ್ಯಾಕರಣ ಮಾದರಿಯಲ್ಲಿ ಆರಂಭದ ಭಾಷಾಧ್ಯಯನವು ಇವತ್ತು ಭಾಷಾವಿಜ್ಞಾನದ ಮಾದರಿಗೆ ಬಂದಿದೆ ಮಾತ್ರವಲ್ಲ, ಜಗತ್ತಿನ ಎಲ್ಲೆಡೆಯೂ ವ್ಯಾಪಿಸಿಕೊಂಡಿದೆ. ವ್ಯಾಕರಣ ಮಾದರಿಯ ಭಾಷಾಧ್ಯಯನಕಾರರಿಗೆ ನಿಯಮಗಳನ್ನು ಕಾಣುವ ಮತ್ತು ರೂಪಿಸುವುದರಲ್ಲೇ ಸಂತೃಪ್ತರಾದ್ದರಿಂದ ನಿಜವಾದ ಭಾಷೆಯ ಸ್ವರೂಪವನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ಯಾರೂ ಮಾಡಲಿಲ್ಲವೆಂದು ಕಾಣುತ್ತೆ.

ಅಂದರೆ ಭಾಷೆಯಲ್ಲಿ ಯಾವುದು ಸರಿ, ಯಾವುದು ತಪ್ಪು ಎನ್ನುವುದು ಮುಖ್ಯವಾದ ಪ್ರಶ್ನೆಯಾಗಿ ಕಾಡಿತ್ತು. "ಬಹುಮಟ್ಟಿಗೆ Prescriptive ಆಗಿದ್ದುದೇ ಹೊರತು Descriptive ಆಗಿದ್ದಿಲ್ಲ. ಈಗಲೂ ಕೂಡ ಭಾಷೆಯಲ್ಲಿ ಸಾಧು ಯಾವುದು, ಅಸಾಧು ಯಾವುದು ಎಂಬುದರ ಚರ್ಚೆ ನಿಂತಿಲ್ಲ. 'It is I' ಸರಿಯೇ It is me' ಸರಿಯೇ ? often, soften ಎಂಬ ಪದಗಳಲ್ಲ (t) ಯನ್ನು ಉಚ್ಚರಿಸಬೇಕೇ ಬೇಡವೇ? ಪ್ರಥಮಾ ವಿಭಕ್ತಿಯಲ್ಲಿ 'ರಾಮನು' ಎಂದು ಹೇಳಬೇಕೇ 'ರಾಮ' ಎಂದರೆ ಸಾಕೇ? 'ಕಡಮೆ' ಸರಿಯೇ 'ಕಡಿಮೆ' ಸರಿಯೇ? ಈ ಚರ್ಚೆಗಳು ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಭಾಷೆಗಳಲ್ಲೂ ನಡೆಯುತ್ತಲೇ ಇರುತ್ತವೆ[7].

ಜಗತ್ತಿನ ಎಲ್ಲಾ ಸಮುದಾಯಗಳು ಅಥವಾ ಒಂದೊಂದು ಸಮಾಜವೂ ಒಂದೊಂದು ಭಾಷೆಯನ್ನು ಸಂಪಾದಿಸಿಕೊಂಡಿವೆ. ಹಾಗೆ ಸಂಪಾದಿಸಿಕೊಂಡ ಭಾಷೆಯನ್ನು ತನ್ನ ವ್ಯವಹಾರಕ್ಕಾಗಿ ಬಳಸುತ್ತಿದ್ದರೂ, ಆ ಭಾಷೆಯನ್ನು ಕುರಿತು ಚಿಂತಿಸಿದ್ದು ವಿರಳವೇ ಸರಿ. ಭಾಷೆ ಎಂದರೇನು? ಭಾಷೆ ಹೇಗೆ ಹುಟ್ಟಿ ಬೆಳೆದಿದೆ? ಎಂಬ ಕುರಿತು ಆಲೋಚಿಸಿದ್ದು ಕಡಿಮೆಯೇ. ಇಂತಹ ಹಲವು ಪ್ರಶ್ನೆಗಳನ್ನು ಭಾಷೆಯನ್ನು ಕುರಿತು ಕೇಳಿಕೊಂಡವರಲ್ಲಿ ಜಗತ್ತಿನಲ್ಲೇ ಭಾರತೀಯರು ಮೊದಲಿಗರು. ಭಾಷೆಯನ್ನು ಕುರಿತು ಅಷ್ಟೇನು ಮಹತ್ವದ ಸಂಗತಿ ಎಂದು ಅನ್ನಿಸದೇ ಇರುವ ಅಥವಾ ಅದೊಂದು ನಿರುಪಯುಕ್ತವಾದ, ಯೋಚಿಸಬೇಕಾದಂತಹ ಮಹತ್ವದ್ದೇನು ಅಲ್ಲ ಎಂಬ ನಂಬುಗೆಯ ಕಾಲದಲ್ಲೇ ಭಾರತೀಯರು ಭಾಷೆಯನ್ನು ಕುರಿತು ಸಾಕಷ್ಟು ಯೋಚಿಸಿದ್ದಾರೆ. ಅಂತಹ ಭಾಷಾಧ್ಯಯನಕಾರರಲ್ಲಿ ಅಥವಾ ವೈಯಾಕರಣಿಗರಲ್ಲಿ ಮೊದಲಿಗರೆಂದರೆ ಪಾಣಿನಿ, ಯಾಸ್ಕ, ಕಾತ್ಯಾಯನ, ಪತಂಜಲಿ, ಜಯಾದಿತ್ಯ, ವಾಮನ, ಜಿನೇಂದ್ರಬುದ್ಧಿ, ಹರದತ್ತ, ಭರ್ತೃಹರಿ, ಕಯ್ಯಟ, ಕೌಮುದಿಕಾರ, ವಿಮಲ ಸರಸ್ವತಿ, ರಾಮಚಂದ್ರ, ಭಟ್ಟೋಜಿ ದೀಕ್ಷಿತ್, ವರದರಾಜ, ಹೇಮಚಂದ್ರ, ಬೊಪ್ಪದೇವ ಮುಂತಾದವರು ಮುಖ್ಯರೆನಿಸಿದ್ದಾರೆ. ವೇದಗಳ ಪಾಠವನ್ನು ಉಚ್ಚಾರಣೆಯನ್ನು ಶುದ್ಧವಾಗಿಡಲು ಕ್ರಮಪಾಠ, ಜಟಾಪಾಠ ಘನಪಾಠ ಇತ್ಯಾದಿ ವಿಧಾನಗಳನ್ನು ರೂಪಿಸಿ ಜಾರಿಗೆ ತಂದರು. ಪದಪಾಠದಲ್ಲಿ ಒಂದೊಂದು ಪದವನ್ನು ಬಿಡಿಸಿ ಪ್ರತ್ಯೇಕವಾಗಿ ತೋರಿಸಲಾಗುತ್ತದೆ. ಸಮಾಸಗಳನ್ನು ಬಿಡಿಸಲಾಗುತ್ತದೆ. ಇದನ್ನೆಲ್ಲ ಮಾಡಬೇಕಾದರೆ ಭಾಷೆಯನ್ನು ವಿಶ್ಲೇಷಿಸಬೇಕಾಗುತ್ತದೆ. ತದನಂತರ ಪ್ರಾತಿಶಾಖ್ಯಗಳು ಬಂದವು. ವೇದಗಳನ್ನು ವಾಚನಮಾಡುವ ವಿಧಾನವು ಅದಾಗಲೇ ನಿಯಮಕಗಳು ಇದ್ದವು. ಅಲ್ಲೂ ಸಹ ಭಾಷೆಯನ್ನು ಕುರಿತು ಕೆಲವು ಪ್ರಮುಖ ಅಂಶಗಳು ಕಾಣಬರುತ್ತವೆ. ಅನಂತರ ಕಾಣಿಸಿಕೊಳ್ಳುವ ಯಾಸ್ಕನು ವೇದಗಳಲ್ಲಿ ಬರುವ ಪದಗಳಿಗೆ ನಿಷ್ಪತ್ತಿಯನ್ನು ಹೇಳಿದ್ದಾನೆ.

ಪ್ರಾಚೀನ ಭಾರತದಲ್ಲಿ ಭಾಷೆಯ ಅಧ್ಯಯನ ಬಹು ಹಿಂದೆಯೇ ಆರಂಭಗೊಂಡಿತ್ತು ಎಂಬುದಕ್ಕೆ ಪ್ರಾಚೀನವಾದ ಹಲವು ಗ್ರಂಥಗಳೇ ನಿದರ್ಶನ. ಪ್ರಾಚೀನವಾದ ಕೆಲವು ಅತ್ಯುತ್ತಮ ಗ್ರಂಥಗಳೆಂದರೆ ಬ್ರಾಹ್ಮಣ, ಅರಣ್ಯಕ, ಪ್ರಾತಿಶಾಖ್ಯ, ಶಿಕ್ಷಣ ಗ್ರಂಥಗಳು ಆಗಿವೆ. ಇವುಗಳಲ್ಲಿ ಭಾಷೆಯನ್ನು ಕುರಿತು ನಡೆದ ಅನೇಕ ಚರ್ಚೆಗಳು, ವಿಷಯಗಳು, ಒಳನೋಟಗಳು ಇಂದಿಗೂ ಪ್ರಮುಖವಾಗಿವೆ.

ಸಂಸ್ಕೃತದ ಸ್ವರ ಮತ್ತು ವ್ಯಂಜನಗಳ ಧ್ವನಿಗಳನ್ನು ಸ್ಥೂಲವಾಗಿ ತಿಳಿಸಬಲ್ಲ ಒಂದು ಶಿಕ್ಷಾಗ್ರಂಥ ಕೂಡ ಪ್ರಾಚೀನ ಕಾಲದಲ್ಲಾಗಲೇ ರಚಿಸಲ್ಪಟ್ಟಿತ್ತು. ಇದರಲ್ಲಿ ಸ್ವರ

ಮತ್ತು ವ್ಯಂಜನಗಳಿಗಿರುವ ವ್ಯತ್ಯಾಸವನ್ನು ಸೂಚಿಸಲಾಗಿದೆಯಾದರೂ ಧ್ವನಿಗಳನ್ನು ವರ್ಗೀಕರಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಇದಷ್ಟೇ ಅಲ್ಲದೆ ಈ ಗ್ರಂಥದಲ್ಲಿ ಭಾಷೆಯನ್ನು ಕುರಿತು ಅನೇಕ ವಿಚಾರಗಳನ್ನು ವಿಶ್ಲೇಷಿಸಿ ವಿವರಿಸಿಕೊಳ್ಳಬಹುದಾದ ವಿಧಾನವನ್ನು ವಿವರಿಸಲಾಗಿದೆ.

ವೇದಗಳಲ್ಲಿ ಕಂಡುಬರುವ ಕಠಿಣ ಪದಗಳನ್ನು ಪಟ್ಟಿಮಾಡಿ ಸಿದ್ಧಗೊಳಿಸಿದ ಬೇರೆ ಬೇರೆ ಬಗೆಯ ನಿಘಂಟುಗಳು ಹೊರಬಂದವು. ಆದರೆ ಕಠಿಣ ಪದಗಳ ಕೋಶಗಳಲ್ಲಿ ಪದಗಳ ಅರ್ಥವನ್ನಾಗಲೀ ವ್ಯುತ್ಪತ್ತಿಯನ್ನಾಗಲೀ ಯಾರೂ ವಿವರಿಸುವ ಪ್ರಯತ್ನ ಮಾಡಿದಂತೆ ಕಾಣಬರುವುದಿಲ್ಲ. ಈ ಅರ್ಥ ಮತ್ತು ಪದಗಳ ವ್ಯುತ್ಪತ್ತಿಯನ್ನು ಕುರಿತು ಹೇಳುವ ಕಾರ್ಯವನ್ನು ಮೊಟ್ಟ ಮೊದಲಿಗೆ ಕೈಗೆತ್ತಿಕೊಂಡವನು ಯಾಸ್ಕ. ಈತ ತನ್ನ ನಿರುಕ್ತ ಎಂಬ ಶಬ್ದಕೋಶದಲ್ಲಿ ಕೆಲವು ಸಂಸ್ಕೃತದ ಕ್ಲಿಷ್ಟ ಪದಗಳನ್ನು ಸಂಗ್ರಹಿಸಿ ಅವುಗಳ ವ್ಯುತ್ಪತ್ತಿಯನ್ನು ತಿಳಿಸಿದ್ದಾನೆ.

ಯಾಸ್ಕನ ನಂತರದ ಮತ್ತು ಸಂಸ್ಕೃತ ವ್ಯಾಕರಣ ಪರಂಪರೆಯಲ್ಲಿ ಮಹತ್ವದ ಹೆಸರು ಪಾಣಿನಿಯದು. ಈತ ತನ್ನ ಕಾಲಘಟ್ಟದಲ್ಲಿ ಬಳಕೆಗಿದ್ದ ವ್ಯಾವಹಾರಿಕವಾಗಿದ್ದ ಸಂಸ್ಕೃತ ಭಾಷೆಯನ್ನು ಸಾಕಷ್ಟು ಪರಿಶ್ರಮವಹಿಸಿ ಪರಿಶೀಲಿಸಿ ವ್ಯಾಕರಣವೊಂದನ್ನು ಮೊದಲಿಗೆ ಸಿದ್ಧಪಡಿಸಿದನು. ಸಂಸ್ಕೃತದಲ್ಲಿ ಇವತ್ತಿಗೂ ಪ್ರಸಿದ್ದ ವ್ಯಾಕರಣ ಕೃತಿ ಅಷ್ಟಾಧ್ಯಾಯಿ. ಅಷ್ಟಾಧ್ಯಾಯಿಯ ಪ್ರಭಾವದಲ್ಲೇ ಅನಂತರ ಸಂಸ್ಕೃತ ವ್ಯಾಕರಣವನ್ನು ಕಟ್ಟಿಕೊಳ್ಳಲಾಯಿತು. ಇದು ಭಾರತದ ಇತರ ಭಾಷೆಗಳ ಮೇಲೆಯೂ ತನ್ನ ಪ್ರಭಾವವನ್ನು ಬೀರಿತು. ಹಳೆಗನ್ನಡದ ವ್ಯಾಕರಣಗಳು ಸಹ ಅಷ್ಟಾಧ್ಯಾಯಿಯಂತೆ ನಿಯಮಾತ್ಮಕ ವ್ಯಾಕರಣಗಳನ್ನು ರೂಪಿಸುವುದರಲ್ಲಿ ಯಶಸ್ವಿಯಾದವು. ಸಂಸ್ಕೃತ ಭಾಷೆಯಲ್ಲಿ ವ್ಯಾಕರಣ ನಿಯಮಗಳನ್ನು ಅಷ್ಟಾಧ್ಯಾಯಿಯಷ್ಟು ಸೂಕ್ಷ್ಮವಾಗಿ ವಿವರಿಸಿ ತೋರಿಸಬಲ್ಲ ಯಾವ ವ್ಯಾಕರಣ ಗ್ರಂಥವೂ ಆಗಿನ ಕಾಲದಲ್ಲಿ ಹೊರಬಂದಿರದಿದ್ದ ಕಾರಣ ಪಾಣಿನಿಯ ಈ ಪ್ರಯತ್ನ ಅಪೂರ್ವವಾದುದು.

ಪಾಣಿನಿಯ ಕಾಲಕ್ಕೆ ವ್ಯಾಕರಣಗಳನ್ನು ರಚಿಸುವ ಪ್ರಯತ್ನಗಳು ನಡೆದವು. ಆದರೂ ಅಷ್ಟಾಧ್ಯಾಯಿಯಷ್ಟು ಸಮರ್ಥವಾಗಿ ಕಂಡುಬರಲಿಲ್ಲ. ಕನ್ನಡದ ಸನ್ನಿವೇಶದಲ್ಲಿ ಕೇಶೀರಾಜನ ಶಬ್ದಮಣಿದರ್ಪಣದಷ್ಟೇ ಮಾನ್ಯತೆ ಇದೆ. ಕನ್ನಡದ ಹಲವು ವ್ಯಾಕರಣಗಳು ಬಂದರೂ ಶಬ್ದಮಣಿದರ್ಪಣದಂತೆ ಭಾಷಾವಿಜ್ಞಾನಿಗಳ ಮನ್ನಣೆ ಪಡೆಯಲಾಗಲಿಲ್ಲ. ಭಾಷಾವಿಜ್ಞಾನದ ಮೂಲ ತತ್ವಗಳನ್ನು, ನೋಟಗಳನ್ನು ಪಾಣಿನಿಯ ಅಷ್ಟಾಧ್ಯಾಯಿಯಲ್ಲೇ ಮೊಟ್ಟಮೊದಲಿಗೆ ಕಾಣಿಸಿಕೊಂಡಿದ್ದರಿಂದ ಮತ್ತು

ಜಗತ್ತಿನ ಹಲವು ಭಾಷಾಧ್ಯಯನಕಾರರು ಈ ಪ್ರಯತ್ನವನ್ನು ಗೌರವಿಸಿದರು. ಧ್ವನಿಗಳು ಮತ್ತು ಅವುಗಳ ವರ್ಗೀಕರಣ, ಪದಗಳು ಮತ್ತು ವಾಕ್ಯಗಳು ಅವುಗಳ ರಚನೆ ಮತ್ತು ವಿಭಜನೆ ಮುಂತಾದವುಗಳಿಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಸೂಕ್ಷ್ಮವಾಗಿ ಮತ್ತು ವೈಜ್ಞಾನಿಕವಾಗಿ ವಿವರಿಸಲಾಗಿದೆ.

ಪಾಣಿನಿಯ ಅನಂತರ ಕಾಣಿಸಿಕೊಳ್ಳುವ ಮತ್ತೊಬ್ಬ ಪ್ರಮುಖ ವ್ಯಾಕರಣಕಾರ ಕಾತ್ಯಾಯನ. ಸಾಮಾನ್ಯವಾಗಿ ಪಾಣಿನಿಯ ಅಷ್ಟಾಧ್ಯಾಯದ ಲೋಪ ದೋಷಗಳನ್ನು ಕುರಿತು ಚರ್ಚಿಸುವುದರಲ್ಲೇ ಬಹುಪಾಲು ವ್ಯಾಕರಣಕಾರರು ನಿರತರಾಗಿದ್ದರು. ಅಂತಹವರಲ್ಲಿ ಪತಂಜಲಿ ಕೂಡ ಒಬ್ಬರು. ಪತಂಜಲಿಯೂ ಪಾಣಿನಿ ಮತ್ತು ಕಾತ್ಯಾಯನರ ವ್ಯಾಕರಣ ಸೂತ್ರಗಳನ್ನು ಆಳವಾಗಿ ಪರಿಶೀಲಿಸಿ ಅವನ್ನು ಪರಿಷ್ಕರಿಸಿ ವಿದ್ವಾಂಸರ ಬಳಕೆಗೆ ಅನುಕೂಲವಾಗುವಂತೆ ಮಾಡಿದನು. ಆ ಮೂಲಕ ವ್ಯಾಕರಣಕ್ಕೆ ಹೊಸ ಆಯಾಮವನ್ನು ನೀಡಿದನು. ಅಂದರೆ ಅದುವರೆಗೆ ಬಂದ ವ್ಯಾಕರಣಗಳು, ಟೀಕೆಗಳು, ಪ್ರಶಂಸೆಗಳನ್ನು ಅಧ್ಯಯನಮಾಡಿ ವ್ಯಾಕರಣವನ್ನು ಹೊಸ ರೂಪಕ್ಕೆ ತಂದನು.

ಅನಂತರ ಬೇರೆ ಬೇರೆ ಟೀಕೆ ಟಿಪ್ಪಣಿಗಳು, ವ್ಯಾಖ್ಯಾನ ಗ್ರಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ವಿಜಯಾದಿತ್ಯ ಮತ್ತು ವಾಮನರ ಕೌಶಿಕಾವೃತ್ತಿ, ಜೈನೇಂದ್ರಬುದ್ಧಿಯ ಕೌಶಿಕವಿವರಣ, ಪಂಚಿಕಹರದತ್ತನ ಪದಮಂಜರಿ, ಭರ್ತೃಹರಿಯ ವಾಕ್ಪದೀಯ, ಕೈಯ್ಯಟನ ಮಹಾಭಾಷ್ಯಪ್ರದೀಪ, ವಿಮಲ ಸರಸ್ವತಿಯ ರೂಪಮಾಲ, ರಾಮಚಂದ್ರನ ಪ್ರಕ್ರೀಯಕೌಮುದಿ, ಭಟ್ಟೋಜಿ ದೀಕ್ಷಿತನ ಸಿದ್ಧಾಂತಕೌಮುದಿ ಮುಂತಾದ ವ್ಯಾಖ್ಯಾನ ಗ್ರಂಥಗಳು ಹೆಚ್ಚು ಹೆಸರುವಾಸಿಯಾಗಿವೆ. ಕನ್ನಡ ಸಾಹಿತ್ಯದ ಸನ್ನಿವೇಶದಲ್ಲಿ ಪಂಪ ಹಾಕಿಕೊಟ್ಟ ದಾರಿಯಲ್ಲಿ ರನ್ನ ಪೊನ್ನ ಮುಂತಾದ ಹತ್ತನೇ ಶತಮಾನದ ಕವಿಗಳು ನಡೆದಂತೆಯೇ ಸಂಸ್ಕೃತ ವ್ಯಾಕರಣದ ಸನ್ನಿವೇಶದಲ್ಲಿ ಪಾಣಿನಿ ಮತ್ತು ಪತಂಜಲಿಯವರ ವ್ಯಾಕರಣ ವಿಚಾರಗಳ ಧಾರೆಯಲ್ಲಿ ಇರುವವುಗಳಾಗಿವೆ.

ಸಂಸ್ಕೃತ ವ್ಯಾಕರಣದ ನಂತರದಲ್ಲಿ ಪ್ರಾಕೃತ ವ್ಯಾಕರಣಗಳು ಕಾಣಿಸಿಕೊಂಡವು. ಈ ಪ್ರಾಕೃತ ವ್ಯಾಕರಣಗಳು ಸಹ ಸಂಸ್ಕೃತ ವ್ಯಾಕರಣ ಮಾದರಿಯನ್ನು ಅನುಸರಿಸಿದವುಗಳಾಗಿವೆ. ಮುಖ್ಯವಾಗಿ ಪಾಣಿನಿ ಮತ್ತು ಪತಂಜಲಿಯ ವ್ಯಾಕರಣಗಳನ್ನು ಅನುಸರಿಸಿ ರಚಿಸಲ್ಪಟ್ಟವು. ಪ್ರಾಕೃತ ವ್ಯಾಕರಣಕಾರರಲ್ಲಿ ರಾಮಚಂದ್ರ, ಹೇಮಚಂದ್ರ, ವರರುಚಿ, ಬೊಪ್ಪದೇವ ಮುಂತಾದವರು ಮುಖ್ಯರೆನಿಸಿದ್ದಾರೆ. ಅಲ್ಲದೆ ಭಾರತೀಯ ಇತರ ಭಾಷೆಗಳಲ್ಲಿಯೂ ಈ ಬಗೆಯ ವ್ಯಾಕರಣ ರಚನಾ ಪ್ರಕ್ರಿಯೆಯೂ

ನಡೆಯಿತು. ಕನ್ನಡದಲ್ಲಿ ಶಬ್ದಮಣಿದರ್ಪಣ ಸಹ ಅಂತಹ ಸಂಸ್ಕೃತ ವ್ಯಾಕರಣವನ್ನು ಮಾದರಿಯಾಗಿಟ್ಟುಕೊಂಡು ರಚಿಸಲ್ಪಟ್ಟ ಕೃತಿಯಾಗಿದೆ. ಒಟ್ಟಾರೆಯಾಗಿ ಪ್ರಾಚೀನ ಭಾರತೀಯರು ಪಾಣಿನಿ ಮತ್ತು ಪತಂಜಲಿಯ ಅವರ ವ್ಯಾಕರಣಗಳನ್ನು ಆಧರಿಸಿ ಭಾರತದ ಬೇರೆ ಬೇರೆ ಭಾಷೆಗಳ ವ್ಯಾಕರಣ ಗ್ರಂಥಗಳನ್ನು ರಚಿಸಿಕೊಂಡರು. ಹಾಗೆ ರಚಿಸಿಕೊಂಡ ವ್ಯಾಕರಣಗಳಲ್ಲಿ ತಮಿಳು, ತೆಲುಗು, ಮಲೆಯಾಳಮ್ ಭಾಷೆಗಳ ಪ್ರಾಚೀನ ವ್ಯಾಕರಣ ಗ್ರಂಥಗಳು ಮುಖ್ಯವಾಗಿವೆ.

ಸಂಸ್ಕೃತದ ಮೇಲೆ ಪಾಣಿನಿಯ ಅಷ್ಟಾಧ್ಯಾಯಿಯ ಪ್ರಭಾವವು ಅದ್ಭುತ. ಆಧುನಿಕರ ಪ್ರಕಾರ ವ್ಯಾಕರಣವು ಭಾಷೆಗೆ ನಿಯಮಗಳನ್ನು ಹಾಕಕೂಡದು. ಅದು ಭಾಷೆಯನ್ನು ವಿವರಿಸಬೇಕು. ಸರಿ ಯಾವುದು, ತಪ್ಪು ಯಾವುದು ಎಂಬುದನ್ನು ಹೇಳಬಾರದು. ಇದನ್ನು ಪಾಣಿನಿಗೆ ಅನ್ವಯಿಸಲೇಕೂಡದು. ಭಾರತೀಯರು ಆತನನ್ನು ಋಷಿ ಎಂದು ಭಾವಿಸಿದರು. ಇದಕ್ಕೆ ಎರಡು ಕಾರಣಗಳಿರಬಹುದು. ಒಂದು ಅವನ ಕೃತಿ ಮನುಷ್ಯನ ಇತಿಹಾಸದಲ್ಲೇ ಅತ್ಯಪೂರ್ವವಾದ ವಿಶ್ಲೇಷಣಾತ್ಮಕ ಕೃತಿ. ಎರಡನೆಯದು ಅವನ ಕಾಲಕ್ಕಾಗಲೇ ಸಂಸ್ಕೃತಕ್ಕೆ ದೈವತ್ವದ ಬಣ್ಣವು ಬಂದಿದ್ದಿತು. ಸಂಸ್ಕೃತಕ್ಕೆ ಅವನು ಅನುಲಂಘನೀಯವಾದ ನಿಯಮಗಳನ್ನು ಹಾಕಿದ್ದರಿಂದ ವ್ಯಾವಹಾರಿಕ ಭಾಷೆಯಾಗಿದ್ದ ಸಂಸ್ಕೃತವು ಕ್ರಮೇಣ ವ್ಯವಹಾರದಲ್ಲಿ ನಿಂತುಹೋಗಿ ಕೇವಲ ಗ್ರಂಥಸ್ಥವಾಯಿತು. ಮೃತ ಭಾಷೆ ( Dead Language )ಯಾಯಿತು. ಜನಗಳು ವ್ಯತ್ಯಾಸಗೊಂಡಂತೆ ಭಾಷೆಯೂ ವ್ಯತ್ಯಾಸಗೊಳ್ಳಬೇಕು. ಆದರೆ ಭಾಷೆಯೂ ವ್ಯತ್ಯಾಸಗೊಳ್ಳಬೇಕು. ಆದರೆ ಭಾಷೆಯೂ ವ್ಯತ್ಯಾಸಗೊಳ್ಳಲು ಅಡ್ಡಿಗಳಿದ್ದರೆ ಜನರು ಆ ಭಾಷೆಯನ್ನು ಕೈಬಿಟ್ಟು ಇನ್ನೊಂದು ಭಾಷೆಯನ್ನು ಸ್ವೀಕರಿಸುತ್ತಾರೆ. ತಮ್ಮ ವ್ಯವಹಾರಗಳಿಗೆ ಪಾಣಿನಿಯಿಂದ ಸಂಸ್ಕೃತವು ಬಿಗಿಯಾಯಿತು. ಅನಮ್ಯವಾಯಿತು. (Rigid) ಇದು ಸಂಸ್ಕೃತ ಭಾಷೆಗೆ ಎಷ್ಟು ಸತ್ಯವೋ ಸಂಸ್ಕೃತ ವ್ಯಾಕರಣವನ್ನು ಅನುಸರಿಸಿದ ಭಾಷೆಗಳಿಗೂ ಅಷ್ಟೇ ಸತ್ಯವಾದ ವಿಚಾರ. ಹಾಗಾಗಿ ಅಂತಹ ಭಾಷೆಗಳು ದಿನೇ ದಿನೇ ಕುಗ್ಗುತ್ತಿವೆ. ಅಲ್ಲದೆ ಅಂತಹ ನಿಯಮಾತ್ಮಕ ವ್ಯಾಕರಣ ಮಾದರಿಯಿಂದ ಬಿಡಿಸಿಕೊಳ್ಳಲು ಇವತ್ತಿಗೂ ಸಾಧ್ಯವಾಗದೆ ಎಷ್ಟೋ ಭಾಷೆಗಳು ಉಸಿರುಗಟ್ಟಿ ಹೆಣಗುತ್ತಿವೆ. ಸಾವು ಬದುಕಿನ ಸ್ಥಿತಿಯಲ್ಲಿ.

ಸಂಸ್ಕೃತ ಮತ್ತು ಪ್ರಾಕೃತ ವ್ಯಾಕರಣಗಳ ಮಾದರಿಯನ್ನು ಅನುಸರಿಸಿ ಬೇರೆ ಬೇರೆ ದೇಶೀಯ ಹಾಗೂ ವಿದೇಶೀಯ ವಿದ್ವಾಂಸರು ತಮ್ಮ ತಮ್ಮ ಭಾಷೆಗಳ ವ್ಯಾಕರಣ ಗ್ರಂಥಗಳನ್ನು ರಚಿಸಿಕೊಂಡರು. ಭಾಷೆಯ ಅಧ್ಯಯನದ ಬಗ್ಗೆ ಹೆಚ್ಚು ಗಮನ ಹರಿಸಿದವರಲ್ಲಿ ಗ್ರೀಕರು ಮೊದಲಿಗರು. ಪ್ರಾಚೀನ ಕಾಲದಲ್ಲಿ ಪಾಶ್ಚಾತ್ಯರಲ್ಲಿ

ಅವರ ಸಾಹಿತ್ಯ ಮತ್ತು ಸಂಸ್ಕೃತಿ ಸಾಕಷ್ಟು ಹೆಸರುವಾಸಿಯಾಗಿದ್ದಿತು. ಗ್ರೀಕರು ಪಾಣಿನಿ ಮತ್ತು ಪತಂಜಲಿಯ ವ್ಯಾಕರಣ ಗ್ರಂಥಗಳನ್ನು ಆಳವಾಗಿ ಪರಿಶೀಲಿಸಿ ಆ ಮಾದರಿಯಲ್ಲೇ ತಮ್ಮ ಗ್ರೀಕ್ ಭಾಷೆಯ ವ್ಯಾಕರಣವನ್ನು ರೂಪಿಸಿಕೊಂಡರು. ಇಷ್ಟೇ ಅಲ್ಲದೆ, ಭಾಷೆಯ ಉಗಮ ವಿಕಾಸ ಇತಿಹಾಸವನ್ನು ಕುರಿತು ಯೋಚಿಸತೊಡಗಿದರು. ಎಳೆ ಸಿಕ್ಕರೆ ಸಾಕು ಹಚ್ಚಡವನ್ನೇ ನುಂಗುವವರು ಎನ್ನುವ ಮಾತು ಗ್ರೀಕರ ಇಂತಹ ಬೌದ್ಧಿಕ ವಿಚಾರಗಳಿಗೆ ಅತ್ಯಂತ ಸೂಕ್ತವಾಗಿ ಹೋಲಿಕೆಯಾಗುವಂತಹದ್ದು. ಇದರಿಂದ ತಮ್ಮ ಭಾಷೆಯ ವ್ಯಾಕರಣ ಸಿದ್ಧಪಡಿಸಿಕೊಂಡರಲ್ಲದೆ, ಭಾಷೆಗೆ ಸಂಬಂಧಿಸಿದ ಅನೇಕ ವಿಚಾರಗಳನ್ನು ವಿವೇಚಿಸಿ ಪ್ರಚಾರಕ್ಕೆ ತರುವಲ್ಲಿ ಯಶಸ್ವಿಯಾದರು. ಪದ ಮತ್ತು ಅರ್ಥ ಸಂಬಂಧವನ್ನು ಕುರಿತು ಅದಾಗಲೇ ಗ್ರೀಕ್‌ನ ತತ್ವಜ್ಞಾನಿ ಪ್ಲೇಟೋ ಯೋಚಿಸಿಯಾಗಿತ್ತು. ಸಾಕ್ರಟೀಸ್ ಪ್ಲೇಟೋ ಅರಿಸ್ಟಾಟಲ್ ಮುಂತಾದ ಪ್ರಾಚೀನ ಗ್ರೀಕ್ ವಿದ್ವಾಂಸರ ಚಿಂತನೆಗಳು ಕೂಡ ಆರಂಭದ ಹೊಸ ಬೆಳಕಿನ ದಾರಿಗಳೇ ಆಗಿದ್ದವು. ಅಲ್ಲದೆ ಗ್ರೀಕ್ ಚಿಂತಕರು ಸಹ ಜಗತ್ತಿನಲ್ಲಿ ಏನೇ ಹೊಸ ಚಿಂತನೆ ನಡೆದರೂ ಅದು ಗ್ರೀಕ್‌ನಲ್ಲಿ ಕಾಣುತ್ತಿದ್ದರು. ಮತ್ತು ಆ ಕುರಿತು ಹೆಚ್ಚಿನ ಆಸಕ್ತಿಯನ್ನು ತಳೆಯುತ್ತಿದ್ದರು. ಹೀಗಾಗಿಯೇ ಸಂಸ್ಕೃತದ ವ್ಯಾಕರಣದಂತೆ ತಮ್ಮ ವ್ಯಾಕರಣವನ್ನು ರೂಪಿಸಿಕೊಂಡರು. ಅಂದರೆ ಮೊದಲನೆಯದಾಗಿ ನಿಯಮಾತ್ಮಕ ವ್ಯಾಕರಣವನ್ನು ಒಪ್ಪಿಕೊಂಡು ಸಮರ್ಥವಾಗಿ ರೂಪಿಸಿಕೊಂಡದ್ದು. ಎರಡನೆಯದಾಗಿ ತಮ್ಮ ಭಾಷೆಯೇ ಪ್ರಪಂಚದ ಎಲ್ಲಾ ಭಾಷೆಗಳ ಲಕ್ಷಣಗಳನ್ನು ಒಳಗೊಂಡಿದೆ ಎಂದು ನಂಬಿದ್ದರು. ತಮ್ಮ ಭಾಷೆಯ ಎಲ್ಲಾ ನಿಯಮ ಸ್ವರೂಪ ಲಕ್ಷಣಗಳು ಜಗತ್ತಿನ ಎಲ್ಲಾ ಭಾಷೆಗಳಿಗೂ ಅನ್ವಯಿಸುತ್ತದೆ ಎಂಬ ಅದಮ್ಯವಾದ ನಂಬಿಕೆ. ಸಂಸ್ಕೃತಕ್ಕೂ ಸಹ ಅಂತಹದೊಂದು ನಂಬಿಕೆ ಇತ್ತು. ಉಳಿದ ಭಾರತೀಯ ಭಾಷೆಗಳ ಲಕ್ಷಣ ಸಂಸ್ಕೃತಕ್ಕಿಂತ ಶ್ರೇಷ್ಟವಾಗಿರಲಾರವು ಮತ್ತು ವೈವಿಧ್ಯವೂ ಆಗಿರಲಾರವು ಎಂದು.

"ಗ್ರೀಕರ ನಂತರ ಬಂದ ಲ್ಯಾಟಿನ್ ವೈಯಾಕರಣಿಗಳಲ್ಲೂ ಭಾಷಾಧ್ಯಯನ ಹೆಚ್ಚು ಪ್ರಗತಿಯನ್ನು ಹೊಂದಲಿಲ್ಲ. ರೋಮನ್ನರು ಗ್ರೀಕ್ ಮಾದರಿಯಲ್ಲೇ ಲ್ಯಾಟಿನ್ ವ್ಯಾಕರಣವನ್ನು ರಚಿಸಿದರು. ದೊನಾತಸ್ (Donatus) ಎಂಬ ನಾಲ್ಕನೆಯ ಶತಮಾನದ, ಪ್ರಸ್ಕಿಯನ್ (Priscian) ಎಂಬ ಆರನೆಯ ಶತಮಾನದ ಲ್ಯಾಟಿನ್ ವೈಯಾಕರಣಿಗಳನ್ನು ಇಲ್ಲಿ ಹೆಸರಿಸಬಹುದು. ಮಧ್ಯ ಯುಗದಲ್ಲಿ ಲ್ಯಾಟಿನ್ ಭಾಷೆಯು ಫ್ರೆಂಚ್ ಇಟಾಲಿಯನ್ ಸ್ಪ್ಯಾನಿಶ್ ಭಾಷೆಗಳಾಗಿ ಕವಲೊಡೆದ ಮೇಲೂ ವಿದ್ವಾಂಸರು ಲ್ಯಾಟಿನ್ ಭಾಷೆಯನ್ನೇ ಅಭ್ಯಾಸಿಸಿದರು. ಲ್ಯಾಟಿನ್ನಿನ ವಿದ್ವಾಂಸನ ದೃಷ್ಟಿಯಲ್ಲಿ ಲ್ಯಾಟಿನ್ ಒಂದೇ ಪ್ರಪಂಚದ ಏಕೈಕ ತರ್ಕಬದ್ಧವಾದ ಭಾಷೆ. ಆ ಭಾಷೆಯ ವ್ಯಾಕರಣವೇ

ಆದರ್ಶ ವ್ಯಾಕರಣ. ಆದರೆ ನಿಯಮಗಳು ಎಲ್ಲ ಭಾಷೆಗಳಿಗೂ ಅನ್ವಯಿಸುತ್ತವೆ. ಅನ್ವಯಿಸಬೇಕು. ಕ್ರಿ. ಶ. ೧೪೪೦ ರಲ್ಲಿ ಲೌರೆಂಟಿಯಸ್ ವಲ್ಲ (Laurentius Valla) ಎಂಬಾತನು ಬರೆದ ಲ್ಯಾಟಿನ್ ವ್ಯಾಕರಣವು ಹದಿನೆಂಟನೆಯ ಶತಮಾನದವರೆಗೆ ಪ್ರಭುತ್ವವನ್ನು ನಡೆಸಿತ್ತು. ವಿದ್ವಾಂಸರಿಗೆ ವ್ಯಾಕರಣ ಮತ್ತು ಲ್ಯಾಟಿನ್ ವ್ಯಾಕರಣಗಳು ಸಮಾನಾರ್ಥಕಗಳಾಗಿದ್ದವು[೩]. ಹಾಗೇನೆ ಇಂಗ್ಲೆಂಡಿನಲ್ಲಿ ಸೆಕೆಂಡರಿ ಸ್ಕೂಲ್ ಎನ್ನುವುದರ ಬದಲು ಗ್ರಾಮರ್ ಸ್ಕೂಲ್ (Grammar School) ಎನ್ನುತ್ತಿದ್ದರು.

ವ್ಯಾಕರಣ ಶಿಕ್ಷಣ ಶುದ್ದತೆ ಎನ್ನುವುದು ಮುಂದುವರೆದು ಪ್ರತಿಷ್ಠೆಯ ರೂಪವನ್ನು ಪಡೆಯುವುದರೊಂದಿಗೆ ನಿಯಂತ್ರಕ ಕಂಟ್ರೋಲ್‌ಗಳಾಗತೊಡಗಿದವು. ವಿದ್ಯಾವಂತರು ಮಾತ್ರ ಶುದ್ಧ ಲ್ಯಾಟಿನ್‌ನ್ನು ಬರೆಯುತ್ತಿದ್ದು ಅಷ್ಟು ವಿದ್ಯಾವಂತರಲ್ಲದವರು ತಪ್ಪು ತಪ್ಪಾಗಿ ಲ್ಯಾಟಿನನ್ನು ಬರೆಯುತ್ತಿದ್ದುದನ್ನು ಗಮನಿಸಿ ವಿದ್ಯಾವಂತರು ಮಾತ್ರ ಭಾಷೆಯ ಶುದ್ದತೆಯನ್ನು ಉಳಿಸಿಕೊಂಡು ಬರುವರೆಂದು, ಅವಿದ್ಯಾವಂತರು ಭಾಷೆಯನ್ನು ಕೆಡಿಸುವವರೆಂದು ನಂಬಿಕೆ ಬೆಳೆಯಿತು. ಆಡು ರೂಪಗಳಿಗಿಂತ ಬರಹದ ರೂಪಗಳಿಗೆ ಪ್ರಾಶಸ್ತ್ಯ ದೊರೆಯಿತು. ಎಂದರೆ Ear Philology ಗಿಂತ 'Eye - Philology' ಗೆ ಮಹತ್ವ ದೊರಕಿತು. ವ್ಯಾಕರಣವು ಭಾಷೆಯ ವಿವರಣೆ ಆಗಿರದೆ ಅದನ್ನು ನಿಯಂತ್ರಿಸುವ ಶಕ್ತಿಯಾಯಿತು. 'Grammar was more Prescriptive than descriptive'[೪] ೧೪ – ೧೬ನೆ ಶತಮಾನಕ್ಕಾಗಲೇ ಹಲವು ದೇಶಗಳು ತಮ್ಮ ಚರಿತ್ರೆಯನ್ನು ರೂಪಿಸಿಕೊಳ್ಳುವ, ಹಲವು ಜ್ಞಾನ ಶಾಖೆಗಳ ಬೆಳಕನ್ನು ತಾವೂ ಪಡೆಯುವ ತರಾತುರಿಯಲ್ಲಿದ್ದರು. ಪ್ರವಾಸಿಗರು ಬೇರೆ ಬೇರೆ ದೇಶಗಳನ್ನು ಕಾಣತೊಡಗಿದ್ದುದರಿಂದ ಸಂಪರ್ಕವು ಹಲವು ಜ್ಞಾನದ ಎಳೆಗಳನ್ನು ರೂಪಿಸಿತು. ಮತ್ತು ಹೊಸ ಹೊಸ ಭಾಷೆ, ಪದಗಳನ್ನು ಕಾಣುವಂತಾಯಿತು. ಮತ ಪ್ರಚಾರಕರು ಸಹ ಬೇರೆ ಬೇರೆ ದೇಶಗಳಿಗೆ ಬೈಬಲ್‌ನ್ನು ಭಾಷಾಂತರಿಸಿದರು. ಬೇರೆ ಭಾಷೆಗಳಿಗೂ ವ್ಯಾಕರಣಗಳನ್ನು ಕಟ್ಟಿಕೊಡಲು ಪ್ರಯತ್ನಿಸಿದರು. ಅಷ್ಟೆಯಲ್ಲ, ಇತರೆ ಭಾಷೆಯ ವ್ಯಾಕರಣವನ್ನು ಲ್ಯಾಟಿನ್ ಭಾಷೆಯ ವ್ಯಾಕರಣದ ಚೌಕಟ್ಟಿಗೆ ಅಳವಡಿಸುವ ಪ್ರಯತ್ನ ಮಾಡಿದರು. ಒಟ್ಟಾರೆಯಾಗಿ ಪ್ರಾಚೀನ ಕಾಲದಲ್ಲಿ ಪ್ರಾಚೀನ ಭಾರತೀಯರಂತೆ ಗ್ರೀಕರು, ರೋಮನ್ನರಂತೆಯೇ ಅರಬ್ಬರು, ಜಪಾನಿಯರು, ಯುರೋಪಿನ್ನರು, ಚೀನಿಯರು ಭಾಷೆಗೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನು ಸಮಗ್ರ ಹಾಗೂ ಸಮರ್ಪಕವಾಗಿ ಪರಿಶೀಲಿಸಿ ಭಾಷೆ ಮತ್ತು ವ್ಯಾಕರಣಗಳಿಗೆ ಸಂಬಂಧಿಸಿದ ಹೊಸ ಹೊಸ ವಿಚಾರಗಳನ್ನು ಹೊರ ತಂದರು. ಇದರ ಫಲಿತವಾಗಿ ಎಂಬಂತೆ ಹದಿನಾರು ಹದಿನೇಳನೆಯ ಶತಮಾನದಲ್ಲಿ ಗ್ರೀಕ್, ಹೀಬ್ರೂ, ಅರಾಬಿಕ್ ಮುಂತಾದ ಭಾಷೆಗಳ

ಅಧ್ಯಯನವು ಮೊದಲಾಯಿತು. ಬೇರೆ ಬೇರೆ ಪ್ರದೇಶ, ಭಾಷೆಯ ವಿದ್ವಾಂಸರುಗಳು ಗ್ರೀಕ್ ಮತ್ತು ಲ್ಯಾಟಿನ್ ಭಾಷೆಯ ವ್ಯಾಕರಣಗಳನ್ನು

ಆಧರಿಸಿ ತಮ್ಮ ತಮ್ಮ ಭಾಷೆಗಳ ವ್ಯಾಕರಣ ಗ್ರಂಥಗಳನ್ನು ರಚಿಸಿದರು. ಇಂತಹ ಸನ್ನಿವೇಶದಲ್ಲಿ ತಮ್ಮ ಭಾಷೆಗಳಿಗೆ ಮೂಲ ಅಥವಾ ಮೂಲ ಭಾಷೆಯ ಶೋಧವೂ ನಡೆಯಿತು.

೧. ಗ್ರೀಕ್ ಭಾಷೆಯೇ ಎಲ್ಲಾ ಭಾಷೆಗಳಿಗೂ ಮೂಲವಿರಬೇಕೆಂದು ಕೆಲವು ಅಭಿಪ್ರಾಯಗಳು ಮೂಡಿದವು.

೨. ಹಿಬ್ರೂ ಭಾಷೆ ಎಲ್ಲಾ ಭಾಷೆಗಳಿಗೂ ಮೂಲವಿರಬಹುದೆಂದೂ ಅಭಿಪ್ರಾಯ ಮೂಡಿಬಂದಿತು.

೩. ಇಂಗ್ಲೀಷ್, ಡಚ್ ಸ್ಕಾಂಡಿನೇವಿಯನ್, ಹಳೇ ಜರ್ಮನ್ ಮುಂತಾದ ಭಾಷೆಗಳ ಮೂಲ ಭಾಷೆ ಯಾವುದು ಎಂಬುದರ ಬಗ್ಗೆ ತೀವ್ರ ಹುಡುಕಾಟ ಆರಂಭವಾಯಿತು.

ಈ ಎಲ್ಲಾ ಅಭಿಪ್ರಾಯಗಳ ಮೂಲಕ ಮೂಲ ಭಾಷೆಯ ಹುಡುಕಾಟವು ತಮ್ಮ ತಮ್ಮ ಭಾಷೆಯ ಅಸ್ತಿತ್ವವನ್ನಾಗಿಯೂ ಸ್ವೀಕರಿಸಿದರು. ಇದರಿಂದಾಗಿ ಐತಿಹಾಸಿಕ ಹಾಗೂ ತೌಲನಿಕ ಭಾಷಾಧ್ಯಯನ ಬೆಳಕಿಗೆ ಬರಲು ನೆರವಾಯಿತು. ಜೊತೆಗೆ ಭಾಷೆಯ ಉಗಮ, ಭಾಷೆ ವರ್ಗೀಕರಣ, ಭಾಷಿಕ ಪರಿವರ್ತನೆ, ಭಾಷೆಯ ಬೆಳವಣಿಗೆಯ ಸ್ವರೂಪ, ಲಕ್ಷಣಗಳು, ಮೂಲ ಭಾಷೆ ಮುಂತಾದವುಗಳನ್ನು ಕುರಿತು ಅಧ್ಯಯನದಲ್ಲಿ ತೀವ್ರವಾಗಿ ಹಲವು ಭಾಷಾಧ್ಯಯನಕಾರರು ತಮ್ಮನ್ನು ತೊಡಗಿಸಿಕೊಂಡಿದ್ದರು. ಆ ನಿಮಿತ್ತವಾಗಿ ಅನೇಕ ಸಂಗತಿಗಳು ತಿಳಿದು ಬಂದವು ಮತ್ತು ಇನ್ನು ಅನೇಕ ವಿಚಾರಗಳು ತರ್ಕಸಮ್ಮತವಾಗಿ ಬಗೆಹರಿಯದೆ ಕಾಡತೊಡಗಿದವು. ಅದಾಗಲೇ ಭಾಷೆಯು ದೈವದತ್ತವಾದದ್ದು ಎಂಬ ನಂಬುಗೆಯ ಬೇರುಗಳನ್ನು ಬುಡಮೇಲುಮಾಡಿದವರು ರೂಸೋ, ಹರ್ಡರ್ ಮುಂತಾದವರು. ಭಾಷೆಯ ಉಗಮವನ್ನು ಕುರಿತು ಅನೇಕ ವಿಚಾರಗಳನ್ನು, ಸಿದ್ಧಾಂತಗಳನ್ನು ಮಂಡಿಸಿದ್ದರು. ರೂಸೋ ಚಿಂತನೆಗಳು ಭಾಷೆಯನ್ನು ಕುರಿತು ಇದ್ದ ನಂಬುಗೆಗಳನ್ನು ಕಳಚಿ ವಾಸ್ತವದತ್ತ ಅರಿವನ್ನು ಮೂಡಿಸಲು ನೆರವಾಯಿತು.

ರೂಸೋ ಭಾಷೆಯನ್ನು ಒಂದು ರೀತಿಯ ಸಾಮಾಜಿಕ ಒಪ್ಪಂದ (Contract Social) ಎಂದು ಕರೆದನು. ಭಾಷೆಯು ಗೊತ್ತಿರದ ಆದಿಮಾನವರ ಒಬ್ಬ ಪುರುಷ

ಮತ್ತು ಒಬ್ಬ ಸ್ತ್ರೀ ತಮ್ಮ ಕೂಗುಗಳಿಂದ ಭಾಷಾವೇಷದ ಉದ್ಗಾರಗಳಿಂದ, ಭಾಷೆಯಂತಹ ಒಂದು ವಸ್ತುವನ್ನು ಹೇಗೆ ನಿರ್ಮಿಸಿಕೊಳ್ಳುತ್ತಾರೆ ಎಂಬುದನ್ನು ಕುರಿತು ಕಾಂಡಿಲಾಕ್ ಎಂಬುವವನು ವಿಚಾರಮಾಡಿದ. ಆ ಕಾಲದ ಅತ್ಯಂತ ಮೇಧಾವಿಗಳಲ್ಲೊಬ್ಬ ಹರ್ಡರ್. ಆತನು ತನ್ನ ಕಾಲದ ಸಾಂಪ್ರದಾಯಿಕ ಅಭಿಪ್ರಾಯಗಳನ್ನು ಪ್ರತಿಭಟಿಸಿ ಭಾಷೆಯು ದೈವದತ್ತವಾದುದಲ್ಲವೆಂದು ವಾದಿಸಿದನು. ಭಾಷೆಯು ದೈವ ನಿರ್ಮಿತವಾಗಿದ್ದರೆ ಅದು ಹೆಚ್ಚು ತರ್ಕಬದ್ಧವಾಗಿರುತ್ತಿತ್ತೆಂದು ಅವನ ಅಭಿಪ್ರಾಯ. ಇಂತಹ ಕಾರಣಗಳಿಗಾಗಿ ಹದಿನೆಂಟನೆಯ ಶತಮಾನದಲ್ಲಿ ಭಾಷೆಯನ್ನು ಕುರಿತು ಅಷ್ಟೇನೂ ಹೊಸ ಶೋಧನೆ ನಡೆಯಲಿಲ್ಲವೆಂದು ಕಾಣುತ್ತದೆ. ಕಾರಣ ಆವರೆಗೆ ಇದ್ದ ಭಾಷೆಯನ್ನು ಕುರಿತಾದ ನಂಬಿಕೆಗಳಿಂದ ಬಿಡಿಸಿಕೊಳ್ಳಲಾಗದ ತೊಳಲಾಟ ಮತ್ತು ಇದೀಗ ಮೂಡಿದ ರೂಸೋ ಹರ್ಡರ್ ಕಾಂಡಿಲಾಕ್‌ರ ಸಿದ್ಧಾಂತಗಳನ್ನು ಸ್ವೀಕರಿಸುವುದು ಕಷ್ಟವಾಗಿದ್ದಿರಬೇಕು. ಯಾವುದೇ ಜನಾಂಗ ನಂಬುಗೆಯನ್ನು ಬುಡಮೇಲಾಗಿಸುವ ಯಾವುದೇ ವಾಸ್ತವ ಸತ್ಯಗಳನ್ನು ಏಕ್‌ದಮ್ ಒಪ್ಪಿಕೊಳ್ಳುವುದಿಲ್ಲವೆಂದು ಕಾಣುತ್ತದೆ. ಇದಕ್ಕೆ ಮತ್ತೊಂದು ಉದಾಹರಣೆಯೆಂದರೆ, ಕನ್ನಡದ ಸನ್ನಿವೇಶದಲ್ಲಿ ಪ್ರಾಸಬಿಟ್ಟು ಪದ್ಯ ರಚಿಸುವ ಕಷ್ಟದ ಹಾದಿ. ಅದೇನೆ ಇರಲಿ ಹದಿನೆಂಟನೆಯ ಶತಮಾನವು ಭಾಷೆಯನ್ನು ಕುರಿತು ಹೊಸ ಕನಸುಗಳಿಗಾಗಿ ಧ್ಯಾನಸ್ತಗೊಂಡ ಶತಮಾನವೇ ಆಗಿದೆ. ಯಾಕೆಂದರೆ ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಭಾಷೆಯ ಕುರಿತ ಅಪಾರ ಚಿಂತನೆಯನ್ನು ಗಮನಿಸಬಹುದಾಗಿದೆ.

ಪ್ರಾಚೀನ ಭಾಷೆಗಳಾದ ಸಂಸ್ಕೃತ, ಗ್ರೀಕ್, ಲ್ಯಾಟಿನ್, ಹೀಬ್ರೂ ಮುಂತಾದ ಭಾಷೆಗಳ ಬಗ್ಗೆ ಭಾಷಾಧ್ಯಯನಕಾರರ ಒಲವು ಹೆಚ್ಚಿತು. ಇದರಿಂದ ಭಾಷಾಧ್ಯಯನ ಕ್ಷೇತ್ರದಲ್ಲಿ ಒಂದು ಹೊಸ ಶಕೆಯೇ ಆರಂಭವಾದಂತಾಯಿತು. ಭಾಷಾಧ್ಯಯನವನ್ನು ಶಾಸ್ತ್ರೀಯವಾಗಿ, ವೈಜ್ಞಾನಿಕವಾಗಿ ಅಧ್ಯಯನಕ್ಕೆ ದಾರಿ ಮೊದಲಾಯಿತು.

ಹಾಗಾಗಿ ಐತಿಹಾಸಿಕ ಮತ್ತು ತೌಲನಿಕ ಭಾಷಾಧ್ಯಯನಗಳು ಹೆಚ್ಚು ಹೆಚ್ಚು ಅಧ್ಯಯನಗಳು ನಡೆದವು. ತೌಲನಿಕತೆಯಿಂದಾಗಿ ಭಾಷೆಯ ಪರಸ್ಪರ ಸಂಬಂಧಗಳನ್ನು ಗುರುತಿಸುತ್ತ ಅವುಗಳು ಬೆಳೆದು ಬಂದ ಬಗೆಯನ್ನು ಕಾಣತೊಡಗಿದರು. ಒಂದೊಂದು ಪದದ ಬೆನ್ನತ್ತಿ ಅದರ ಬಗ್ಗೆ ಮೂಡಿದ ಜಿಜ್ಞಾಸೆಯನ್ನು ಪರಿಹರಿಸಿಕೊಳ್ಳಲು ಯತ್ನಿಸಿದರು. ಅಲ್ಲದೆ ಪಾಶ್ಚಾತ್ಯ ವಿದ್ವಾಂಸರಿಗೆ ಸಂಸ್ಕೃತದ ಪರಿಚಯ ಕೂಡ ಇತ್ತು. ಇದು ಪಾಶ್ಚಾತ್ಯ ಭಾಷಾ ವಿಜ್ಞಾನಿಗಳಿಗೆ ಒಂದು ಪ್ರಮುಖ ಘಟ್ಟವೇ ಆಗಿ ಪರಿಣಮಿಸಿತು. ಕ್ರಿ. ಶ. ಹದಿನೇಳುನೂರ ಅರವತ್ತೇಳರಲ್ಲಿ ಫ್ರೆಂಚ್ ಪಾದ್ರಿಯೊಬ್ಬ ಲ್ಯಾಟಿನ್ ಮತ್ತು ಸಂಸ್ಕೃತ ಪದಗಳನ್ನು ಹೋಲಿಸಿ ಒಂದು ವರದಿಯನ್ನು

ಸಿದ್ಧಪಡಿಸಿದ. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಸಂಸ್ಕೃತವನ್ನು ಅಧ್ಯಯನಮಾಡಿ ಅದಕ್ಕೂ ಉಳಿದ ಭಾಷೆಗಳಿಗೂ ಇರುವ ನಿಕಟ ಸಾಮ್ಯವನ್ನು ಗುರುತಿಸಿದ ಭಾಷಾಧ್ಯಯನಕಾರನೆಂದರೆ, ಸರ್ ವಿಲಿಯಂ ಜೋನ್ಸ್. ಈತನಿಂದಲೇ ತೌಲನಿಕ ಭಾಷಾವಿಜ್ಞಾನ ಕ್ಷೇತ್ರಕ್ಕೆ ಹೊಸ ಹಾದಿಯನ್ನು ಹಾಕಿಕೊಟ್ಟಂತಾಯಿತು. ಆದ್ದರಿಂದಲೇ ಸರ್ ವಿಲಿಯಂ ಜೋನ್ಸ್‌ನನ್ನು ತೌಲನಿಕ ಭಾಷಾವಿಜ್ಞಾನದ ಪಿತಾಮಹ ಎಂದು ಕರೆಯಲಾಗುತ್ತದೆ. ೧೭೮೯ ರಲ್ಲಿ ರಾಯಲ್ ಏಷ್ಯಾಟಿಕ್ ಸೊಸೈಟಿ ಎಂಬ ಸಂಸ್ಥೆಯನ್ನು ಸ್ಥಾಪಿಸಿ, ಆ ಸಂಸ್ಥೆಯ ಮೂಲಕ ಸಂಸ್ಕೃತದ ಮಹತ್ವವನ್ನು ಪ್ರಚಾರ ಪಡಿಸತೊಡಗಿದನು. ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳಿಗಿಂತ ಹೇಗೆ ಭಿನ್ನ ಎಂಬುದನ್ನು ಹಲವು ಬಗೆಯಲ್ಲಿ ಆಲೋಚಿಸಿ ಪ್ರಸ್ತುತಪಡಿಸಿದನು. ಆದ್ದರಿಂದ ಪಾಣಿನಿಯ ಅಷಾಧ್ಯಾಯ ಮತ್ತು ಪತಂಜಲಿಯ ಮಹಾಭಾಷ್ಯ ಗ್ರಂಥಗಳು ಜಾಗತಿಕ ಭಾಷಾಧ್ಯಯನಕಾರರ ಗಮನ ಸೆಳೆದವು. ಹಾಗಾಗಿ ಬೇರೆ ಬೇರೆ ದೇಶಗಳ ವಿದ್ವಾಂಸರು ಸಂಸ್ಕೃತವನ್ನು ಆಳವಾಗಿ ವಿವೇಚಿಸುವ ಆಸಕ್ತಿಯನ್ನು ಬೆಳೆಸಿಕೊಂಡರು.

ಯುರೋಪಿನ ಬೇರೆ ಬೇರೆ ಭಾಷೆಗಳ ತೌಲನಿಕ ಅಧ್ಯಯನವು ಆರಂಭಗೊಂಡು ಅವುಗಳ ಸಾಮ್ಯವನ್ನು ಆಧರಿಸಿ ಅವುಗಳನ್ನು ಪರ್ಗೀಕರಿಸಿಕೊಳ್ಳುವ ವಿಧಾನವು ನಡೆಯಿತು. ಸರ್ ವಿಲಿಯಂ ಜೋನ್ಸ್‌ನ ಅನಂತರ ಹೆನ್ರಿ ಥಾಮಸ್ ಕೋಲ್ ಬ್ರೂಕ್ (೧೭೬೫–೧೮೩೭) ಎಂಬುವವನು ಆಸಕ್ತಿಯನ್ನು ತಳೆದು ಯುರೋಪಿನ ಭಾಷೆಗಳಿಗೆಲ್ಲ ಸಂಸ್ಕೃತವೇ ಮೂಲ ಎಂಬ ಜೋನ್ಸ್‌ನ ಪ್ರತಿಪಾದನೆಯನ್ನು ಉದಾಹರಣೆಗಳ ಮೂಲಕ ಖಚಿತಪಡಿಸಿದನು.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲೇ ಫ್ರೆಡ್ರಿಕ್ ವಾನ್ ಶ್ಲೆಗಲ್ (೧೭೭೨–೧೮೨೯) ಎಂಬುವವನು ಜಗತ್ತಿನ ಎಲ್ಲಾ ಭಾಷೆಗಳ ಮೂಲ ಸಂಸ್ಕೃತ ಎಂದು ಹೇಳುತ್ತಲೇ ವಿಂಗಡಣೆಯೊಂದನ್ನು ಮಾಡುತ್ತಾನೆ. ಆತನ ಪ್ರಕಾರ – ಒಂದು ಸಂಸ್ಕೃತ ಭಾಷೆ. ಎರಡು ಸಂಸ್ಕೃತೇತರ ಭಾಷೆಗಳು ಎಂದು ವಿಭಾಗಿಸಿದನು.

ಶ್ಲೆಗಲ್ ಸಮಕಾಲೀನರಲ್ಲಿ ಪ್ರಮುಖ ಭಾಷಾ ಚಿಂತಕರು ಮತ್ತು ಸಂಸ್ಕೃತವನ್ನು ಸಾಕಷ್ಟು ಅಧ್ಯಯನಮಾಡಿದವರೆಂದರೆ ಎ. ಡಬ್ಲ್ಯು. ಶ್ಲೆಗಲ್ (೧೭೬೭–೧೮೪೫) ವಿಲ್‌ಹೆಲ್ಮ್ ವಾನ್ ಹಂಬೋಲ್ಟ್ (೧೭೬೭–೧೮೩೫) ರಾಸ್ ಮಸ್ ರಾಸ್ಕ್ (೧೭೮೭–೧೮೩೨), ಯಾಕೂಬ್ ಗ್ರಿಮ್ (೧೭೮೫–೧೮೬೩), ಪ್ರಾನ್ಸಿಸ್ ಬಾಪ್ (೧೭೬೧–೧೮೬೭) ಮುಂತಾದ ವಿದ್ವಾಂಸರು ಮುಖ್ಯರೆನಿಸಿದ್ದಾರೆ. ಅನಂತರ ಕಾಣಿಸಿಕೊಂಡ ವಿಲ್ ಹೆಲ್ಮ್ ವಾನ್ ಹಂಬೋಲ್ಟ್ ಎಂಬುವವನು ಐತಿಹಾಸಿಕ

ಭಾಷಾವಿಜ್ಞಾನದ ಬೆಳವಣಿಗೆಗೆ ನಾನಾ ರೀತಿಯಲ್ಲಿ ಶ್ರಮಿಸಿದನಲ್ಲದೆ ಇದಕ್ಕೆ ಸಂಬಂಧಿಸಿದ ಅನೇಕ ವಿಚಾರಗಳನ್ನು ಪ್ರಚಾರಕ್ಕೆ ತಂದನು. ಹಾಗೆಯೇ ಡೆನ್ಮಾರ್ಕಿನ ರಾಸ್ ಮಸ್ ರಾಸ್ಕ್ ಎಂಬುವವನು ಐಸ್‌ಲ್ಯಾಂಡಿಕ್ ಭಾಷೆಯನ್ನು ಆಳವಾಗಿ ಅಭ್ಯಸಿಸಿ ಅದರ ವ್ಯಾಕರಣವನ್ನು ಸಿದ್ಧಪಡಿಸಿದನಲ್ಲದೆ ತೌಲನಿಕ ಭಾಷಾಧ್ಯಯನಕ್ಕೆ ಸಾಕಷ್ಟು ಪ್ರೋತ್ಸಾಹವನ್ನು ನೀಡಿದನು. ಆಗಿನ ಕಾಲದಲ್ಲಿ ದ್ರಾವಿಡ ಭಾಷೆಗಳು ಸಂಸ್ಕೃತ ಜನ್ಯ ಎಂದು ಬೇರೂರಿದ್ದ ವಿಚಾರಗಳನ್ನು ಕೈಗೆತ್ತಿಕೊಂಡು ದ್ರಾವಿಡ ಭಾಷೆಗಳಿಗೂ ಸಂಸ್ಕೃತಕ್ಕೂ ಇರುವ ಸಂಬಂಧವನ್ನು ಸಾಕಷ್ಟು ಯೋಚಿಸಿ, ಪರಾಮರ್ಶಿಸಿ ದ್ರಾವಿಡ ಭಾಷೆಗಳ ವಿಭಿನ್ನತೆಯನ್ನು, ಸಂಸ್ಕೃತ ಜನ್ಯ ಅಲ್ಲ ಎಂಬ ಸತ್ಯವನ್ನು ಮೊತ್ತ ಮೊದಲಬಾರಿಗೆ ಘೋಷಿಸಿದನು.

ರಾಸ್ ಮಸ್ ರಾಸ್ಕ್‌ನ ಸಂಸ್ಕೃತ ಜನ್ಯವಲ್ಲ ದ್ರಾವಿಡ ಭಾಷೆಗಳು ಎಂಬ ವಿಚಾರವನ್ನು ರಾಬರ್ಟ್ ಕಾಲ್ಡ್‌ವೆಲ್‌ನು ಗಂಭೀರವಾಗಿ ತನ್ನ ಅಧ್ಯಯನ ಕ್ಷೇತ್ರವಾಗಿಸಿಕೊಂಡು ತೊಡಗಿದನು. ಅದರ ಫಲಿತವಾಗಿ ೧೮೫೬ ರಲ್ಲಿ "ಏ ಕಂಪೇರೆಟಿವ್ ಗ್ರಾಮರ್ ಆಫ್ ದ್ರಾವಿಡಿಯನ್ ಲಾಂಗ್‌ವೇಜಸ್ ಆರ್ ಸೌತ್ ಇಂಡಿಯನ್ ಫ್ಯಾಮಿಲಿ ಆಫ್ ಲಾಂಗ್‌ವೇಜಸ್" ಎಂಬ ದೀರ್ಘ ಶೀರ್ಷಿಕೆಯುಳ್ಳ ಮಹತ್ವದ ಕೃತಿಯು ಬರಲು ಕಾರಣವಾಯಿತು. ಆ ಮೂಲಕ ದ್ರಾವಿಡ ಭಾಷೆಗಳು ಒಂದು ಪ್ರತ್ಯೇಕ ಕುಟುಂಬವಾಗಿದೆ. ಮತ್ತು ಸಂಸ್ಕೃತವೇ ಬೇರೆ ಕುಟುಂಬ ವರ್ಗಕ್ಕೆ ಸೇರಿದ್ದುದಾಗಿದೆ ಎಂದು ಸ್ಪಷ್ಟಪಡಿಸಿದನು. ಈ ಮೂಲಕ ತೌಲನಿಕ ಕ್ಷೇತ್ರವನ್ನು ಮತ್ತು ಭಾರತೀಯ ಭಾಷೆಗಳು ಹೊಂದಿದ್ದ ಹಲವು ಅಪಕಲ್ಪನೆಗಳನ್ನೂ ದೂರಮಾಡಿದನು.

ಶ್ಲೆಗಲ್, ರಾಸ್ ಮಸ್ ರಾಸ್ಕ್, ರಾಬರ್ಟ್ ಕಾಲ್ಡ್‌ವೆಲ್ ಮುಂತಾದವರ ಭಾಷಿಕ ಚಿಂತನೆಗಳ ಆಳವಾದ ಅಧ್ಯಯನದಲ್ಲಿ ತೊಡಗಿಕೊಂಡ ಯಾಕೂಬ್ ಗ್ರಿಮ್‌ನು ಮುಂದುವರೆದು ಜರ್ಮನ್ ಮತ್ತು ಅದರ ಸೋದರ ಭಾಷೆಗಳನ್ನು ಆಳವಾಗಿ ಅಭ್ಯಸಿಸಿ ಅವುಗಳಲ್ಲಿ ಧ್ವನಿ ಸಮನ್ವಯ ಇರುವುದನ್ನು ತೋರಿಸಿಕೊಟ್ಟನು. ಮತ್ತು ಧ್ವನಿ ಸಮನ್ವಯಕ್ಕೆ ಸಂಬಂಧಿಸಿದಂತೆ ಧ್ವನಿ ಸೂತ್ರವನ್ನು (Phonetic Law) ಕಂಡುಹಿಡಿದನು. ಭಾಷೆಗಳಲ್ಲಿ ಧ್ವನಿಗಳು ತಮ್ಮದೇ ಆದ ರೀತಿಯಲ್ಲಿ ಪರಿವರ್ತನೆಯಾಗುತ್ತವೆ ಮತ್ತು ಅವು ಕ್ರಮಾನುಗತವಾಗಿ ನಿಯಮಕ್ಕನುಗುಣವಾಗಿ ಪರಿವರ್ತನೆಯಾಗುತ್ತವೆ ಎಂಬುದನ್ನು ಪ್ರಸ್ತುತಪಡಿಸಿದನು. ಈ ಸೂತ್ರ ಹೆಚ್ಚುಕಾಲ ಉಳಿಯದಿದ್ದರೂ ಹೊಸ ದಾರಿ, ಆಲೋಚನೆಗಳಿಗೆ ಕಾರಣವಾಯಿತು. ಈ ಗ್ರಿಮ್‌ನ ನಿಯಮವನ್ನು ಸಾಕಷ್ಟು ಪರಿಶೀಲಿಸಿ, ಆಲೋಚಿಸಿ ವರ್ನರ್ (೧೮೭೭) ಎಂಬಾತನು ಅದನ್ನು ಮತ್ತಷ್ಟು ಸುಧಾರಿಸಿದನು.

ಭಾಷೆಯನ್ನು ಕುರಿತು ಫ್ರಾನ್ಸಿಸ್ ಬಾಪ್, ಯಾಕೂಬ್ ಗ್ರಿಮ್, ವಿಲ್ ಹೆಲ್ಮ್‌ವಾನ್ ಹಂಬೋಲ್ಟ್ ಮುಂತಾದವರು ಅಧ್ಯಯನ ಶಿಸ್ತುವಿನ ಕಾರಣವಾಗಿ ಭಾಷೆಯು ಸಿದ್ಧವಸ್ತು ಅಲ್ಲ. ಭಾಷೆಯು ಸದಾ ಪರಿವರ್ತನಾ ಶೀಲ ಗುಣವುಳ್ಳದ್ದು ಮತ್ತು ಸದಾ ಪರಿವರ್ತನೆ ಅಂಶಗಳನ್ನು ಯಾವುದು ನಿರ್ವಹಿಸುತ್ತಿರುತ್ತದೆಯೋ ಅದು ಜೀವಂತ ಭಾಷೆಯ ಬಹು ಮುಖ್ಯ ಲಕ್ಷಣ ಎಂಬುದು ಮನಗಾಣಲಾಯಿತು.

೧೭೮೭ರಲ್ಲಿ ರಾಸ್ಕನು – ಭಾಷೆಗೆ ಪದಗಳು ಸೇರಬಹುದು. ಇದ್ದ ಪದಗಳು ಹೊರಟು ಹೋಗಬಹುದು, ಆದರೆ ವ್ಯಾಕರಣವು ಮಾತ್ರ ನಿಶ್ಚಲವಾಗಿರುತ್ತದೆ ಎಂಬುದನ್ನು ಹೇಳಿದನು. ಎರಡು ಭಾಷೆಗಳಲ್ಲಿ ಸರ್ವನಾಮಗಳೂ ಸಂಖ್ಯಾವಾಚಕಗಳೂ ಒಂದೇ ಅಗಿದ್ದರೆ ಆ ಎರಡು ಭಾಷೆಗಳೂ ಒಂದೇ ಮೂಲದಿಂದ ಬಂದಿರುತ್ತವೆ ಎಂದು ಹೇಳಿದ್ದಾನೆ. ಈತನ ಪ್ರಾಭಾವದಿಂದ ಭಾಷಾಧ್ಯಯನದಲ್ಲಿ ಹೆಚ್ಚು ಆಸಕ್ತಿಯನ್ನು ತಳೆದ ಗ್ರಿಮ್ (Jacob Grimm)ನ ಪ್ರಕಾರ ಎಂತಹ ಕ್ಷುದ್ರ ಭಾಷೆಯೂ, ಪ್ರತಿ ಉಪಭಾಷೆಗಳ ಅಧ್ಯಯನಕ್ಕಿಂತ ಇವುಗಳ ಅಧ್ಯಯನ ಎಷ್ಟೋ ಉಪಯುಕ್ತ ಮತ್ತು ಫಲಕಾರಿ ಎಂದನು. ಭಾಷೆಗೆ ನಿಯಮಗಳನ್ನು ಹಾಕುತ್ತಿದ್ದ ವ್ಯಾಕರಣಗಳ ಪದ್ದತಿಯನ್ನು ಖಂಡಿಸಿದ್ದಾನೆ.

ಯಾಕೂಬ್ ಗ್ರಿಮ್ ಮತ್ತು ವರ್ನರ್ ಅವರ ಧ್ವನಿ ನಿಯಮಗಳಿಗೆ ಕೆಲವು ಅಪವಾದಗಳಿವೆ ಎಂದು ನವ ವೈಯಾಕರಣಿಗಳು ಎತ್ತಿದ ಧ್ವನಿ ವಿಚಾರವು ಹೆಚ್ಚು ಚಾಲ್ತಿಗೆ ಬರುವುದರೊಂದಿಗೆ ಗಮನ ಸೆಳೆದಂತೆ ಅಧ್ಯಯನದ ಕುತೂಹಲವನ್ನು ಕೆರಳಿಸಿತು. ಈ ವಿಚಾರವನ್ನು ಗಂಭೀರವಾಗಿ ಆಲೋಚಿಸಿದ ಬ್ರೂಗ್‌ಮನ್ ಓಸ್ತಾಫ್, ಓಸ್ಕಾಲಿ, ಹರ್ಮನ್ ಪಾಲ್, ಮುಂತಾದ ವೈಯಾಕರಣಿಗಳು ಗ್ರೀಕ್, ಲ್ಯಾಟಿನ್ ಜರ್ಮನ್ ಭಾಷೆಗಳನ್ನು ತೌಲನಿಕವಾಗಿ ಅಧ್ಯಯನಮಾಡಿ ಧ್ವನಿ ನಿಯಮಗಳ ಅಪವಾದವನ್ನು ಹೋಗಲಾಡಿಸಿದರು. ಈ ತೌಲನಿಕ ಅಧ್ಯಯನಕ್ಕೆ ಮಹತ್ತರ ಕಾಣಿಕೆಯನ್ನು ನೀಡಿದವರೆಂದರೆ, ಅಗಷ್ಟ್ ಎಫ್. ಪಾಟ್, ಕೆ. ಎಂ. ರೈಪ್ (೧೮೩೬), ರುಡಾಲ್ಫ್ ರಾಥ್ (೧೮೨೧–೧೮೯೫), ಆಗಷ್ಟ್ ಷ್ಲಿಷರ್ (೧೮೨೧–೧೮೬೮), ಕುರ್ತಿಓಸ್ (೧೮೨೦–೧೮೮೫), ನಿಕೊಲಾಸ್ ಮ್ಯಾಡ್ವಿಕ್ (೧೮೭೫), ಫ್ರೆಡ್ರಿಕ್ ಮ್ಯಾಕ್ಸ್ ಮುಲ್ಲರ್ (೧೮೧೩–೧೮೯೯), ವ್ಹಿಟ್ನಿ (೧೮೨೭–೧೮೯೪), ಲೆಸ್ಕಿಯನ್ (೧೮೪೦–೧೯೧೬), ಮುಂತಾದ ವಿದ್ವಾಂಸರು ಐತಿಹಾಸಿಕ ಮತ್ತು ತೌಲನಿಕ ಭಾಷಾಧ್ಯಯನದ ಪ್ರಮುಖ ವೈಯಾಕರಣಿಗಳು.

ಇಪ್ಪತ್ತನೆಯ ಶತಮಾನದ ಆರಂಭದ ಹೊತ್ತಿಗೆ ಕೆಲವು ಮಹತ್ವದ ಬದಲಾವಣೆಗಳು ಕಾಣಿಸಿಕೊಂಡವು. ಅದು ಸಾಂಪ್ರದಾಯಿಕ ಭಾಷಾಧ್ಯಯನದ ಜಾಡನ್ನು ಕದಡಿತು. ಭಾಷೆಯನ್ನು ಮುಖ್ಯವಾಗಿ ಆಡುವ ಸ್ಥಿತಿಯಲ್ಲಿಯೇ ವಿಶ್ಲೇಷಣೆಗೆ ಒಳಪಡಿಸುವುದು. ಉಪಯುಕ್ತವಾದದ್ದು ಎಂಬುದು ಇವರ ಅಭಿಮತ. ಪ್ರಾಚೀನ ವ್ಯಾಕರಣಕಾರರು ಗ್ರಂಥಸ್ಥ ಭಾಷೆಯನ್ನು ಮಾತ್ರ ಪವಿತ್ರವಾದ ಭಾಷೆ ಎಂದು ನಂಬಿದ್ದರು. ಗ್ರಂಥಸ್ಥವಲ್ಲದ ಭಾಷೆಗಳು ಭಾಷೆಗಳೇ ಅಲ್ಲ ಅಥವಾ ಅಷ್ಟು ಮುಖ್ಯ ಅಲ್ಲ ಎಂದರು. ಇಂತಹ ನಂಬುಗೆಗಳ ನಿಮಿತ್ತವಾಗಿ ಆಡು ಭಾಷೆಗಳನ್ನು ಕುರಿತು ಅಧ್ಯಯನಕ್ಕೆ ಯಾರೂ ಮುಂದಾಗಲಿಲ್ಲ. ಗ್ರಂಥಸ್ಥ ಭಾಷೆಗಳಿಗೆ ನಿಯಮಗಳನ್ನು ರೂಪಿಸುವುದರಲ್ಲಿಯೇ ತಲ್ಲೀನರಾದರು. ಭಾಷೆಯಲ್ಲಿ ಅದರಲ್ಲೂ ಆಡು ಭಾಷೆಯಲ್ಲಿ ಹೊಸ ರೂಪಗಳೇನಾದರೂ ಕಂಡುಬಂದರೆ ಅವುಗಳನ್ನೆಂದೂ ಮಾನ್ಯ ಮಾಡುತ್ತಿರಲಿಲ್ಲ. ಗ್ರಂಥಸ್ಥ ಭಾಷೆಯ ಹೊಸ ಪ್ರಯೋಗ, ಪದ ಬಳಕೆ ಮುಂತಾದವುಗಳನ್ನೆ ಒಪ್ಪುತ್ತಿರಲಿಲ್ಲ. ಅವರಿಗೆ ಗ್ರಂಥಸ್ಥ ಭಾಷೆಯ ಬಗ್ಗೆ ಇದ್ದ ಅಪಾರವಾದ ಗೌರವವೇ ಕಾರಣ. ಯಾವ ಭಾಷೆಯೂ ಹೆಚ್ಚಲ್ಲ, ಯಾವ ಭಾಷೆಯೂ ಕೀಳಲ್ಲ, ಶುದ್ಧ, ಅಶುದ್ಧ, ಪವಿತ್ರ, ಅಪವಿತ್ರ ಇಂತಹ ಹಲವು ಬಗೆಯ ತಾರತಮ್ಯಗಳನ್ನು ಹತ್ತೊಂಬತ್ತನೆಯ ಶತಮಾನದ ಭಾಷಾವಿಜ್ಞಾನಿಗಳು ತೊಡೆದುಹಾಕಲು ಮುಂದಾದರು. ಇಂಗ್ಲೆಂಡಿನ ಹೆನ್ರಿ ಸ್ವೀಟ್, ನಾರ್ವೆಯ ಲಂಡೆಟ್, ಡೆನ್ಮಾರ್ಕಿನ ಒಟ್ಟೊಯ ಸ್ಪರ್ಸನ್, ಜರ್ಮನಿಯ ಜಾರ್ಜ್ ವೆಂಕರ್, ಫ್ರಾನ್ಸಿನ ಗಿಲಿಯರೊನ್ ಮುಂತಾದವರು ಭಾಷೆಗೆ ಸಂಬಂಧಿಸಿದ ಅನೇಕ ಹೊಸ ಹೊಸ ವಿಚಾರಗಳನ್ನು ಮಂಡಿಸಿದರು. ಇವು ಭಾಷಾವಿಜ್ಞಾನದ ಹೊಸ ದಿಕ್ಕಿಗೆ ದಾರಿ ತೋರಿದವು. ಭಾಷೆಯಲ್ಲಿ ಇಲ್ಲದ ಪದಗಳನ್ನು ಅನ್ಯ ಭಾಷೆಗಳಿಂದ ಅಗತ್ಯವಿದ್ದಲ್ಲಿ ಸ್ವೀಕರಿಸುತ್ತದೆ ಎಂಬುದನ್ನು ಕಾಣಲಾಯಿತು. ಒಂದು ಸಮಾಜದ ಜನರು ತಮ್ಮ ದಿನ ನಿತ್ಯದ ವ್ಯವಹಾರಕ್ಕಾಗಿ ಬಳಸಿಕೊಂಡ ಧ್ವನಿ ಸಂಕೇತಗಳ ವ್ಯವಸ್ಥೆಯೇ ಭಾಷೆ. ಒಂದು ಸಮಾಜ ಸಾಂಸ್ಕೃತಿಕ ಚಟುವಟಿಕೆಗಳು ಬೆಳೆದಂತೆ ಅಥವಾ ಬದಲಾದಂತೆ ಹೊಸ ಹೊಸ ಭಾವನೆಗಳು, ಹೊಸ ಆಲೋಚನೆಗಳು, ಕಲ್ಪನೆಗಳು, ಹೊಸ ಹೊಸ ಪದಗಳು ಭಾಷೆಯಲ್ಲಿ ಕಾಣಿಸಿಕೊಳ್ಳುತ್ತವೆ. ಈಗಾಗಲೆ ಚಾಲ್ತಿಯಲ್ಲಿರುವ ಬಳಕೆಯಿಂದ ಮರೆಯಾಗಲೂಬಹುದು. ಇದು ಜನ ಜೀವನದ ವ್ಯವಹಾರ ಚಟುವಟಿಕೆಯನ್ನು ಮುಖ್ಯವಾಗಿ ಅವಲಂಬಿಸಿ ನಡೆಯುವ ಭಾಷಿಕ ಚಟುವಟಿಕೆಯಾಗಿದೆ ಎಂದು ತಿಳಿಯಲಾಯಿತು.

ಆಡು ಭಾಷೆ ಮತ್ತು ಧ್ವನಿ ವ್ಯವಸ್ಥೆಯನ್ನು ಕುರಿತು ಆಳವಾಗಿ ಅಧ್ಯಯನಕ್ಕೆ ತೊಡಗಿದ್ದರಿಂದ ಭಾಷೆಯನ್ನು ಹೆಚ್ಚು ವೈಜ್ಞಾನಿಕವಾಗಿ ವಿವೇಚಿಸತೊಡಗಿದರು. ಇದರಿಂದ ಭಾಷಾವಿಶ್ಲೇಷಣೆಗೆ ಸಂಬಂಧಿಸಿದಂತೆ ಹೊಸ ವಿಧಾನಗಳು, ಸಿದ್ಧಾಂತಗಳು, ವಿಚಾರಗಳು ಹೊರಬರಲು ಸಾಧ್ಯವಾಯಿತು. ಇದರಿಂದಾಗಿ ವಿವರಣಾತ್ಮಕ ಭಾಷಾಧ್ಯಯನವು ಆರಂಭವಾಯಿತು. ವಿವರಣಾತ್ಮಕ ಭಾಷಾಧ್ಯಯನವು ಹಲವು ತೊರೆಗಳಾಗಿ ಚದುರಿ ವ್ಯಾಪಿಸಿ ಕಾರ್ಯೋನ್ಮುಖವಾಯಿತು.

ಇಪ್ಪತ್ತನೆಯ ಶತಮಾನದಲ್ಲಿ ಸಂರಚನಾತ್ಮಕ ಅಥವಾ ವಿವರಣಾತ್ಮಕ ಭಾಷಾವಿಜ್ಞಾನ ಎಂಬ ಹೆಸರುಗಳಿಂದ ಪ್ರಸಿದ್ಧವಾಯಿತು. ಈ ಕ್ಷೇತ್ರವನ್ನು ವ್ಯಾಪಕವಾಗಿ ಬೆಳೆಸಿದವರೆಂದರೆ ಎಫ್. ಡಿ. ಸಸೂರ್(೧೮೫೭-೧೯೧೩), ಎ. ಸಫೀರ್ (೧೮೮೪-೧೯೩೧), ಬೋ ಅಸ್ (೧೮೯೬-೧೯೦೮), ಬ್ಲೂಮ್ ಫೀಲ್ಡ್ (೧೮೮೭-೧೯೩೭) ಇವರು ಪ್ರಮುಖರು.

ಸಂಕ್ಷಿಪ್ತವಾಗಿ ಪರಿಚಯಮಾಡಿಕೊಂಡ ಹಾಗೆ ಪ್ರಾಚೀನ ಕಾಲದಲ್ಲಿ ಭಾಷೆಯನ್ನು ಕುರಿತು ಅಧ್ಯಯನವು ಭಾರತೀಯರಿಂದ ವ್ಯಾಕರಣಶಾಸ್ತ್ರದ ಅಧ್ಯಯನ ಮುಖೇನ ಭಾಷಾವಿಜ್ಞಾನದ ಚಿಗುರು ಮೂಡಿ ಬಂದಿದೆ. ಅನಂತರ ಭಾಷಾಶಾಸ್ತ್ರ, ಭಾಷಾವಿಜ್ಞಾನ, ಭಾಷಾಧ್ಯಯನ ಭಾಷಾವಿಚಾರ ಎಂದೂ ಬೇರೆ ಬೇರೆ ಹೆಸರುಗಳ ಮೂಲಕ ಕಾಣಲಾಯಿತು. ಭಾಷೆಯ ಹುಟ್ಟಿನಿಂದ ಆರಂಭಿಸಿ, ವಿವಿಧ ಭಾಷಾ ವರ್ಗಗಳ ವಿವೇಚನೆ ಅವುಗಳ ಇತಿಹಾಸ, ಭಾಷೆಯ ವಿವಿಧ ರಚನಾ ವಿನ್ಯಾಸ ಮುಂತಾಗಿ ಶಾಸ್ತ್ರೀಯ ವಿವೇಚನೆ ಭಾಷಾವಿಜ್ಞಾನ ತನ್ನ ತೆಕ್ಕೆಗೆ ತೆಗೆದುಕೊಂಡಿದೆ. ಸಾಮಾಜಿಕ, ಸಾಂಸ್ಕೃತಿಕ, ವೈಜ್ಞಾನಿಕ, ತೌಲನಿಕ, ಚಾರಿತ್ರಿಕ ಹೀಗೆ ಹಲವು ಜ್ಞಾನ ಶಾಖೆಗಳ ಸಂಬಂಧವನ್ನು ಹೊಂದಿ ಹಲವು ಶಿಸ್ತುಗಳನ್ನು ರೂಪಿಸಿಕೊಂಡು ಭಾಷಾವಿಜ್ಞಾನ ಬೆಳೆದಿದೆ.

ಭಾಷೆ ನಿಂತ ನೀರಲ್ಲ, ಅದು ಹರಿಯುವ ಹೊಳೆ. ಅದರ ಮುಖ್ಯ ಲಕ್ಷಣ ಪರಿವರ್ತನೆ. ತನ್ನ ನೆಲದ ಸಾರವನ್ನು ಹೀರುವುದೆ ಅಲ್ಲದೆ, ಹೊರಗಿನ ಸಂಪರ್ಕ ಪ್ರಭಾವಗಳಿಂದ ಅದು ಉಬ್ಬಿ ಬೆಳೆಯುವುದು. ಜೀವಂತ ಭಾಷೆಯ ಪ್ರಮುಖ ಲಕ್ಷಣ ಎಂಬುದು ಈಗಾಗಲೆ ಸಾಕಷ್ಟು ಜನಜನಿತವಾದ ವಿಚಾರ. ಹಾಗೇನೆ ಅಂತಹ ಜೀವಂತ ಭಾಷೆಯ ಪರಿವರ್ತನೆಯ ಮಗ್ಗುಲಗಳನ್ನು ಅರ್ಥೈಸಿಕೊಳ್ಳಲು ಕಡಲ ಅಲೆಗಳಂತೆ ಕಾಲ ಕಾಲಕ್ಕೆ ಅಧ್ಯಯನದ ಹತ್ತಾರು ಮಾದರಿಗಳು ಬಂದದ್ದು ಇದೆ. ವ್ಯಾಕರಣಶಾಸ್ತ್ರಕ್ಕೂ, ಭಾಷಾಶಾಸ್ತ್ರಕ್ಕೂ ವ್ಯತ್ಯಾಸವಿದೆ ಎಂಬುದನ್ನು ಗಮನಿಸಿದ ಕೆಲವು

ಭಾಷಾ ಚಿಂತಕರು ತೌಲನಿಕ ಭಾಷಾಶಾಸ್ತ್ರ, ಐತಿಹಾಸಿಕ ಭಾಷಾಶಾಸ್ತ್ರಗಳಂತೆ (ಇವುಗಳನ್ನು ತೌಲನಿಕ ಭಾಷಾವಿಜ್ಞಾನ, ಐತಿಹಾಸಿಕ ಭಾಷಾವಿಜ್ಞಾನ ಎಂತಲೂ ಕರೆಯುವುದುಂಟು) ತೌಲನಿಕ ವ್ಯಾಕರಣ, ಐತಿಹಾಸಿಕ ವ್ಯಾಕರಣಗಳೆಂದು ವಿಂಗಡಿಸಿಕೊಂಡು ಅಧ್ಯಯನವನ್ನು ನಡೆಸಿರುವರು. ಆದರೆ ಹದಿನೇಳು ಹದಿನೆಂಟನೆಯ ಶತಮಾನದಲ್ಲಿ ಭಾಷೆಯ ತೌಲನಿಕ ಹಾಗೂ ಐತಿಹಾಸಿಕ ಅಧ್ಯಯನಗಳಿಗೆ ಹೆಚ್ಚಿನ ಮಹತ್ವ ಸಿಕ್ಕಿತು. ಇದರಿಂದಾಗಿ ವ್ಯಾಕರಣ ಮಾದರಿಯ ಅಧ್ಯಯನಗಳು ಹಿಂದೆ ಸರಿದು ಶಬ್ದಗಳ, ಚಾರಿತ್ರಿಕ, ಐತಿಹಾಸಿಕ, ಭಾಷಿಕ ತುಲನಾತ್ಮಕ ಅಧ್ಯಯನದ ಬಗ್ಗೆ ಹೆಚ್ಚಿನ ಗಮನ ಪಡೆದುಕೊಂಡಿತು.

ಭಾಷಾಶಾಸ್ತ್ರ ಮತ್ತು ಭಾಷಾವಿಜ್ಞಾನ ಈ ಎರಡು ಪದಗಳು ಚಾರಿತ್ರಿಕವಾಗಿ ಪರಸ್ಪರ ಸಂಬಂಧವನ್ನು ಹೊಂದಿದ್ದರೂ ಇವುಗಳ ಸ್ವರೂಪದಲ್ಲಿ ಭಿನ್ನತೆ ಇರುವುದನ್ನು ಗಮನಿಸಬಹುದು. ಭಾಷೆಗಳ ಶಾಸ್ತ್ರೀಯ ಅಧ್ಯಯನವನ್ನು ಭಾಷಾಶಾಸ್ತ್ರವೆಂದು, ಭಾಷೆಗಳ ವೈಜ್ಞಾನಿಕ ಅಧ್ಯಯನವನ್ನು ಭಾಷಾವಿಜ್ಞಾನ ಎಂದು ವಿಭಜಿಸಲಾಗಿದೆ. ಮೊದಲನೆಯದು ಸಾಹಿತ್ಯ ಗ್ರಂಥಗಳು, ಶಿಲಾಶಾಸನಗಳು, ತಾಮ್ರ ಪತ್ರಗಳಲ್ಲಿ ದೊರೆಯುವ ಭಾಷೆಯನ್ನು ಶಾಸ್ತ್ರೀಯ ದೃಷ್ಟಿಯಿಂದ ವಿವೇಚಿಸಿದರೆ ಎರಡನೆಯದು ಬರಹ ಮತ್ತು ಆಡು ಭಾಷೆಗಳೆರಡನ್ನು ತಾರತಮ್ಯವೆಣಿಸದೆ ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸುತ್ತದೆ. ಹಾಗಾಗಿ ಭಾಷಾಶಾಸ್ತ್ರದ ದೃಷ್ಟಿಗಿಂತ ಭಾಷಾವಿಜ್ಞಾನದ ದೃಷ್ಟಿ ಹೆಚ್ಚು ವ್ಯಾಪಕ ಹಾಗೂ ಸೂಕ್ತ ಎಂಬುದು ವಿದ್ವಾಂಸರ ಅಭಿಮತ.

ಹಿಂದಿನ ಭಾಷಾಧ್ಯಯನದ ರೀತಿ ಅಂದರೆ ವ್ಯಾಕರಣ ಶಾಸ್ತ್ರಗಳ ಸ್ವರೂಪ ನಿಗಮನ ಅಥವಾ ಅಜ್ಞಾಸ್ವರೂಪದ್ದಾದರೆ, ಇಂದಿನ ಭಾಷಾಶಾಸ್ತ್ರ, ಭಾಷಾವಿಜ್ಞಾನಗಳ ಸ್ವರೂಪ ಅನುಗಮನ ರೀತಿಯದು. ಮೊದಲನೆಯದು ಸೂತ್ರಗಳನ್ನು ಮೊದಲು ನೀಡಿ ಉದಾಹರಣೆಗಳನ್ನು ನಂತರ ನೀಡಿದರೆ, ಎರಡನೆಯದು ಸಂಗ್ರಹಿತ ದತ್ತದ ಆಧಾರದಿಂದ ನಿಯಮಗಳನ್ನು ರೂಪಿಸುತ್ತದೆ. ಇದು ಭಾಷೆ ಹೇಗಿರಬೇಕು ಎಂದು ಹೇಳದೆ, ಹೇಗಿದೆ ಎಂದು ಮಾತ್ರ ವಿವರಿಸುತ್ತದೆ ಮತ್ತು ವಿಶ್ಲೇಷಿಸುತ್ತದೆ. ಮತ್ತೊಂದು ಪ್ರಮುಖ ಅಂಶವೆಂದರೆ ಪರಂಪರಾಗತ ವ್ಯಾಕರಣಕಾರರು ಲಿಖಿತ ರೂಪಗಳಿಗೆ ಹೆಚ್ಚು ಮಹತ್ವವನ್ನು ನೀಡುತ್ತಿದ್ದರೆ, ಆಧುನಿಕ ಭಾಷಾವಿಜ್ಞಾನಿಗಳು ಆಡುಮಾತಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತಾರೆ. ಬರಹ ಆಡುಮಾತಿನ ಪ್ರತಿಬಿಂಬ. ಹಾಗಾಗಿ ಆಡು ಮಾತೇ ಭಾಷೆ. ಅದೇ ಪ್ರಮಾಣ. ಭಾಷಾಶಾಸ್ತ್ರಜ್ಞರು ಭಾಷೆಯ ಉಗಮ, ವಿಕಾಸ, ಭಾಷಾವ್ಯತ್ಯಾಸ, ಭಾಷಾ ಪ್ರಭೇದಗಳು, ಭಾಷಾಸ್ವೀಕರಣ, ಭಾಷಾವರ್ಗೀಕರಣ, ಸಮಾಜ, ಸಂಸ್ಕೃತಿ, ಜನಾಂಗ ಮೊದಲಾದ ಎಲ್ಲಾ ಭಾಷೆಯ ಬಾಹ್ಯ ಅಂಶಗಳನ್ನು

ಅಧ್ಯಯನ ಮಾಡುವುದರ ಜೊತೆಗೆ ಅದರ ಆಂತರಿಕ ಅಂಶಗಳಾದ ಧ್ವನಿ, ಪದ, ರೂಪ, ವಾಕ್ಯ, ಅರ್ಥ, ವ್ಯಾಕರಣ ಮೊದಲಾದ ಎಲ್ಲ ಅಂಶಗಳನ್ನು ಅಧ್ಯಯನ ಮಾಡುತ್ತಾರೆ. ಆದ್ದರಿಂದ ಭಾಷೆಯ ಆಂತರಿಕ ಹಾಗೂ ಬಾಹ್ಯ ವಿಚಾರಗಳನ್ನು ಅಧ್ಯಯನ ಮಾಡುವ ವ್ಯವಸ್ಥೆಯೇ ಭಾಷಾವಿಜ್ಞಾನ ಎಂದು ವ್ಯಾಖ್ಯಾನಿಸಿಕೊಳ್ಳಲಾಗಿದೆ[೫].

ಭಾಷಾವಿಜ್ಞಾನ ಇಂದು ಅನೇಕ ಅಧ್ಯಯನ ಶಾಖೆಗಳಾಗಿ ಬೆಳೆದಿದೆ. ೧. ವಿಶ್ಲೇಷಣಾತ್ಮಕ ಭಾಷಾವಿಜ್ಞಾನ (Analytical Linguistics, Macro Linguistics) ೨. ಶ್ರವಣಾತ್ಮಕ ಭಾಷಾವಿಜ್ಞಾನ (Acoustic Linguistics) ೩. ಪ್ರಾಯೋಗಿಕ ಭಾಷಾವಿಜ್ಞಾನ (Applied Linguistics) ೪. ಪ್ರಾದೇಶಿಕ ಭಾಷಾವಿಜ್ಞಾನ (Areal Linguistics) ೫. ಸಜೀವಿಗಳ ಭಾಷಾವಿಜ್ಞಾನ (Bio Linguistics) ೬. ತುಲನಾತ್ಮಕ ಭಾಷಾವಿಜ್ಞಾನ (Comparative Linguistics) ೭. ಸಾಂಸ್ಕೃತಿಕ ಭಾಷಾವಿಜ್ಞಾನ (Cultural Linguistics, Descriptive Linguistics) ೮. ವರ್ಣನಾತ್ಮಕ ಭಾಷಾವಿಜ್ಞಾನ (Synchronic Linguistics, Static Linguistics) ೯. ಐತಿಹಾಸಿಕ ಭಾಷಾವಿಜ್ಞಾನ (Diachronic Linguistics, Historival Linguistics) ೧೦. ಸಾಮಾನ್ಯ ಭಾಷಾವಿಜ್ಞಾನ (General Linguistics) ೧೧. ವಿಕಾಸಾತ್ಮಕ ಭಾಷಾವಿಜ್ಞಾನ (Dynamic Linguistics, Evolutionary Linguistics) ೧೨. ನರವಂಶೀಯ ಭಾಷಾವಿಜ್ಞಾನ (Ethno Linguistics) ೧೩. ಪ್ರಕಾರ್ಯಾತ್ಮಕ ಭಾಷಾವಿಜ್ಞಾನ (Functional Linguistics) ೧೪. ರಚನಾತ್ಮಕ ಭಾಷಾವಿಜ್ಞಾನ (Structural Linguistics) ೧೫. ಮನೋ (ಮಾನಸಿಕ) ಭಾಷಾವಿಜ್ಞಾನ (Psycho Linguistics) ೧೬. ಭೌಗೋಳಿಕ ಭಾಷಾವಿಜ್ಞಾನ (Geographical Linguistics). ಅಲ್ಲದೆ ಇವುಗಳಲ್ಲಿ ಕೆಲವು ಪ್ರಮುಖ ಕ್ಷೇತ್ರಗಳಲ್ಲಿ ಇನ್ನೂ ಒಳ ವಿಭಾಗ ಕ್ಷೇತ್ರಗಳಾಗಿಯೂ ಅಧ್ಯಯನಗಳು ನಡೆದಿವೆ. ವಿವರಣಾತ್ಮಕ ಭಾಷಾವಿಜ್ಞಾನವೇ ಒಂದು ಪ್ರಮುಖ ಕ್ಷೇತ್ರವಾದರೆ ಅದರೊಳಗೆ ಧ್ವನಿವಿಜ್ಞಾನ (Phonetics), ಧ್ವನಿಮಾ ವಿಜ್ಞಾನ (Phonemic), ಆಕೃತಿಮಾ ವಿಜ್ಞಾನ (Morphology), ವಾಕ್ಯವಿಜ್ಞಾನ (Syntax), ಇತ್ಯಾದಿ ಅಧ್ಯಯನ ಬಗೆಗಳು ನಡೆದುದ್ದು ಇದೆ. ಹೀಗೆ ನಡೆದ ಅನೇಕ ಮುಖಗಳ ಅಧ್ಯಯನಗಳಲ್ಲಿ ಪ್ರಮುಖವಾಗಿ ಸಾಮಾನ್ಯ ಭಾಷಾವಿಜ್ಞಾನ ಮತ್ತು ಆನ್ವಯಿಕ ಭಾಷಾವಿಜ್ಞಾನ ಎಂದು ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಮತ್ತೆ ಸಾಮಾನ್ಯ ಭಾಷಾವಿಜ್ಞಾನದಲ್ಲಿ ವಿವರಣಾತ್ಮಕ (ವರ್ಣನಾತ್ಮಕ) ಭಾಷಾವಿಜ್ಞಾನ, ಐತಿಹಾಸಿಕ (ಚಾರಿತ್ರಿಕ) ಭಾಷಾವಿಜ್ಞಾನ, ತೌಲನಿಕ (ತುಲನಾತ್ಮಕ) ಭಾಷಾವಿಜ್ಞಾನ ಎಂದು

ವಿಭಾಗಗಳನ್ನು, ಅಂತೆಯೇ ಆನ್ವಯಿಕ ಭಾಷಾವಿಜ್ಞಾನದಲ್ಲಿ ಮಾನವ ಭಾಷಾವಿಜ್ಞಾನ, ಮನೋಭಾಷಾವಿಜ್ಞಾನ, ಸಾಮಾಜಿಕ ಭಾಷಾವಿಜ್ಞಾನ, ಜೈವಿಕ ಭಾಷಾವಿಜ್ಞಾನ, ವೈದ್ಯಶ್ಯಾತ್ಮಕ ಭಾಷಾವಿಜ್ಞಾನ, ಕ್ರಿಯಾತ್ಮಕ ಭಾಷಾವಿಜ್ಞಾನ, ಗಣತೀಯ ಭಾಷಾವಿಜ್ಞಾನ, ಕ್ಷೇತ್ರ ಭಾಷಾವಿಜ್ಞಾನ ಎಂದು ಹಲವು ಒಳವಿಭಾಗಗಳನ್ನು ವಿಂಗಡಿಸಲಾಗಿದೆ.

೧. ಸಾಮಾನ್ಯ ಭಾಷಾವಿಜ್ಞಾನ : ಭಾಷೆ ಅಥವಾ ಭಾಷೆಗಳಲ್ಲಿ ಕಂಡು ಬರುವ ಸಾಮಾನ್ಯ ವಿಚಾರಗಳನ್ನು ಅಧ್ಯಯನಮಾಡುವ ವಿಜ್ಞಾನವೇ ಸಾಮಾನ್ಯ ಭಾಷಾವಿಜ್ಞಾನ. ಇದರಲ್ಲಿ ಭಾಷೆಯ ಸಾಮಾನ್ಯ ಗುಣ ಲಕ್ಷಣಗಳನ್ನು ಐತಿಹಾಸಿಕ, ವರ್ಣನಾತ್ಮಕ ಹಾಗೂ ತುಲನಾತ್ಮಕ ಈ ಮೂರು ದೃಷ್ಟಿಗಳಿಂದ ವಿವರಿಸಬಹುದು.

೨. ಐತಿಹಾಸಿಕ ಭಾಷಾವಿಜ್ಞಾನ ; ಯಾವುದೇ ಒಂದು ಭಾಷೆಗೆ ಚರಿತ್ರೆ ಇದ್ದೇ ಇರುತ್ತದೆ. ಭಾಷೆ ನಿಂತ ನೀರಲ್ಲ ಹರಿಯುವ ತೊರೆಯಂತೆ. ನಿರಂತರ ಪರಿವರ್ತನೆಯ ಗುಣವನ್ನು ಹೊಂದಿರುತ್ತದೆ. ಹಾಗಾಗಿ ಭಾಷೆಯನ್ನು ಆಡುವ ಜನಾಂಗಕ್ಕೊಂದು ಇತಿಹಾಸವಿರುವಂತೆ ಭಾಷೆಗೂ ಒಂದು ಇತಿಹಾಸವಿದೆ. ಮಾನವ ಇತಿಹಾಸದಷ್ಟೇ ಹಳೆಯದಾದ ಭಾಷೆ ಕಾಲಾಂತರದಲ್ಲಿ ಧ್ವನಿ ವ್ಯತ್ಯಾಸ, ಅರ್ಥವ್ಯತ್ಯಾಸ, ಅನ್ಯಭಾಷಾಸ್ವೀಕರಣ, ಸಾಮ್ಯಮೂಲ ವ್ಯತ್ಯಾಸ ಮೊದಲಾದ ಬಗೆ ಬಗೆಯ ಬದಲಾವಣೆಗೆ ಒಳಗಾಗಿ ನಿರಂತರ ಬೆಳೆಯುತ್ತಿರುತ್ತದೆ. ಹೊಸ ಕಾಲದ ಅಗತ್ಯಗಳನ್ನು ಪೂರೈಸಿಕೊಳ್ಳಲು ಹೊಸ ಶಬ್ದಗಳನ್ನು ಸೃಷ್ಟಿಸಿಕೊಳ್ಳುತ್ತದೆ ಅಥವಾ ಇರುವ ಶಬ್ದಕ್ಕೆ ಹೊಸ ಅರ್ಥ ಕಲ್ಪನೆಯ ದೀಕ್ಷೆಯನ್ನು ನೀಡುತ್ತದೆ. ಅಥವಾ ಅನ್ಯ ಸಂಪರ್ಕದ ಭಾಷೆಗಳಿಂದಾದರೂ ಸ್ವೀಕರಿಸುತ್ತದೆ. ಚಾರಿತ್ರಿಕ ಬದಲಾವಣೆಯಿಂದ ಉಂಟಾಗುವ ಕೊರತೆಯನ್ನು ಜೀವಂತ ಭಾಷೆ ಮೊದಲು ಆ ಕೊರತೆಯನ್ನು ನೀಗಿಸಿಕೊಳ್ಳುತ್ತದೆ. ಲಿಪಿಯುಳ್ಳ ಭಾಷೆಗಳಲ್ಲಿ ದಾಖಲೆ ಇರುತ್ತದೆ. ಅಂದರೆ ಲಿಪಿಯುಳ್ಳ ಭಾಷೆ ಗ್ರಂಥಸ್ಥ ಬರಹ ರೂಪದಲ್ಲಿರುತ್ತದೆ. ಆದ್ದರಿಂದ ಅದರ ಬೇರೆ ಬೇರೆ ಕಾಲದ ಬದಲಾವಣೆಗಳನ್ನು, ಬೇರೆ ಬೇರೆ ಅವಸ್ಥೆಗಳನ್ನು ಗುರುತಿಸಿ ಅದರ ಚರಿತ್ರೆ ತಿಳಿಯಬಹುದು. ಲಿಪಿ ಇಲ್ಲದ ಭಾಷೆ ಗ್ರಂಥಗಳ ಆಧಾರವಿಲ್ಲದುದರಿಂದ ಅಂತಹ ಭಾಷೆಯ ಐತಿಹಾಸಿಕತೆಯನ್ನು ಬೇರೆ ಬೇರೆ ಕಾಲದ ಮಾರ್ಪಾಡುಗಳನ್ನು ತಿಳಿಯಲಾಗುವುದಿಲ್ಲ. ಆದ್ದರಿಂದ ಅವುಗಳ ಇತಿಹಾಸ ತಿಳಿಯುವುದಿಲ್ಲ. ಐತಿಹಾಸಿಕ ಭಾಷಾವಿಜ್ಞಾನ ಭಾಷೆಯ ಹಲವಾರು ಅವಸ್ಥೆಗಳನ್ನು ಹೋಲಿಸಿ ಗುರುತಿಸಲು ಸಾಧ್ಯವಿದೆ. ಕನ್ನಡದಲ್ಲಿ ಪೂರ್ವದ

ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಅವಸ್ಥೆಗಳನ್ನು ಶಾಸನ ಗ್ರಂಥಗಳ ಆಧಾರದಿಂದ ಗುರುತಿಸಲು ಸಾಧ್ಯವಾಗುತ್ತದೆ. 'ಪ'ಕಾರ ಯಾವಾಗ 'ಹ' ಕಾರವಾಗಿ ಬದಲಾಯಿತು. ಸಬಿಂದುಕ ಶಬ್ದಗಳು ಎಂದಿನಿಂದ ಅಬಿಂದುಕಗಳಾದವು. ಅನ್ಯಭಾಷೆಯ ಧ್ವನಿಗಳಾದ (F, Z) ಫ಼, ಜ಼ ಬಂದು ಸೇರಿದ ಬಗೆ. ಹೀಗೆ ಹಲವು ಚಾರಿತ್ರಿಕ ಸಂಗತಿಗಳನ್ನ ಐತಿಹಾಸಿಕ ಭಾಷಾವಿಜ್ಞಾನದಿಂದ ತಿಳಿಯಬಹುದಾಗಿದೆ.

ಭಾಷೆಯನ್ನು ಐತಿಹಾಸಿಕ ವಿಧಾನವನ್ನು ಅನುಸರಿಸಿ ಅಧ್ಯಯನಮಾಡುವ ರೂಢಿ ಬಹಳ ಪ್ರಾಚೀನವಾದುದು. ಗ್ರೀಕರು ಮತ್ತು ರೋಮನ್ನರು ಈ ವಿಧಾನವನ್ನನುಸರಿಸಿದ ಮೊತ್ತ ಮೊದಲಿಗರು. ತರುವಾಯ ಪ್ರಾಚೀನ ಅರಬ್ಬರು ಚೀನೀಯರು ಭಾರತೀಯರು ಯೂರೋಪಿಯನ್ನರು ಐತಿಹಾಸಿಕ ಅಧ್ಯಯನವನ್ನು ಅನುಸರಿಸಿದರು. ಹದಿನೈದು ಹದಿನೇಳನೆಯ ಶತಮಾನಗಳಲ್ಲಿ ಗ್ರೀಕ್, ಹಿಬ್ರೂ, ಅರಾಬಿಕ್, ಹಿಟ್ಟೈಟ್ ಮೊದಲಾದ ಭಾಷೆಗಳನ್ನು ಐತಿಹಾಸಿಕವಾಗಿ ಅಧ್ಯಯನ ಮಾಡಿದ ವಿದ್ವಾಂಸರು. ಭಾಷೆಗಳಿಗೂ ಗ್ರೀಕ್ ಭಾಷೆಯೇ ಮೂಲವೆಂದು ಅಭಿಪ್ರಾಯಪಟ್ಟರೆ, ಇನ್ನೂ ಕೆಲವರು ಸಂಸ್ಕೃತ ಭಾಷೆಯೇ ಎಲ್ಲ ಭಾಷೆಗಳ ಮೂಲವೆಂದು ಮತ್ತೂ ಕೆಲವರು ಹಿಬ್ರೂ ಭಾಷೆ ಮೂಲವೆಂದು ಅಭಿಪ್ರಾಯ ವ್ಯಕ್ತಪಡಿಸಿದರು. ಸರ್ ವಿಲಿಯಂ ಜೋನ್ಸ್, ಶ್ಲೆಗಲ್, ರಾಸ್ ಮಸ್ ರಾಸ್ಕ್, ಯಾಕೂಬ್ ಗ್ರಿಮ್, ವರ್ನರ್, ಹಂಬೋಲ್ಟ್, ಫ್ರಾನ್ಸಿಸ್ ಬಾಪ್, ಮ್ಯಾಕ್ಸ ಮುಲ್ಲರ್, ವ್ಹಿಟ್ನಿ ಮೊದಲಾದವರು ಐತಿಹಾಸಿಕ ಭಾಷಾವಿಜ್ಞಾನದ ಪ್ರಮುಖರು[೬].

೩. ವಿವರಣಾತ್ಮಕ ಭಾಷಾವಿಜ್ಞಾನ : ಒಂದು ಭಾಷೆ ಈಗ ಯಾವ ಸ್ಥಿತಿಯಲ್ಲಿದೆಯೋ ಹಾಗೆಯೇ ಅದನ್ನು ಅಭ್ಯಾಸಮಾಡುವುದು. ಇದು ಭಾಷೆಯ ಒಳರಚನೆಗೆ ಸಂಬಂಧಿಸಿದ ಧ್ವನಿ, ಪದ, ರೂಪ, ವಾಕ್ಯ, ಅರ್ಥ ಮುಂತಾದವುಗಳನ್ನು ಆ ಭಾಷೆಯಲ್ಲಿ ಬಳಕೆಯಲ್ಲಿರುವಂತೆಯೇ ವಿಶ್ಲೇಷಿಸಿ ವಿವರಿಸಿಕೊಳ್ಳಲು ನೆರವಾಗುವುದು. ಒಂದು ಭಾಷೆಯ ಧ್ವನಿಗಳು ಹುಟ್ಟುವ ಸ್ಥಾನ, ಧ್ವನಿಗಳ ವ್ಯವಸ್ಥೆ, ವರ್ಗೀಕರಣ, ಪದಕೋಶ, ಅಂತರ್‌ರಾಷ್ಟ್ರೀಯ ಧ್ವನಿ ಲಿಪಿಗಳ ನಕ್ಷೆ ಇತ್ಯಾದಿ ವಿವರಗಳ ಅಧ್ಯಯನ ಮಾಡುವುದು. ವಿವರಣಾತ್ಮಕ ಭಾಷಾವಿಜ್ಞಾನ. ವಿವರಣಾತ್ಮಕ ಭಾಷಾವಿಜ್ಞಾನವು ಹಲವು ಶಾಖೆಗಳನ್ನು ಹೊಂದಿದೆ. ಅಲ್ಲದೆ ಅವು ಇವತ್ತು ಪ್ರಮುಖ ಅಧ್ಯಯನಾಂಗಗಳಾಗಿ ಬೆಳೆದಿವೆ.

ಧ್ವನಿ ವಿಜ್ಞಾನ (Phonetics), ಧ್ವನಿಮಾ ವಿಜ್ಞಾನ (Phonemics), ಆಕೃತಿಮಾವಿಜ್ಞಾನ (Morphology), ವಾಕ್ಯವಿಜ್ಞಾನ (Syntax) ಮುಂತಾಗಿ ಅಧ್ಯಯನದ ಕ್ಷೇತ್ರಗಳಾಗಿವೆ. ಧ್ವನಿವಿಜ್ಞಾನ ಮತ್ತು ಅರ್ಥವಿಜ್ಞಾನಗಳು ನೇರವಾಗಿ ವಿವರಣಾತ್ಮಕ ಭಾಷಾವಿಜ್ಞಾನಕ್ಕೆ ಸೇರುವುದಿಲ್ಲ. ಆದರೆ ಇವು ಪರಸ್ಪರ ಪೂರಕವಾಗಿವೆ. ಒಂದು ಭಾಷೆಯ ಧ್ವನಿಮಾ, ಆಕೃತಿಮಾ, ಪದ, ವಾಕ್ಯ, ಮುಂತಾದವುಗಳ ಅಧ್ಯಯನಕ್ಕೆ ಧ್ವನಿವಿಜ್ಞಾನ ಮತ್ತು ಅರ್ಥವಿಜ್ಞಾನಗಳ ಜ್ಞಾನ ಅತ್ಯಗತ್ಯ. ಉಚ್ಚರಿತ ಧ್ವನಿಗಳು, ಅವುಗಳು ಹುಟ್ಟುವ ಬಗೆ, ಅವುಗಳ ಸ್ವರೂಪ, ಅವುಗಳ ವರ್ಗೀಕರಣ, ಧ್ವನಿ ಲಿಪಿ, ಅದರ ಬಳಕೆ ಮುಂತಾದವುಗಳನ್ನು ಧ್ವನಿ ವಿಜ್ಞಾನದಲ್ಲಿ ವಿಶ್ಲೇಷಿಸಲಾಗುತ್ತದೆ. ಮುಖ್ಯವಾಗಿ ಇದರಲ್ಲಿ ಭಾಷಾಧ್ವನಿಗಳು, ಅವುಗಳ ಉಚ್ಚಾರ, ಉಚ್ಚಾರಣಾ ಸ್ಥಾನ, ಉಚ್ಚಾರಣಾ ರೀತಿ, ಉಚ್ಚಾರಣಾ ಕರಣ, ಮುಂತಾದವುಗಳನ್ನು ಹೆಚ್ಚು ವೈಜ್ಞಾನಿಕವಾಗಿ ಗಮನಿಸಲಾಗುತ್ತದೆ. ಮನುಷ್ಯ ಉತ್ಪಾದಿಸಬಲ್ಲ, ಉಚ್ಚರಿಸಬಲ್ಲ ಧ್ವನಿಗಳೆಲ್ಲವೂ ಒಂದು ಭಾಷೆಯಲ್ಲಿರುವುದಿಲ್ಲ. ಒಂದು ಭಾಷೆಯಲ್ಲಿ ಧ್ವನಿಯ ಉಚ್ಚಾರಣೆಯ ವ್ಯತ್ಯಾಸದಿಂದ ಅರ್ಥವ್ಯತ್ಯಾಸವೂ ಆಗುವಂತಿದ್ದರೆ ಆಗ ಆ ಭಾಷೆಯಲ್ಲಿ ಆ ಧ್ವನಿ ಇದೆ ಎಂದು ಸ್ವೀಕರಿಸಲಾಗುತ್ತದೆ. ಹೀಗೆ ಅರ್ಥ ವ್ಯತ್ಯಾಸ ಉಂಟುಮಾಡುವ ಆ ಧ್ವನಿ ಆ ಭಾಷೆಯ ಧ್ವನಿಮಾ ಆಗುತ್ತದೆ. ಇದನ್ನು ಜೋಡಿ ಶಬ್ದಗಳಿಂದ ಗುರುತಿಸಬಹುದು, ಕಡಿ–ಗಡಿ ಎಂಬಲ್ಲಿ ಕ–ಗ ಉಚ್ಚಾರಣೆಯಲ್ಲಿ ವ್ಯತ್ಯಾಸವಿದೆ, ಉಳಿದಂತೆ ಯಾವ ವ್ಯತ್ಯಾಸವೂ ಕಾಣಿಸದು. ಈ ಒಂದು ಧ್ವನಿ ವ್ಯತ್ಯಾಸದಿಂದ ಅರ್ಥ ಬದಲಾಯಿತು. ಮಲೆ – ಮಳೆಯಲ್ಲಿ, ಲ–ಳ ವ್ಯತ್ಯಾಸದಿಂದ ಅರ್ಥವೂ ಬದಲಾಗುತ್ತದೆ. ಆದ್ದರಿಂದ ಕನ್ನಡದಲ್ಲಿ ಲ–ಳ ಎರಡೂ ಪ್ರತ್ಯೇಕ ಧ್ವನಿಮಾಗಳು. ಹೀಗೆ ಧ್ವನಿಮಾ ವಿಜ್ಞಾನವು ಒಂದು ಭಾಷೆಯಲ್ಲಿರುವ ಧ್ವನಿಮಾಗಳನ್ನೂ, ಉಪಧ್ವನಿಗಳನ್ನೂ ಗುರುತಿಸಿ ತಿಳಿಸುತ್ತದೆ.

ಒಂದು ಭಾಷೆಯಲ್ಲಿನ ಅರ್ಥಪೂರ್ಣವಾದ ಚಿಕ್ಕ ಘಟಕವೆಂದರೆ ಆಕೃತಿಮಾ. ಸ್ವತಂತ್ರವಾಗಿ ಬಳಸಿದಾಗಲೂ ಅರ್ಥನೀಡುವುದು ಮನೆ, ಹುಡುಗ, ಬಂದನು ಇತ್ಯಾದಿ ಶಬ್ದಗಳೂ, ಹಾಗೇ ಪದಗಳ ಜೊತೆ ಸೇರಿ ಅರ್ಥ ನೀಡುವ ಪ್ರತ್ಯಯಗಳೂ ಆಕೃತಿಮಾಗಳು. ಹಾಗೆಯೇ 'ವಾಕ್ಯವಿಜ್ಞಾನ' ಪದಗಳು ಸೇರಿ ಆಗುವ ವಾಕ್ಯ ರಚನೆಯ ಅಧ್ಯಯನವಾಗಿದೆ. ಪ್ರತಿಯೊಂದು ಭಾಷೆಗೂ ಅದರದೇ ಆದ ವಾಕ್ಯ ರಚನೆಯ ಕ್ರಮವಿರುತ್ತದೆ.

ವಿವರಣಾತ್ಮಕ ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಆಡು ಭಾಷೆಗಳ ಅಧ್ಯಯನ ಆರಂಭಗೊಂಡ ಮೇಲೆ ಇಪ್ಪತ್ತನೆಯ ಶತಮಾನದ ಆರಂಭದಲ್ಲಿ ಹೆಚ್ಚು ವ್ಯಾಪಕವಾಗಿ ಬೆಳೆಯಿತು. ಒಂದು ಭಾಷೆಯ ಪೂರ್ವ ಇತಿಹಾಸವನ್ನು ತಿಳಿಯಬೇಕಾದರೆ ಆ ಭಾಷೆಯ ವಿವರಣಾತ್ಮಕ ಅಧ್ಯಯನ ಅತ್ಯವಶ್ಯಕ. ಭಾಷೆಗಳ ಐತಿಹಾಸಿಕ ಹಾಗೂ ತೌಲನಿಕ ಅಧ್ಯಯನಗಳು ಹೆಚ್ಚು ವೈಜ್ಞಾನಿಕತೆಯನ್ನು ಸಂಪಾದಿಸಿಕೊಳ್ಳಲು ಸಾಧ್ಯವಾಯಿತು. ಇದಕ್ಕೆ ವಿವಿಧ ಬಗೆಯ ವಿವರಣಾತ್ಮಕ ವ್ಯಾಕರಣಗಳ ಅವಶ್ಯಕತೆ ಹೆಚ್ಚಿದಂತೆಲ್ಲಾ ಬಗೆ ಬಗೆಯ ವಿವರಣಾತ್ಮಕ ವ್ಯಾಕರಣಗಳು ಸಿದ್ಧವಾದವು. ಸಸೂರ್, ಸಫೀರ್, ಬೋಅಸ್, ಮುಂತಾದವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಅಮೆರಿಕ ರಷ್ಯಾ ಇಂಗ್ಲೆಂಡ್ ಫ್ರಾನ್ಸ್ ಮುಂತಾದ ದೇಶಗಳ ಬೇರೆ ಬೇರೆ ವಿದ್ವಾಂಸರು ತಮ್ಮ ತಮ್ಮ ಭಾಷೆಗಳ ವಿಶ್ಲೇಷಣೆಯನ್ನು ಮುಂದುವರಿಸಿದರು. ಇದರ ಫಲವಾಗಿ ವಿವರಣಾತ್ಮಕ ಭಾಷಾವಿಜ್ಞಾನ ಹೆಚ್ಚು ವೈಜ್ಞಾನಿಕತೆಯನ್ನು ವಿಶ್ಲೇಷಣಾ ತಂತ್ರವನ್ನು ರೂಪಿಸಿಕೊಟ್ಟ ಕೀರ್ತಿ ಸಸೂರ್ ಅವರಿಗೆ ಸಲ್ಲುತ್ತದೆ. ಇವನು ಐತಿಹಾಸಿಕ ಭಾಷಾವಿಜ್ಞಾನದ ಪ್ರಗತಿಗೆ ಹೆಚ್ಚು ಪ್ರಾಮುಖ್ಯ ತೋರುತ್ತಿದ್ದರೂ, ವಿವಿರಣಾತ್ಮಕ ಭಾಷಾವಿಜ್ಞಾನದ ಪ್ರಗತಿಗೆ ಶ್ರಮಿಸಿದವರಲ್ಲಿ ಮುಖ್ಯನೆನಿಸಿಕೊಂಡಿದ್ದಾನೆ.

"ಭಾಷಾವಿಜ್ಞಾನದ ಕ್ಷೇತ್ರದಲ್ಲಿ ವಿವರಣಾತ್ಮಕ ಭಾಷಾವಿಜ್ಞಾನ ಇಪ್ಪತ್ತನೆಯ ಶತಮಾನದಲ್ಲಿ ವ್ಯಾಪಕವಾಗಿ ಬೆಳೆಯಿತು. ಈ ವಿವರಣಾತ್ಮಕ ಭಾಷಾವಿಜ್ಞಾನವನ್ನು ವಿದ್ವಾಂಸರು ಏಕಕಾಲಿಕ ಭಾಷಾವಿಜ್ಞಾನ (ಸಿಂಕ್ರಾನಿಕ್ ಲಿಂಗ್ವಿಸ್ಟಿಕ್), ವಿಶ್ಲೇಷಣಾತ್ಮಕ ಭಾಷಾವಿಜ್ಞಾನ (ಅನಲೆಟಿಕಲ್ ಲಿಂಗ್ವಿಸ್ಟಿಕ್), ಸಂರಚನಾತ್ಮಕ ಭಾಷಾವಿಜ್ಞಾನ (ಸ್ಟ್ರಕ್ಚರಲ್ ಲಿಂಗ್ವಿಸ್ಟಿಕ್ಸ್), ಅಚಲ ಭಾಷಾವಿಜ್ಞಾನ (ಸ್ಟ್ಯಾಟಿಕ್ ಲಿಂಗ್ವಿಸ್ಟಿಕ್ಸ್), ವರ್ಣನಾತ್ಮಕ ಭಾಷಾವಿಜ್ಞಾನ (ಟ್ಯಾಕ್ಸೋನಮಿಕ್ ಲಿಂಗ್ವಿಸ್ಟಿಕ್ಸ್) ಎಂದು ಬೇರೆ ಬೇರೆ ಹೆಸರುಗಳಿಂದ ಕರೆದುಕೊಂಡಿದ್ದಾರೆ. ಗ್ರಾಂಥಿಕ ಭಾಷೆಗಳಿಗಿಂತ ಆಡುಭಾಷೆಗಳ ಅಧ್ಯಯನಕ್ಕೆ ಈ ಶಾಖೆ ಹೆಚ್ಚು ಮಹತ್ವ ನೀಡಿದ್ದರ ಫಲವಾಗಿ ಅನೇಕ ಭಾಷೆ ಉಪಭಾಷೆಗಳ ಅಧ್ಯಯನ ವ್ಯಾಪಕವಾಗಿ ನಡೆದಿದೆ. ಫರ್ಡಿನಂಡ್ ಡಿ. ಸಸೂರ್ (೧೮೫೭-೧೯೧೩), ಎಡ್ವರ್ಡ್ ಸಫೀರ್( ೧೮೮೪-೧೯೩೧), ಪ್ರಾನ್ಸ್ ಬೋಅಸ್ (೧೮೯೬-೧೯೩೮), ಲಿಯೋನಾರ್ಡ್ ಬ್ಲೂಂ ಫೀಲ್ಡ್ (೧೮೮೭-೧೯೪೯),

ಮೊದಲಾದ ಭಾಷಾವಿಜ್ಞಾನಿಗಳು ಈ ಅಧ್ಯಯನ ಶಾಖೆಯ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ[೭].

೪. ತೌಲನಿಕ ಭಾಷಾವಿಜ್ಞಾನ : ವಿವರಣಾತ್ಮಕ ಭಾಷಾವಿಜ್ಞಾನ ಮತ್ತು ಐತಿಹಾಸಿಕ ಭಾಷಾವಿಜ್ಞಾನಗಳಂತೆಯೇ ತೌಲನಿಕ ಭಾಷಾವಿಜ್ಞಾನವು ಸಾಮಾನ್ಯ ಭಾಷಾವಿಜ್ಞಾನದಲ್ಲಿ ಮುಖ್ಯವಾದದ್ದು. ತೌಲನಿಕ ಭಾಷಾವಿಜ್ಞಾನದಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚು ಭಾಷೆ ಅಥವಾ ಉಪಭಾಷೆಗಳನ್ನು ಪರಸ್ಪರ ಹೋಲಿಸಿ ಅವುಗಳಲ್ಲಿರುವ ಪ್ರಮುಖ ಅಂಶಗಳನ್ನು ಗುರುತಿಸಲಾಗುತ್ತದೆ. ತೌಲನಿಕ ಭಾಷಾವಿಜ್ಞಾನದಲ್ಲಿ ಭಾಷೆಯ ರಚನಾತ್ಮಕ ಅಂಶಗಳನ್ನು ತೌಲನಿಕವಾಗಿ ಗಮನಿಸಲಾಗುತ್ತದೆ. ಇದರಿಂದ ಭಾಷೆಗಳ ನಡುವೆ ಇರುವ ಸಮಾನ ಅಂಶಗಳು ಹಾಗೂ ವ್ಯತ್ಯಾಸಗಳು ತಿಳಿದುಬರುತ್ತವೆ. ಈ ಬಗೆಯ ಅಧ್ಯಯನದಿಂದ ಭಾಷೆಗಳು ಚಾರಿತ್ರಿಕವಾಗಿ ಬೆಳೆದುಬಂದ ವಿಧಾನವನ್ನು ತಿಳಿಯಲು ಸಹಾಯಕವಾಗುತ್ತದೆ. ಭಾಷೆಗಳ ತೌಲನಿಕ ಅಧ್ಯಯನದಿಂದ ಜಗತ್ತಿನ ಭಾಷೆಗಳು ಮೂಲದಿಂದ ಹೇಗೆ ಬಿಡಿಸಿಕೊಂಡು ಚಾರಿತ್ರಿಕವಾಗಿ ಬೆಳೆದುಬಂದಿವೆ ಎಂಬುದು ಸ್ಪಷ್ಟವಾಗುತ್ತದೆ. ಭಾಷಾವರ್ಗೀಕರಣ, ಭಾಷಿಕ ಪರಿವರ್ತನೆ, ಭಾಷಿಕ ಪುನರ್ ನಿರ್ಮಾಣ, ಭಾಷೆ ಕಾಲಕ್ರಮೇಣ ಹರಿದು ಬಂದ ಬಗೆ ಮುಂತಾದ ಅನೇಕ ವಿಚಾರಗಳನ್ನು ಅರಿಯಲು ಸಾಧ್ಯ. ಒಂದು ವರ್ಗದ ಭಾಷೆಯ ಮೂಲ ಭಾಷೆಯನ್ನು ತಿಳಿಯಲು ಇದು ಸಹಾಯಕವಾಗುತ್ತದೆ. ಜ್ಞಾತಿ ಭಾಷೆಗಳ ಬಗ್ಗೆ ಅರಿವು ಮೂಡುತ್ತದೆ. ಇಂಡೋ ಆರ್ಯನ್, ಇಂಡೋ ಯೂರೋಪಿಯನ್, ದ್ರಾವಿಡ ಭಾಷಾವರ್ಗಗಳೆಂದು ಗುರುತಿಸಲು ಸಾಧ್ಯವಾದುದು ಈ ವಿಧಾನದಿಂದ. ಭಾಷೆ ಸದಾ ಪರಿವರ್ತನಾಶೀಲ ಗುಣವುಳ್ಳದ್ದಾಗಿರುತ್ತದೆ. ಪ್ರದೇಶ ಸಂಸ್ಕೃತಿ, ಮನುಷ್ಯನ ಚಟುವಟಿಕೆಗಳು ಬದಲಾಗುತ್ತಿವೆ. ಭಾಷೆಯಲ್ಲಿ ಅಂತಹ ಅಂಶಗಳು ಅಂತರ್ಗತಗೊಳ್ಳುತ್ತವೆ ಮತ್ತು ಭಾಷೆಯ ಅನೇಕ ಹೊಸತನಕ್ಕೆ ಕಾರಣವಾಗುತ್ತದೆ. ಭಾಷೆಯ ವ್ಯತ್ಯಾಸಗಳು ಕಾಲಕ್ರಮೇಣ ಹೆಚ್ಚುತ್ತ ಪ್ರತ್ಯೇಕ ಉಪಭಾಷೆಗಳಾಗುತ್ತವೆ. ಉಪಭಾಷೆಗಳು ಕ್ರಮೇಣ ಸ್ವತಂತ್ರ ಭಾಷೆಗಳಾಗಬಹುದು. ಈಗಿರುವ ಭಾಷೆಗಳಿಂದ ಧ್ವನಿ ಪದಗಳ ಅರ್ಥ ಇತ್ಯಾದಿ ಗಮನಿಸಿ ಮೂಲ ಭಾಷೆಯನ್ನು ಪುನರ್ ಕಂಡುಕೊಳ್ಳಬಹುದು. ಈಗ ತಮಿಳು, ಕನ್ನಡ, ತೆಲುಗು, ಮಲೆಯಾಳಂ ಮುಂತಾದ ಭಾಷೆಗಳ

ಆಧಾರದಿಂದ ಹಿಂದೆ ಇದ್ದ ಮೂಲ ದ್ರಾವಿಡ ಭಾಷೆಯ ಸ್ವರೂಪವನ್ನು ತಿಳಿಯಲು ಸಾಧ್ಯ.

ತೌಲನಿಕ ಭಾಷಾವಿಜ್ಞಾನವು ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಹೆಚ್ಚು ಪ್ರಚುರತೆಯನ್ನು ಗಳಿಸಿಕೊಂಡಿತು. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಸಂಸ್ಕೃತವನ್ನು ಆಳವಾಗಿ ಅಧ್ಯಯನಮಾಡಿ ಸಂಸ್ಕೃತಕ್ಕೂ ಇತರ ಭಾಷೆಗಳಿಗೂ ಇರುವ ನಿಕಟ ಸಂಬಂಧವನ್ನು ನಿರ್ಧರಿಸಿಕೊಳ್ಳಲು ಪ್ರಯತ್ನಿಸಿದ ಸರ್ ವಿಲಿಯಮ್ ಜೋನ್ಸನ್‌ನು ತೌಲನಿಕ ಭಾಷಾವಿಜ್ಞಾನದ ಅಧ್ಯಯನಕ್ಕೆ ಮೊದಲು ಆರಂಭಿಸಿದನು. ಈತನನ್ನು ತೌಲನಿಕ ಭಾಷಾವಿಜ್ಞಾನದ ಪಿತಾಮಹ ಎಂತಲೂ ಕರೆಯಲಾಗುತ್ತದೆ. ಹೆನ್ರಿ ಥಾಮಸ್, ಕೋಲ್ ಬ್ರುಕ್, ಶ್ಲೆಗಲ್, ವಿಲ್ ಹೆಲ್ಮ್, ಹಂಬೋಲ್ಟ್, ರಾಸ್ ಮಸ್ ರಾಸ್ಕ್, ಯಾಕೂಬ್ ಗ್ರಿಮ್, ವರ್ನರ್, ಪ್ರಾನ್ಸಿಸ್ ಬಾಪ್, ರಾಬರ್ಟ್ ಕಾಲ್ಡ್‌ವೆಲ್ ಮುಂತಾದವರು ತೌಲನಿಕ ಭಾಷಾಧ್ಯಯನದ ಬೆಳವಣಿಗೆಯ ಪ್ರಮುಖ ಚಿಂತಕರು.

**ಅಡಿ ಟಿಪ್ಪಣಿಗಳು :**

೧. ಡಾ. ಚಿದಾನಂದ ಮೂರ್ತಿ – ಭಾಷಾವಿಜ್ಞಾನದ ಮೂಲ ತತ್ವಗಳು ಪುಟ – ೧೩೯

೨. ಡಾ. ಚಿದಾನಂದ ಮೂರ್ತಿ – ಭಾಷಾವಿಜ್ಞಾನದ ಮೂಲ ತತ್ವಗಳು ಪುಟ – ೧೪೧

೩. ಡಾ. ಚಿದಾನಂದ ಮೂರ್ತಿ – ಭಾಷಾವಿಜ್ಞಾನದ ಮೂಲ ತತ್ವಗಳು ಪುಟ – ೧೪೩

೪. ಡಾ. ಚಿದಾನಂದ ಮೂರ್ತಿ – ಭಾಷಾವಿಜ್ಞಾನದ ಮೂಲ ತತ್ವಗಳು ಪುಟ – ೧೪೪

೫. ಡಾ. ಕೆ. ವಿ. ನಾರಾಯಣ (ಸಂ)–ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಭಾಷೆ–೧ ಪುಟ–೩೬೩

೬. ಡಾ. ಕೆ. ವಿ. ನಾರಾಯಣ (ಸಂ)–ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಭಾಷೆ–೧ ಪುಟ–೩೬೪

೭. ಡಾ. ಕೆ. ವಿ. ನಾರಾಯಣ (ಸಂ)–ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ ಭಾಷೆ–೧ ಪುಟ–೩೬೪

# ಅಧ್ಯಾಯ : ೪

# ಕನ್ನಡದಲ್ಲಿ ಭಾಷಾಧ್ಯಯನ ನಡೆದು ಬಂದ ಬಗೆ

ಉತ್ತರದಿಂದ ಕಾಲಾಂತರದಲ್ಲಿ ನಾಗರೀಕತೆ ಬೆಳೆದಂತೆ ವಲಸೆಯಾಗಿ ದಕ್ಷಿಣದತ್ತ ದ್ರಾವಿಡರು ಬಂದವರು. ದಕ್ಷಿಣ ಭಾರತದಲ್ಲಿ ಮೊದಲು ಬಂದು ನೆಲೆಸಿದವರು ದ್ರಾವಿಡರು ಮತ್ತು ಇವತ್ತೂ ದಕ್ಷಿಣದ ಪ್ರಮುಖ ನಿವಾಸಿಗಳು. ದಕ್ಷಿಣ ಭಾರತದ ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಪ್ರಮುಖ ಗ್ರಂಥಸ್ಥ ಅಥವಾ ಲಿಖಿತ ಭಾಷೆಗಳಲ್ಲಿ ಕನ್ನಡವೂ ಒಂದು. ಇಲ್ಲೂ ಸಹ ಕಾಲಾಂತರದಲ್ಲಿ ದಕ್ಷಿಣ ದ್ರಾವಿಡ ಭಾಷೆ ಹಲವು ಭಾಷೆಗಳಾಗಿ ರೂಪಾಂತರಗೊಂಡಿವೆ. ಹಾಗೆ ಪ್ರತ್ಯೇಕಗೊಂಡ ಭಾಷೆಗಳಲ್ಲಿ ಇವತ್ತು ಪ್ರಮುಖವಾದ ಭಾಷೆಗಳು ಐದು. ತಮಿಳು, ಕನ್ನಡ, ತೆಲುಗು, ಮಲೆಯಾಳಂ ಮತ್ತು ತುಳು. ದಕ್ಷಿಣ ದ್ರಾವಿಡದಿಂದ ಪ್ರತ್ಯೇಕಗೊಂಡಂದಿನಿಂದಲೇ ಕನ್ನಡ ಭಾಷೆಯ ಇತಿಹಾಸ ಆರಂಭವಾಗುತ್ತದೆ. ಕ್ರಿ. ಶ. ಪೂರ್ವದ ಕಾಲಕ್ಕಾಗಲೇ ಕನ್ನಡ ಭಾಷೆಯು ಪ್ರತ್ಯೇಕತೆಯನ್ನು ಪಡೆದುಕೊಂಡಿದೆ. ಅಂದರೆ ಕ್ರಿ. ಪೂ. ಮೂರನೆಯ ಶತಮಾನದ ಹಿಂದೆಯೇ ಪ್ರತ್ಯೇಕಗೊಂಡರೂ ಕ್ರಿ. ಶ. ನಾಲ್ಕನೆಯ ಶತಮಾನದ ವೇಳೆಗೆ ಸ್ವತಂತ್ರವಾಯಿತೆಂದೂ, ಕನ್ನಡ ಭಾಷೆಯು ಭಾರತೀಯ ಭಾಷೆಗಳಲ್ಲಿ ಗ್ರಂಥಸ್ಥ ಅಥವಾ ಲಿಖಿತ ಭಾಷೆಗಳಲ್ಲಿಯೇ ಮೂರನೆಯ ಸ್ಥಾನದಲ್ಲಿ ನಿಲ್ಲುತ್ತದೆ. ಹಾಗಾಗಿ ಕನ್ನಡ ಭಾಷೆಯ ಚರಿತ್ರೆ ಹಿಂದೆ ಹಿಂದೆ ಹೋದಂತೆ ಅಸ್ಪಷ್ಟತೆ ಆವರಿಸುತ್ತದೆ. ದೇಶೀಯ ಇತರ ಭಾಷೆಗಳು ಇಲ್ಲವೇ ವಿದೇಶೀಯ ಭಾಷೆಗಳ ಕೃತಿ, ಶಾಸನ, ಕಾವ್ಯಗಳಲ್ಲಿ ಕನ್ನಡ ನಾಡಿನ, ಕನ್ನಡ ಭಾಷೆಯ ಉಲ್ಲೇಖ ಅಥವಾ ದಾಖಲೆಗಳು ದೊರೆಯುತ್ತವೆ.

ಉಪಲಬ್ಧ ಆಧಾರಗಳಿಂದ ಕನ್ನಡ ಭಾಷೆ ಕ್ರಿ. ಶ. ಪೂ. ದಿಂದಲೆ ಪ್ರಚಲಿತದಲ್ಲಿದ್ದರೂ ನಿಖರವಾಗಿ ಗುರುತಿಸಲು ಸಾಧ್ಯವಾಗಿಲ್ಲ. ಅನಂತರದ ಲಭ್ಯತೆಗಳಾದ ಹಲ್ಮಿಡಿ ಶಾಸನ ಮತ್ತು ಕವಿರಾಜ ಮಾರ್ಗಗಳಿಂದ ಕನ್ನಡ ಭಾಷೆಯ ಇತಿಹಾಸ ಸ್ಪಷ್ಟವಾಗುತ್ತಾ ಸಾಗುತ್ತದೆ. ಹಲ್ಮಿಡಿ ಶಾಸನ ( ಕ್ರಿ. ಶ. ೪೫೦ ) ಇದು ಕನ್ನಡದ ಮೊಟ್ಟ ಮೊದಲ ಉಪಲಬ್ಧ ಶಾಸನವಾಗಿದೆ. ಹಾಗೆಯೇ ಕವಿರಾಜಮಾರ್ಗ ( ಕ್ರಿ. ಶ. ೮೫೦ ) ಕನ್ನಡದ ಮೊಟ್ಟಮೊದಲ ಉಪಲಬ್ಧ ಕೃತಿ. ನಂತರದಲ್ಲಿ ಹಲವಾರು ಶಾಸನಗಳು ಲಭ್ಯವಿದ್ದು ಕನ್ನಡ ಗದ್ಯ ಪದ್ಯಗಳ ಶ್ರೇಷ್ಠ ಮಾದರಿಗಳನ್ನು ನಮಗೆ ಪರಿಚಯಿಸುತ್ತವೆ. ವ್ಯಾಕರಣದ ಕಟ್ಟುಪಾಡುಗಳನ್ನು ನಿಯತವಾಗಿ ಪಾಲಿಸುವ ಒಂದು

ವ್ಯವಸ್ಥಿತ ಹಾಗೂ ಸಮೃದ್ಧ ಭಾಷೆಯಾಗಿ ಕನ್ನಡವು ಬೆಳೆದಿರುವುದನ್ನು ಇವುಗಳಲ್ಲಿ ಕಾಣುತ್ತೇವೆ. ಕನ್ನಡ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಕವಿರಾಜಮಾರ್ಗ ಕೃತಿ ಪ್ರಮುಖವಾದುದು. ಕವಿರಾಜಮಾರ್ಗಕ್ಕಿಂತ ಹಿಂದೆಯೇ ಕನ್ನಡದಲ್ಲಿ ಗದ್ಯ ಪದ್ಯ ಕೃತಿಗಳು ರಚಿತವಾಗಿದ್ದವೆಂಬ ಮಾಹಿತಿ ತಿಳಿದುಬಂದರೂ ಅವು ಲಭ್ಯವಾಗಿಲ್ಲ. ಇದು ಭಾಷಾಧ್ಯಯನಕ್ಕೆ ಇರುವ ಅಡ್ಡಿಯಾಗಿದೆ ಅಥವಾ ಕನ್ನಡ ಭಾಷೆ ಮತ್ತು ಚರಿತ್ರೆ ಕತ್ತಲಿಗೆ ಸರಿದ ಕಾಲವಾಗಿದೆ. ಆದರೂ ಉಪಲಬ್ದ ಕವಿರಾಜ ಮಾರ್ಗದಿಂದ ಹಿಡಿದು ಇಂದಿನ ಇಪ್ಪತ್ತೊಂದನೆಯ ಶತಮಾನದವರೆಗಿನ ಎಲ್ಲ ಅಧ್ಯಯನಗಳು, ಸಂಶೋಧನೆಗಳು, ಕೃತಿಗಳೆಲ್ಲ ಭಾಷಾಚರಿತ್ರೆಯ ಚಿತ್ರಣವನ್ನು ಹಿಡಿಯಾಗಿ ಗ್ರಹಿಸಲು ಸಾಧ್ಯವಾಗಿಸಿವೆ.

ಕನ್ನಡ ಭಾಷೆಯ ಪ್ರಾಚೀನತೆಯನ್ನು ನಿರ್ಧರಿಸುವಲ್ಲಿ ಅನ್ಯ ಭಾಷೆಗಳಾದ ಸಂಸ್ಕೃತ, ತಮಿಳು, ಪ್ರಾಕೃತ ಭಾಷೆಗಳು ಪ್ರಮುಖ ಪಾತ್ರವಹಿಸಿವೆ. ಭಾರತದ ಪ್ರಸಿದ್ಧ ಮಹಾಕಾವ್ಯ ಮಹಾಭಾರತ, ಸಂಸ್ಕೃತ ಕವಿಯಾದ ಶೂದ್ರಕನ ಮೃಚ್ಛಕಟಿಕ ನಾಟಕ, ವಿಷ್ಣುಧರ್ಮೋತ್ತರ ಪುರಾಣ, ವರಹಾಮೀರನ ಬೃಹತ್ ಸಂಹಿತೆ, ಭಾಗವತ ಪುರಾಣ, ಮಾರ್ಕಂಡೇಯ ಪುರಾಣ, ರಾಜಶೇಖರನ ಕಾವ್ಯಮೀಮಾಂಸೆ ಹಾಗೂ ವಿದ್ಧಸಾಲಬಂಜಿಕೆ ಮುಂತಾದವು. ಈ ಮೇಲಿನ ಕಾವ್ಯಗಳಲ್ಲಿ ಕರ್ನಾಟಕ ಪದದ ಉಲ್ಲೇಖ ಬರುತ್ತದೆ. ಅಲ್ಲದೆ ಕನ್ನಡ ಕಾವ್ಯಗಳಾದ ಪಂಪನ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ, ನಾಗವರ್ಮನ ಕರ್ನಾಟಕ ಕಾದಂಬರಿ, ಛಂದೋಂಬುದಿ, ಕರ್ನಾಟಕ ಭಾಷಾಭೂಷಣ, ಕಾವ್ಯಾವಲೋಕನ, ಕೇಶಿರಾಜನ ಶಬ್ದಮಣಿದರ್ಪಣ, ಬಸವಪುರಾಣ, ಕುಮಾರವ್ಯಾಸಭಾರತ, ವಿವೇಕ ಚಿಂತಾಮಣಿ, ಹಮ್ಮೀರ ಕಾವ್ಯ, ಭರತೇಶ ವೈಭವ, ಚನ್ನಬಸವಪುರಾಣ, ಜೈಮಿನಿಭಾರತ, ಕಂಠೀರವ ನರಸರಾಜವಿಜಯ, ಕರ್ನಾಟಕ ಶಬ್ದಾನುಶಾಸನ, ಮುಂತಾದ ಗ್ರಂಥಗಳಲ್ಲಿಯೂ ಕರ್ನಾಟಕ ಪದದ ಉಲ್ಲೇಖ ಬರುತ್ತದೆ.

ಕನ್ನಡ ಭಾಷೆಯ ಪ್ರಾಚೀನತೆಯನ್ನು ವೇದ ಪೂರ್ವಕಾಲದಿಂದಲೂ ಗುರುತಿಸುವ ಪ್ರಯತ್ನಗಳು ನಡೆದಿವೆ. ಮೆಹೆಂಜದಾರೋ ಹರಪ್ಪೋ ಸಂಸ್ಕೃತಿಯ ಮುದ್ರಿಕೆಗಳಲ್ಲಿ ಕನ್ನಡಿಗರ ಉಲ್ಲೇಖವಿದೆಯೆಂದು, ಸಿಂಧೂಸಂಸ್ಕೃತಿಯ ಭಾಷೆಯೂ ಕೂಡ ಒಂದು ಬಗೆಯ ದ್ರಾವಿಡ ಭಾಷೆಯಾಗಿತ್ತು ಎಂಬುದು ಕೆಲವು ವಿದ್ವಂಸರ ಅಭಿಪ್ರಾಯವಾಗಿದೆ. ಹಾಗೆ ಕನ್ನಡ ದ್ರಾವಿಡ ಭಾಷೆಗಳಲ್ಲಿ ಪ್ರಮುಖವಾದ ಭಾಷೆಗಳಲ್ಲಿ ಒಂದು. ಈ ದ್ರಾವಿಡ ಭಾಷೆಗಳು ಉತ್ತರದ ಕಡೆಯಿಂದ ದಕ್ಷಿಣದ ಕಡೆಗೆ ಕಾಲಾಂತರದಲ್ಲಿ ಬಂದದ್ದು ಇದೆ. ಹಾಗಾಗಿ ಸಿಂಧು ಸಂಸ್ಕೃತಿಯ ಭಾಷೆಯಾಗಿದ್ದ

ದ್ರಾವಿಡವು ಇಂದು ಪ್ರತ್ಯೇಕತೆಗೊಂಡು ದಕ್ಷಿಣ ಭಾರತವನ್ನು ವ್ಯಾಪಿಸಿಕೊಂಡಿದೆ. ಛಾಂದೋಗ್ಯೋಪನಿಷತ್ತಿನಲ್ಲಿ ದೊರೆಯುವ ಚೆನ್ (ಚಂದ್ರ) ಮಟಚಿ (ಮಿಡತೆ) ಮುಂತಾದ ಪದಗಳು ಕನ್ನಡ ಪದಗಳೆಂದು, ಮಟಚಿ ಪದವು ಮಿಡಚಿ ಎಂಬ ಪದದ ಸಂಸ್ಕೃತ ರೂಪವೆಂದು ಡಾ. ಭಂಡಾರ್ಕರ್‌ರವರ ವಾದವಾಗಿದೆ.

ಹಾಗೆಯೇ ಕನ್ನಡ ಭಾಷೆಯ ಪ್ರಾಚೀನತೆಯನ್ನು ವೇದ ಕಾಲದಲ್ಲೂ ಗುರುತಿಸುವ ಪ್ರಯತ್ನಗಳು ನಡೆದಿವೆ, ಸುಮಾರು ಕ್ರಿ. ಪೂ. ನಾಲ್ಕು-ಮೂರನೆಯ ಶತಮಾನದಲ್ಲಿ ರಚನೆಯಾದ ಮಹಾಭಾರತದ ಭೀಷ್ಮಪರ್ವದಲ್ಲಿ ಕರ್ನಾಟಕ ಪದದ ಮೊಟ್ಟಮೊದಲ ಉಲ್ಲೇಖವಿದೆ. ಅಲ್ಲದೆ ಕರ್ನಾಟಕದ ಇತರ ಭಾಗಗಳಾದ ಮಹಿಷಕ, ಕುಂತಲ ಮೊದಲಾದ ಹೆಸರುಗಳು ಅಲ್ಲಿ ಬರುತ್ತವೆ. ಮಹಿಷಕ ಎಂಬುದು ನರ್ಮದಾ ನದಿಯ ಮೇಲಿನ ಮಾಹಿಷ್ಮತಿ ರಾಜ್ಯವನ್ನು ಸೂಚಿಸುತ್ತದೆ ಎಂದು ಕೆಲವರ ಅಭಿಪ್ರಾಯವಾದರೆ ಮತ್ತೆ ಕೆಲವರು ಮೈಸೂರನ್ನು ಸೂಚಿಸುತ್ತದೆ ಎಂದು ವಾದಿಸುತ್ತಾರೆ. ಆದರೆ ಕರ್ನಾಟಕ ಮತ್ತು ಕುಂತಲಗಳು ಕನ್ನಡ ನಾಡಿನ ಭಾಗಗಳು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಕನ್ನಡ ನಾಡಿನ ದಕ್ಷಿಣ ಭಾಗವನ್ನು ಕರ್ನಾಟಕವೆಂತಲೂ, ಉತ್ತರ ಭಾಗವನ್ನು ಕುಂತಲವೆಂದು ಆ ಕಾಲದಲ್ಲಿ ಕರೆಯುತ್ತಿದ್ದರೆಂದು ತಿಳಿದುಬರುತ್ತದೆ.

ಮಹಾಭಾರತಕ್ಕೂ ಪೂರ್ವದ ಮೂರು ನಾಲ್ಕನೆಯ ಶತಮಾನದಲ್ಲಿ ರಚನೆಯಾಗಿರಬಹುದಾದ ರಾಮಾಯಣದಲ್ಲಿ ಬರುವ ಕಿಷ್ಕಿಂದೆ, ವೈಜಯಂತ, ರಟ್ಟಕ, ಮಹಿಷಕ ಮೊದಲಾದ ಹೆಸರುಗಳು ಕರ್ನಾಟಕದ ರಾಜ್ಯಗಳನ್ನು ಸೂಚಿಸಬಹುದಾದರೂ ಕರ್ನಾಟಕ ಎಂಬ ಪದ ಮಾತ್ರ ಉಲ್ಲೇಖವಾಗಿಲ್ಲ. ಆದರೆ ಮಹಾಭಾರತದಲ್ಲಿ ಈ ಪದ ಉಲ್ಲೇಖವಾಗಿದ್ದು ಪ್ರಸಿದ್ಧಿ ಪಡೆದಿರುವುದು ಗಮನಕ್ಕೆ ಬರುತ್ತದೆ[7].

**ಶಾಸನಗಳು :**

ಕನ್ನಡ ಭಾಷೆಯ ಪ್ರಾಚೀನತೆಯನ್ನು ಗುರುತಿಸುವಲ್ಲಿ ಅಶೋಕನ ಶಾಸನಗಳು ಸಹಕಾರಿಯಾಗಿವೆ. ಕ್ರಿ. ಶ. ಮೂರನೆಯ ಶತಮಾನದ ಅಶೋಕನ ಬ್ರಹ್ಮಗಿರಿ ಶಾಸನದಲ್ಲಿ 'ಇಸಿಲ' ಎಂಬ ಸ್ಥಳವಾಚಿ ಪದದ ಉಲ್ಲೇಖವಿದೆ. ಪ್ರೊ. ಡಿ. ಎಲ್. ನರಸಿಂಹಾಚಾರ್ಯರು ಈ ಪದವು ಅಚ್ಚಗನ್ನಡವೆಂದು ತೇದಿಯನ್ನು ಸುಮಾರಾಗಿ ಹೇಳಬಹುದಾದ ಅತ್ಯಂತ ಪ್ರಾಚೀನ ಕನ್ನಡ ಪದವೆಂದು ಅಭಿಪ್ರಾಯಪಟ್ಟಿದ್ದಾರೆ. ಕ್ರಿ. ಶ. ಒಂದರಿಂದ ಆರನೆಯ ಶತಮಾನದ ಮಧ್ಯಕಾಲದಲ್ಲಿ ರಚಿತವಾಗಿರಬಹುದಾದ

ಸಂಸ್ಕೃತದ ಮೃಚ್ಛಕಟಿಕ ನಾಟಕದಲ್ಲಿ ಕರ್ನಾಟಕ ದೇಶದ ಹೆಸರು ಬರುತ್ತದೆ. ಹಾಗೆಯೇ ಕ್ರಿ. ಶ. ಸುಮಾರು ಒಂದನೆಯ ಶತಮಾನದಲ್ಲಿ ರಚಿತವಾಗಿರಬಹುದಾದ ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾದ ದಕ್ಷಿಣ ಭಾರತದ ದೇಶಗಳಲ್ಲಿ ಕರ್ನಾಟಕವೂ ಒಂದಾಗಿದೆ.

ಭಾಗವತ ಪುರಾಣದಲ್ಲಿ ಋಷಭದೇವನು ತನ್ನ ಹಿರಿಯ ಮಗ ಭರತನಿಗೆ ರಾಜ್ಯವನ್ನರ್ಪಿಸಿ ಸರ್ವಸಂಘ ಪರಿತ್ಯಾಗ ಮಾಡಿ ಬ್ರಹ್ಮಾವರ್ತದಿಂದ ದೇಶ ಸಂಚಾರಮಾಡುತ್ತ, ಕೊಂಕ, ಪುಟಕ, ದಕ್ಷಿಣ ಕರ್ನಾಟಕ ದೇಶಗಳಲ್ಲಿ ಸಂಚರಿಸಿ ಕುಟಕ ಪರ್ವತದ ಕಾಡುಬೇಗೆಯಲ್ಲಿ ದೇಹತ್ಯಾಗಮಾಡಿದನೆಂದು ಹೇಳಲಾಗಿದೆ. ಪದ್ಮಪುರಾಣದಲ್ಲಿಯೂ 'ಜಾತಾ ಹಂ ದ್ರಾವಿಡೇ ದೇಶೇ ಕರ್ಣಾಟೇ ಪರಮಾಂಗತ' ಎಂಬಲ್ಲಿ ಕರ್ನಾಟಕ ದೇಶದ ಉಲ್ಲೇಖ ಬರುತ್ತದೆ.

ಕ್ರಿ. ಶ. ಪ್ರಾರಂಭದಲ್ಲಿದ್ದ ಟಾಲೆಮಿ ಎಂಬ ಭೂಗೋಳ ಶಾಸ್ತ್ರಜ್ಞನು ತನ್ನ ಗ್ರಂಥದಲ್ಲಿ ಬಾದಾಮಿ, ಇಂಡಿ, ಕಲಕೇರಿ, ಮುದುಗಲ್ಲು, ಪುನ್ನಾಟ ಮೊದಲಾದ ದೇಶವಾಚಕ ಪದಗಳನ್ನು ಉಲ್ಲೇಖಿಸಿದ್ದಾನೆ. ಟಾಲೆಮಿಯೂ ಭೀಮಾ ನದಿಯಿಂದ ಬನವಾಸಿಯವರೆಗಿನ ನಡುವಿನ ಹತ್ತು ಸ್ಥಳಗಳನ್ನು ಹೆಸರಿಸಿದ್ದಾನೆ ಎಂದು ಗೋವಿಂದ ಪೈಗಳು ಅಭಿಪ್ರಾಯಪಡುತ್ತಾ ಆ ಸ್ಥಳಗಳನ್ನು ಈ ಕೆಳಗಿನಂತೆ ಸೂಚಿಸಿದ್ದಾರೆ. ನಾಗರೂರು, ತವಸಿ, ಇಂಡಿ, ಗದಾಹಿಂಗಲಜಾ, ಹಿಪ್ಪರಿಗಿ, ಸವದಿ, ಚಿಮ್ಮಲಿಗಿ, ಮುದ್ಗಲಾ, ಕಲಕೇರಿ, ಕಟ್ಟರೆಹಾಳ, ಈ ಆಧಾರಗಳಿಂದ ಟಾಲೆಮಿಯ ಗ್ರಂಥ ರಚನೆಯ ಕಾಲಕ್ಕಿಂತ ಒಂದೆರಡು ಶತಮಾನಗಳ ಹಿಂದೆ ಕನ್ನಡ ಭಾಷೆ ಇದ್ದಿರಬೇಕೆಂದು ಗೋವಿಂದ ಪೈಗಳು ತೀರ್ಮಾನಿಸುತ್ತಾರೆ.

ಕ್ರಿ. ಪೂ. ಒಂದನೆಯ ಶತಮಾನದ ಶಾತವಾಹನರ ದೊರೆ ಹಾಲರಾಜನ ಗಾಥಸಪ್ತಶತಿಯಲ್ಲಿ ಕಂಡುಬರುವ ಕನ್ನಡ ಪದಗಳನ್ನು ಗೋವಿಂದ ಪೈಗಳು ಗುರುತಿಸಿದ್ದಾರೆ. ಅತ್ತಾ (ಅತ್ತೆ), ತುಪ್ಪ (ಘೃತ), ಪೊಟ್ಟೆ (ಹೊಟ್ಟೆ), ಪಲಹೀ(ಹತ್ತಿ), ತೀರ್‌ಇ(ಶಕ್ಯವಾಗು) ಎಂಬ ಮೊದಲಾದ ಪದಗಳು ದೊರೆಯುತ್ತವೆ. ಈ ಪದಗಳನ್ನು ಗಮನಿಸಿದರೆ ಎರಡು – ಮೂರನೆಯ ಶತಮಾನದಿಂದಲಾದರೂ ಕನ್ನಡ ಭಾಷೆ ಅಸ್ತಿತ್ವದಲ್ಲಿದ್ದಿರಬಹುದೆಂದು ಗೋವಿಂದ ಪೈ ಅಭಿಪ್ರಾಯ ಪಡುತ್ತಾರೆ. ಈಜಿಪ್ತಿನ ಆಕ್ಸಿರಿಂಖಿಸಿನಲ್ಲಿ ದೊರೆತ ಗ್ರೀಕ್ ಪ್ರಹಸನದ ಬಹುಭಾಗದ ಸಂಭಾಷಣೆಯು ಕನ್ನಡ ಭಾಷೆಯೇ ಆಗಿದೆ ಎಂಬ ಡಾ. ಹುಲ್ಟ್ ರ ಅಭಿಪ್ರಾಯವನ್ನು ಗೋವಿಂದ ಪೈ, ಡಾ. ಶಾಮಾಶಾಸ್ತ್ರಿ, ಆರ್ ನರಸಿಂಹ ಚಾರ್ಯರು ಪರಾಮರ್ಶಿಸಿ ಪುರಸ್ಕರಿಸಿರುತ್ತಾರೆ.

ಕ್ರಿ. ಶ. ಎರಡನೆಯ ಶತಮಾನದ ತಮಿಳಿನ ಅವ್ವೈಯಾರ್‌ದೆಂದು ಹೇಳಲಾಗುವ ತೋಲ್ಕಾಪಿಯಮ್ ಕಾವ್ಯದಲ್ಲಿ ಕನ್ನಡಿಗರನ್ನು ಕರುನಾಟರ್ ಎಂದು ಕರೆಯಲಾಗಿದೆ. ಕ್ರಿ. ಶ. ೪೬೫ರಲ್ಲಿದ್ದ ಇಳಂಗೋ ಅಡಿಗಳ ಶಿಲಪ್ಪದಿಕಾರಮ್‌ನಲ್ಲಿ ಕ್ರಿ. ಶ. ಎರಡನೆಯ ಶತಮಾನದಲ್ಲಿದ್ದ ಚೇರರಾಜ ಶಂಗುಟ್ಟವನು ಕನ್ನಡಿಗರ ನೃತ್ಯವೊಂದನ್ನು ವೀಕ್ಷಿಸಿದನೆಂಬ ಪ್ರಸ್ತಾಪ ಬರುತ್ತದೆ. ಪ್ರೊ. ಎಮ್. ಎಚ್. ಕೃಷ್ಣ ಅವರಿಂದ ಸಂಶೋಧಿಸಲ್ಪಟ್ಟ ಕ್ರಿ. ಶ. ೪೫೦ರ ಕದಂಬ ವಂಶಸ್ಥನಾದ ಕಾಕುತ್ಸವರ್ಮನ ಹಲ್ಮಿಡಿ ಶಾಸನ ಕನ್ನಡದ ಮೊಟ್ಟ ಮೊದಲ ಶಾಸನವಾಗಿದೆ. ಹಲ್ಮಿಡಿ ಶಾಸನದ ಭಾಷೆ ಪೂರ್ವದ ಹಳಗನ್ನಡದ ಗದ್ಯವಾಗಿದ್ದು, ಆ ಕಾಲಕ್ಕಾಗಲೆ ಕನ್ನಡವು ಸಂಸ್ಕೃತ ಭಾಷೆಯ ಗಾಢ ಪ್ರಭಾವಕ್ಕೆ ಒಳಗಾಗಿರುವುದನ್ನು ಕಾಣಬಹುದಾಗಿದೆ. ಭಾಷಾಧ್ಯಯನದ ದೃಷ್ಟಿಯಿಂದ ಇದೊಂದು ಮುಖ್ಯವಾದ ಪ್ರಾಚೀನತಮವಾದ ಕನ್ನಡ ಶಾಸನ. ಇದರಲ್ಲಿ ಕನ್ನಡ ವ್ಯಾಕರಣದ ದೃಷ್ಟಿಯಿಂದ ಗಮನಾರ್ಹ ಕೆಲವು ರೂಪಗಳಿವೆ. ಇದರಲ್ಲಿ ಬರುವ ಎರಿದು ಕೊಟ್ಟಾರ್, ಆದಾನ್ ಎಂಬ ರೂಪಗಳಿಗೆ ಹಳಗನ್ನಡದಲ್ಲಿ ಸಂವಾದಿ ರೂಪಗಳಾದ ಇರಿದು, ಕೊಟ್ಟರು, ಆದನ್, ಮೊದಲಾದವುಗಳಿಗಿಂತ ಭಿನ್ನಾವಾಗಿವೆ. ಪೂರ್ವದ ಹಳಗನ್ನಡ ಅಥವಾ ಪೂರ್ವದ ಕನ್ನಡದ ಪ್ರಾಚೀನ ಭಾಷಾವಸ್ಥೆಯನ್ನು ಇಂಥ ರೂಪಗಳು ಪ್ರತಿನಿಧಿಸುತ್ತವೆ.

ಬರಹಕ್ಕೆ ಹೆಚ್ಚಾಗಿ ಬಳಕೆಯಾಗದ ಕನ್ನಡವನ್ನು ಬರಹಕ್ಕೆ ಪಳಗಿಸಲು ಮಾಡುತ್ತಿದ್ದ ಆರಂಭದ ಪ್ರಯತ್ನವನ್ನು ಹಲ್ಮಿಡಿಶಾಸನದಲ್ಲಿ ಕಾಣುವಂತೆ ಇತರ ಶಾಸನಗಳಲ್ಲೂ ಕಾಣಬಹುದಾಗಿದೆ. ಎಲ್ಲ ಹಳೆಯ ಶಾಸನಗಳು ಭಾಷಾ ಬೆಳವಣಿಗೆಯ ಅಭ್ಯಾಸದ ದೃಷ್ಟಿಯಿಂದ ಮುಖ್ಯವಾಗಿವೆ. ಕ್ರಿ. ಶ. ೫೭೮ರ ಮಂಗಳೇಶನ ಶಾಸನ, ಕ್ರಿ. ಶ. ೬೭೫ರ ಚಿತ್ರವಾಹನನ ಶಾಸನ, ಕ್ರಿ. ಶ. ೫೦೦ರ ತಮ್ಮಟ ಕಲ್ಲಿನ ಶಾಸನ, ಕ್ರಿ. ಶ. ೭೦೦ರ ಶ್ರವಣಬೆಳಗೊಳದ ಶಾಸನ, ಕ್ರಿ. ಶ. ೪೫೦ರ ಕುಬ್ಜನ ತಾಳಗುಂದದ ಸಂಸ್ಕೃತದ ಶಾಸನ, ರವಿಕೀರ್ತಿಯ ಕ್ರಿ. ಶ. ೬೩೪ರ ಐಹೊಳೆಯ ಶಾಸನಗಳಲ್ಲಿ ಕಾವ್ಯಾಂಶದ ಸೊಗಸನ್ನು, ವರದಿಯ ಮಾದರಿಯನ್ನು ಈ ಶಾಸನಗಳಲ್ಲಿ ಕಾಣಬಹುದಾಗಿದೆ. ಇವು ಕನ್ನಡ ಭಾಷೆಯ ಪ್ರಾಚೀನ ರೂಪಗಳನ್ನು ತಿಳಿಸಿಕೊಡುತ್ತವೆ. ಕನ್ನಡ ನಾಡು ಮತ್ತು ಭಾಷೆಯ ವಿವಿಧ ಹಂತಗಳನ್ನು ಕಂಡುಕೊಳ್ಳಲು ಸಹಕಾರಿಯಾಗಿವೆ.

ಕನ್ನಡ ಭಾಷೆಯಲ್ಲಿ ಪೂರ್ವದ ಹಳಗನ್ನಡ ರೂಪವೊಂದಿತ್ತು ಎಂಬುದಕ್ಕೆ ಶಾಸನಗಳು ಸಾಕ್ಷಿ ಒದಗಿಸುತ್ತವೆ. ಹಲ್ಮಿಡಿ ಶಾಸನದಲ್ಲಿ ಬರುವ ನರಿದಾವಿಳೆ ನಾಡೂಳ್, ಕಳ್ದೋನ್, ಕುರುಂಬಿ, ಎಂಬ ರೂಪಗಳು ಶ್ರವಣಬೆಳಗೊಳದ ಶಾಸನದ ಕಳ್ವಪ್ಪನಾ

ವೆಟ್ಟದೊಳ್, ಸ್ವರ್ಗಾಗ್ರಮಾನೇರಿದಾರ್ ರೂಪಗಳು ಪೂರ್ವದ ಹಳಗನ್ನಡದ ರೂಪಗಳಾಗಿವೆ. ಪೂರ್ವದ ಹಳಗನ್ನಡ ಹಳಗನ್ನಡವಾಗಿ, ಹಳಗನ್ನಡ ನಡುಗನ್ನಡವಾಗಿ ಶಿಥಿಲವಾಗುತ್ತ ಬಂದ ಭಾಷಾ ಬೆಳವಣಿಗೆಯ ಚರಿತ್ರೆಯನ್ನು ಅರಿಯಲು ಈ ಶಾಸನಗಳು ಸಹಾಯಕವಾಗಿವೆ.

**ಕವಿರಾಜಮಾರ್ಗ :**

ಭಾಷೆಯ ಪ್ರಾಚೀನ ಇತಿಹಾಸವನ್ನು ಗುರುತಿಸುವಲ್ಲಿ ಕವಿರಾಜಮಾರ್ಗದ ಪಾತ್ರ ಮಹತ್ವದ್ದಾಗಿದೆ. ಭಾಷೆಯಿಲ್ಲದೆ ಸಾಹಿತ್ಯವಿಲ್ಲ. ಕನ್ನಡದ ಪ್ರಥಮ ಉಪಲಬ್ದ ಗ್ರಂಥ ಕವಿರಾಜಮಾರ್ಗ ಕನ್ನಡ ಸಾಹಿತ್ಯದಲ್ಲಿ ಪ್ರಮುಖ ದಾಖಲೆಯಾಗಿದೆ. ಕವಿರಾಜಮಾರ್ಗ ವ್ಯಾಕರಣ ಗ್ರಂಥವಲ್ಲದಿದ್ದರೂ ಅದೊಂದು ಅಲಂಕಾರ ಗ್ರಂಥ. ಕಾವ್ಯಕ್ಕೆ ಭಾಷೆಯೇ ಮಾಧ್ಯಮ. ಕಾವ್ಯದ ಗುಣದೋಷಗಳಲ್ಲಿ ಭಾಷೆಯ ಪಾತ್ರ ಪ್ರಧಾನವಾದುದು. ಕಾವ್ಯದ ಗುಣದೋಷಗಳನ್ನು ವಿವರಿಸುವಾಗ, ವ್ಯಾಕರಣಕ್ಕೆ ಸಂಬಂಧಿಸಿದ ದೋಷಗಳನ್ನು ವಿವರಿಸುವುದೂ ಮುಖ್ಯವಾದ್ದರಿಂದ ಕವಿರಾಜಮಾರ್ಗಕಾರ ಕನ್ನಡ ಭಾಷೆಗೆ, ವ್ಯಾಕರಣಕ್ಕೆ ಸಂಬಂಧಿಸಿದ ವಿಚಾರಗಳ ಬಗ್ಗೆ ಸಂದರ್ಭೋಚಿತವಾಗಿ ವಿವರಿಸಿದ್ದಾನೆ. ಶ್ರೀವಿಜಯ ತನ್ನ ಗ್ರಂಥದಲ್ಲಿ ಗದ್ಯ-ಪದ್ಯ ಕವಿಗಳ ಒಂದು ಪಟ್ಟಿಯನ್ನು ಕೊಟ್ಟಿದ್ದಾನೆ. ಅದು ಗದ್ಯ ಪದ್ಯ ಕವಿಗಳು ಇದ್ದರೆಂಬುದಕ್ಕೂ ಸಾಕ್ಷಿಯಾಗಿದೆ. ವಿಮಳೋದಯ, ನಾಗಾರ್ಜುನ, ಜಯಬಂಧು, ಮುಂತಾದವರು. ಗದ್ಯ ಕವಿಗಳು, ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ, ಲೋಕಪಾಲ ಮೊದಲಾದ ಪದ್ಯಕವಿಗಳ ಉಲ್ಲೇಖವಿದೆ. ಕವಿರಾಜಮಾರ್ಗದಲ್ಲಿ ನಾಡು ನುಡಿಯ, ಕನ್ನಡ ನಾಡಿನ ಸೀಮೆಯ ಮತ್ತು ಕನ್ನಡಿಗರ ಗುಣಗಾನ ಉಲ್ಲೇಖವಿದೆ. ಕನ್ನಡ ನಾಡಿನಲ್ಲಿ ತಿರುಳ್ಗನ್ನಡ ಮತ್ತು ಶಿಷ್ಟಭಾಷೆಯ ಪ್ರದೇಶ ಯಾವುದೆಂದೂ ಹೇಳುತ್ತಾನೆ. ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿದ್ದ ನಾಡಿನಲ್ಲಿ ಕಿಸುವೊಳಲು (ಪಟ್ಟದ ಕಲ್ಲು), ಕೋಪಣ ನಗರ (ಕೊಪ್ಪಳ), ಪುಲಿಗೆರೆ (ಲಕ್ಷ್ಮೇಶ್ವರ), ಒಂಕುಂದ (ಒಕ್ಕುಂದ), ನಡುವಿನ ನಾಡೇ ತಿರುಳ್ಗನ್ನಡ ನಾಡು ಎಂದು ಶ್ರೀವಿಜಯನ ಮತ. ಬಾದಾಮಿಯ ಚಾಲುಕ್ಯರ ಕಾಲದಲ್ಲಿ ರಾಜಕೀಯವಾಗಿ ಕಲಾವೈಭವದಲ್ಲಿ ಈ ಪ್ರದೇಶಗಳು ಮೇಲ್ಪಂಕ್ತಿಯಲ್ಲಿದ್ದವು.

ಕವಿಗಳಿಗೆ ರಾಜಮಾರ್ಗದಂತಿದ್ದ ಕವಿರಾಜಮಾರ್ಗವು ಒಂದು ಅಲಂಕಾರಿಕ ಶಾಸ್ತ್ರ ಗ್ರಂಥವಾಗಿ ಭಾಷೆ, ಇತಿಹಾಸ, ಭೂಗೋಳ, ಸಂಸ್ಕೃತಿ, ಸಾಮಾಜಿಕ ಜೀವನ, ಸೌಂದರ್ಯಶಾಸ್ತ್ರ, ಕಾವ್ಯತತ್ವ, ಛಂದಸ್ಸು, ಅಲಂಕಾರ, ವ್ಯಾಕರಣ, ಜನಪದ ಸಾಹಿತ್ಯದ

ಬಗೆಗಿನ ಮಾಹಿತಿ ಇದೆ. ನಂತರದ ಕಾಲಘಟ್ಟದಲ್ಲಿ ಸಾಹಿತ್ಯ ಮತ್ತು ಭಾಷೆ ವಿಫುಲವಾಗಿ ಬೆಳೆದವು.

ಈ ಎಲ್ಲ ಅಂಶಗಳಿಂದ ಬಹುಕಾಲ ಆಡು ಭಾಷೆಯಲ್ಲಿದ್ದೂ ನಂತರದಲ್ಲಿ ಗ್ರಂಥಸ್ಥವಾದ ಕನ್ನಡ ಭಾಷೆಗೆ ಪ್ರಾಚೀನ ಇತಿಹಾಸವಿರುವುದು ಸ್ಪಷ್ಟವಾಗುತ್ತದೆ. ಕದಂಬ ಕಾಕುತ್ಸವರ್ಮನ ಹಲ್ಮಿಡಿ ಶಾಸನ ಮೊದಲ ಗ್ರಂಥಸ್ಥ ಭಾಷೆಯಾಗಿದೆ.

ಹಾಗೇನೆ ಮತ್ತೊಬ್ಬ ಹಳಗನ್ನಡದ ಕವಿ ಜನ್ನನು ತನ್ನ 'ಅನಂತನಾಥ ಪುರಾಣ'ದಲ್ಲಿ "ರನ್ನಂ ವೈಯಾಕರಣಂ, ಜನ್ನಂ ಮೇಣ್ ಕವಿಗಳೊಳಗೆ ವೈಯಾಕರಣನಂ" ಎಂದು ಹೇಳಿಕೊಂಡಿದ್ದಾನೆ. ಅದರ ಆಧಾರದ ಮೇಲೆ ಹತ್ತನೆಯ ಶತಮಾನದ ರನ್ನನು ಒಂದು ವ್ಯಾಕರಣ ಕೃತಿ ಬರೆದಿರಬಹುದೆಂದು ಊಹಿಸಲಾಗುತ್ತದೆ. ಆದರೆ ಆ ಕೃತಿ ಉಪಲಬ್ಧವಿಲ್ಲ. ನಯಸೇನ ಕೂಡ ಒಂದು ವ್ಯಾಕರಣ ಕೃತಿಯನ್ನು ರಚಿಸಿದ್ದಾನೆಂದು ಇಮ್ಮಡಿ ನಾಗವರ್ಮನ 'ಕರ್ನಾಟಕ ಭಾಷಾಭೂಷಣ'ದಲ್ಲಿ ಉಲ್ಲೇಖವಿದೆ. ಆದರೆ ಆ ಕೃತಿಯೂ ಲಭ್ಯವಿಲ್ಲ ಮತ್ತು ಧರ್ಮಾಮೃತ ಬರೆದ ನಯಸೇನನೇ ಅಥವಾ ಬೇರೊಬ್ಬ ನಯಸೇನ ಇರಬಹುದೋ ಎಂಬ ಜಿಜ್ಞಾಸೆಯೂ ಬಗೆಹರಿದಿಲ್ಲ. ಯಾಕೆಂದರೆ ನಯಸೇನನ ವ್ಯಾಕರಣ ಕೃತಿಯೂ ದೊರೆತಿಲ್ಲದಿರುವುದು. ಒಂದುವೇಳೆ ದೊರೆತಿದ್ದರೆ ಕನ್ನಡದ ಮೊದಲ ವ್ಯಾಕರಣ ಕೃತಿಯಾಗಿರುತ್ತಿತ್ತು. ಇದು ಕನ್ನಡದ ಮತ್ತೊಂದು ನಷ್ಟವೇ.

**ಭಾರತೀಯ ವ್ಯಾಕರಣ ಪರಂಪರೆ :** ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಭಾಷಾವಿಜ್ಞಾನವು ಪ್ರಬುದ್ಧಮಾನಕ್ಕೆ ಬಂದಿದ್ದರೂ ಈ ಹಿಂದೆ ಭಾಷೆಯ ಅಧ್ಯಯನವನ್ನು ವ್ಯಾಕರಣಗಳ ಮಾದರಿಯಲ್ಲಿ ಕಾಣಬಹುದಾಗಿದೆ. ಪುರಾತನ ಕಾಲದಿಂದ ಪ್ರಾಚೀನ ವಿದ್ವಾಂಸರನ್ನು ಆಕರ್ಷಿಸಿದ ಭಾಷಾ ಅಧ್ಯಯನದ ಆರಂಭಿಕ ಬೇರುಗಳನ್ನು ಋಗ್ವೇದದಲ್ಲಿ ಕಾಣಬಹುದಾಗಿದೆ. ವೇದಗಳ ಅಧ್ಯಯನದ ಫಲವಾಗಿ ಸಂಸ್ಕೃತ ವ್ಯಾಕರಣವು ಹುಟ್ಟಿಕೊಂಡಿತು. ಹಾಗಾಗಿ ಸಂಸ್ಕೃತ ವ್ಯಾಕರಣದ ಇತಿಹಾಸವು ವೇದದಷ್ಟೇ ಹಳೆಯದಾಗಿದೆ. ಋಗ್ವೇದದ ಏಳು ಮತ್ತು ಹತ್ತನೆಯ ಅಧ್ಯಾಯದಲ್ಲಿ ಭಾಷಾ ಅಧ್ಯಯನದ ವಿಚಾರ ಬರುತ್ತದೆ. ಋಗ್ವೇದದ ಏಳನೆಯ ಮಂಡಲದಲ್ಲಿ ಭಾಷೆ ದೇವರ ಕೊಡುಗೆ ಎಂಬ ಕಲ್ಪನೆಯಿದೆ. ಇಂತಹ ಕಲ್ಪನೆ ವ್ಯಾಪಕವಾಗಿಯೇ ಇತ್ತು. ಕಾಲಾಂತರದಲ್ಲಿ ದೇವರ ಕೊಡುಗೆಯ ಪರಿಕಲ್ಪನೆಯಿಂದ ಮಾನವ ಪ್ರಯತ್ನವೆ ನಿಜವೆನ್ನುವ ಅಭಿಪ್ರಾಯ ಮೊಳೆಯಿತು. ಪ್ರಾಚೀನ ಭಾರತೀಯ ವಿದ್ವಾಂಸರು ವೇದಗಳ ಪಾಠ ಹಾಗೂ ಉಚ್ಚಾರಣೆಗಳನ್ನು ಶುದ್ಧವಾಗಿಡಲು ಕ್ರಮ ಪಾಠ, ಪದ ಪಾಠ,

ಜಟಾಪಾಠ, ಘನಪಾಠ ಮೊದಲಾದ ವಿಧಾನಗಳನ್ನು ಅನುಸರಿಸುತ್ತಿದ್ದರು. ಸಮಾಸಗಳನ್ನು ಬಿಡಿಸಿ ವ್ಯಾಖ್ಯಾನಿಸುತ್ತಿದ್ದರು. ಇದನ್ನೆಲ್ಲ ಮಾಡಬೇಕಾದರೆ ಅವರು ಭಾಷೆಯನ್ನು ವಿಶ್ಲೇಷಿಸಿರಬೇಕೆಂದು ಸ್ಪಷ್ಟವಾಗುತ್ತದೆ. ಉಚ್ಚಾರಣೆಯ ವಿಧಾನ ಶಬ್ದಗಳನ್ನು ಹೀಗೆ ಬಳಸಬೇಕು ಎನ್ನುವುದಾದರೆ ಅಲ್ಲಿ ಆ ಶಬ್ದದ ಅರ್ಥವನ್ನು ಕುರಿತು ಮನಸ್ಸು ಆಲೋಚಿಸದೆ ಇರಲಾರದು. ಹೀಗೆ ಆಲೋಚಿಸುವ ಹಲವು ಮಾರ್ಗಗಳಲ್ಲಿ ನಡೆದಿದೆ ಎನ್ನುವುದರಲ್ಲಿ ಅನುಮಾನವಿಲ್ಲ. ವೇದಗಳಿಗೆ ದೈವಿಕತೆಯ ಲೇಪನವಿದೆ. ಅಂದರೆ ಶ್ರೇಷ್ಟತೆಯ ವ್ಯಸನವಿರುವುದರಿಂದಲೇ ಅವುಗಳನ್ನು ನಿರ್ದಿಷ್ಟ ವರ್ಗದವರು ಮಾತ್ರ ಅಧ್ಯಯನಮಾಡುವುದು ಮತ್ತು ಉಳಿದ ಯಾವ ವರ್ಗವೂ ಅಧ್ಯಯನಮಾಡಲು ಯೋಗ್ಯವಲ್ಲ ಎಂಬ ಮನಸ್ಥಿತಿಯ ಹಿಂದೆ ಸಾಮಾಜಿಕ ಅಮಾನವೀಯ ಕ್ರೌರ್ಯದಂತೆ ಭಾಷಿಕ ಮೇಲು ಕೀಳುತನದ ವ್ಯವಸ್ಥೆ ಇದೆ.

ವೇದಗಳ ನಂತರ ಮತ್ತೆ ಭಾಷೆಯ ಬಗೆಗೆ ವಿಚಾರ ಬರುವುದು ಪ್ರಾತಿಶಾಖ್ಯಗಳಲ್ಲಿ. ವೇದಗಳ ವಾಚನ ವಿಧಾನ ಹಾಗೂ ಭಾಷೆಯ ಬಗೆಗಿನ ಅಮೂಲ್ಯ ಅಂಶಗಳನ್ನು ಒಳಗೊಂಡಿದೆ. ಪ್ರಾತಿಶಾಖ್ಯಗಳಲ್ಲಿ ಸಂಸ್ಕೃತ ಭಾಷೆಯ ಧ್ವನಿಗಳಲ್ಲಿ ಕ್ರಮಬದ್ದ ಜೋಡಣೆಯನ್ನು ಕಾಣಬಹುದು. ಮೊಟ್ಟ ಮೊದಲ ವ್ಯಾಕರಣ ಪ್ರಬಂಧಗಳಾಗಿ ಇಂದಿಗೂ ನಮಗೆ ಪ್ರಾತಿ ಶಾಖ್ಯಗಳು ಲಭ್ಯವಿವೆ. ಪ್ರಾತಿಶಾಖ್ಯಗಳಲ್ಲಿನ ವೇದೋಚ್ಚಾರಣೆಯ ನಿಯಮ ಹಾಗೂ ವ್ಯಾಕರಣ ವಿಶೇಷಗಳ ಬಗೆಗಿನ ಸೂಚನೆಗಳು, ಅಲ್ಲದೆ ವಿವಿಧ ವಿದ್ವಾಂಸರ ಕೊಡುಗೆಗಳನ್ನು ಸಮೀಕರಿಸಿಕೊಂಡ ಪಾಣಿನಿಯ ಅಷ್ಟಾಧ್ಯಾಯವು ಪರಿಪೂರ್ಣ ರೂಪವನ್ನು ಪಡೆಯಿತು. ಆದರೆ ಈ ರೂಪದ ಮೂಲಭೂತತೆಯೂ ಅಧ್ಯಯನಕ್ಕೆ ತಾನು ಆಯ್ಕೆಮಾಡಿಕೊಂಡದ್ದು ಮಾತ್ರ ಯೋಗ್ಯವೆನ್ನುವ ಧೋರಣೆಯನ್ನು ಅಘೋಷಿತವಾಗಿ ನಿರ್ವಹಿಸಿದಂತಿದೆ. ವೇದಗಳ ವಾಚನ, ಅಧ್ಯಯನದ ವಿಧಾನ, ಸಂಸ್ಕೃತ ಭಾಷೆಯ ಕ್ರಮಬದ್ದ ಜೋಡಣೆ ಇವೆಲ್ಲವೂ ಭಾರತದ ಬಹುಪಾಲು ಜನರ ಭಾಷೆಯಾಗಿರಲಿಲ್ಲ ಅಥವಾ ಹಾಗೆ ಆಗಕೂಡದು ಎಂಬ ಪಾವಿತ್ರ್ಯದ ದೃಷ್ಟಿಯಿದೆ. ಹೀಗೆ ಮಾಡಿದ್ದರಿಂದ ಈ ವ್ಯಾಕರಣಗಳು ಜನಸಾಮಾನ್ಯರಿಂದ ದೂರಸರಿಯಲು ಕಾರಣವಾಯಿತು ಅಥವಾ ಅದು ಜನಸಾಮಾನ್ಯರನ್ನು ಒಳಗೊಳ್ಳದ್ದು ಎಂಬ ತೀರ್ಮಾನಕ್ಕೆ ಬಂದಿತು. ಆ ಮೂಲಕ ವ್ಯಾಕರಣದ ಮಾದರಿಯ ಆರಂಭವಾದ ಭಾಷೆ ಮತ್ತು ವೇದ, ಪುರಾಣಗಳು ದೂರವೆ ಉಳಿದವು ಅಥವ ಇನ್ನೂ ಅರ್ಥಮಾಡಿಕೊಳ್ಳುವುದೇ ಒಂದು ಸಾಹಸಮಯಗೊಳಿಸಿದ್ದು. ಅದೇನೆ ಇರಲಿ ಪ್ರಾಚೀನ ವ್ಯಾಕರಣ ಮಾದರಿಯ ರೂಪ ಪಡೆದ ನೆಲೆಗಳು ಶ್ರೇಷ್ಟವೆನ್ನಿಸಿಕೊಂಡದ್ದು ನಿಜ. ಆದರೆ ಅವು ಕಾಲಾಂತರದಲ್ಲಿ

ಮೂಲೆಗುಂಪಾಗಲು ಆ ಮಾದರಿಯೇ ಶಾಪವಾಯಿತು. ಪಾಣಿನಿಯ ನಂತರದ ವ್ಯಾಕರಣಕಾರರೂ ಅದೇ ಮಾರ್ಗದಲ್ಲಿ ನಡೆದದ್ದು. ಆದರೆ ವ್ಯಾಕರಣ ಕ್ಷೇತ್ರಮಾತ್ರ ನಿಜಕ್ಕೂ ಬೆಳೆಯಲು ಕಾರಣವಾಯಿತು. ಇದರಿಂದ ಭಾಷೆಯನ್ನು ಕುರಿತು ಅಧ್ಯಯನದ ಒಂದು ದೊಡ್ಡ ಶಾಖೆಯೇ ಉಗಮವಾಯಿತು.

ಪ್ರಾತಿಶಾಖ್ಯಗಳ ತರುವಾಯ ನಮಗೆ ಭಾಷೆಯ ಬಗೆಗಿನ ವಿಚಾರ ಸಿಕ್ಕುವುದು ಕ್ರಿ. ಶ. ಪೂ. ೮ನೆಯ ಶತಮಾನದಲ್ಲಿ ಪ್ರಸಿದ್ಧ ನಿಘಂಟುಕಾರ ಯಾಸ್ಕನಿಂದ. ಯಾಸ್ಕನೇ ಪ್ರಥಮ ಭಾಷಾಶಾಸ್ತ್ರಜ್ಞನಾಗಿದ್ದಾನೆ. ಯಾಸ್ಕ ಅನುಸರಿಸಿರುವ ಮಾದರಿ ಮೌಲ್ಯಯುತವಾಗಿದ್ದು ಈತನು ವೇದಗಳಲ್ಲಿ ಬರುವ ಪದಗಳಿಗೆ ನಿಷ್ಪತ್ತಿ ಹೇಳಿದ್ದು ಸಂದೇಹ ಬಂದ ಕಡೆ ಅದನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾನೆ. ಯಾಸ್ಕನ ನಂತರ ಸಂಸ್ಕೃತದಲ್ಲಿ ಸುಮಾರು ೧೪ ವ್ಯಾಕರಣ ಸಂಪ್ರದಾಯಗಳು ಬೆಳೆದು ಬಂದಿದ್ದು, ನೂರಾರು ವ್ಯಾಕರಣಗಳ ಸಾವಿರಾರು ವ್ಯಾಖ್ಯಾನಗಳ ಒಂದು ಪರಂಪರೆಯು ಸೃಷ್ಟಿಯಾಗಿದೆ. ಯಾಸ್ಕನ ನಂತರದ ಸುಪ್ರಸಿದ್ಧ ವ್ಯಾಕರಣಕಾರನೆಂದರೆ ಪಾಣಿನಿ. ಯಾಸ್ಕ ಮತ್ತು ಪಾಣಿನಿಯರ ಮಧ್ಯ ಆಪಿಸಲಿ, ಕಾಶಕೃತ್ಸ್ನ ಮುಂತಾದ ಪ್ರಮುಖ ವ್ಯಾಕರಣಕಾರರು ವ್ಯಾಕರಣ ಗ್ರಂಥಗಳನ್ನು ಬರೆದಿದ್ದಾರೆ. ಐಂದ್ರ ಎಂಬ ಹೆಸರಿನ ವ್ಯಾಕರಣ ಶಾಖೆಯಲ್ಲಿ ಕಾಶಕೃತ್ಸ್ನನದೇ ಬಹು ದೊಡ್ಡ ಹೆಸರು ಎಂಬುದು ತಿಳಿದುಬರುತ್ತದೆ.

ಯಾಸ್ಕನ ತರುವಾಯ ಒಂದು ಶತಮಾನದ ನಂತರ ಬರುವ ಪಾಣಿನಿ ಆ ಕಾಲದಲ್ಲಿ ವ್ಯಾವಹಾರಿಕ ಭಾಷೆಯಾಗಿದ್ದ ಸಂಸ್ಕೃತಕ್ಕೆ ವ್ಯಾಕರಣ ಬರೆದ. ನಾಲ್ಕುಸಾವಿರ ಸೂತ್ರಗಳಿಂದ ಕೂಡಿದ ಅಷ್ಟಾಧ್ಯಾಯಿ ಎಂಬ ಬೃಹತ್ ಗ್ರಂಥ ಬರೆದ. ಕನ್ನಡ ವ್ಯಾಕರಣ ಗ್ರಂಥಗಳ ಮೇಲೂ ಅಷ್ಟಾಧ್ಯಾಯಿಯ ಪ್ರಭಾವವಿದೆ. ಭಾಷಾವಿಜ್ಞಾನಿಗಳು ಪಾಣಿನಿಯ ಅಷ್ಟಾಧ್ಯಾಯಿ ಗ್ರಂಥವನ್ನು ಮಾನವ ಪ್ರತಿಭೆಯ ಮಹಾಸ್ಮಾರಕಗಳಲ್ಲಿ ಒಂದು ಎಂದು ಪ್ರಶಂಸಿದ್ದಾರೆ.

ಪಾಣಿನಿಯ ವ್ಯಾಕರಣವು ಆಧುನಿಕ ಭಾಷಾವಿಜ್ಞಾನಿಗಳ ಮಾದರಿಯ ವರ್ಣನಾತ್ಮಕ ವ್ಯಾಕರಣವಾಗಿರದೆ ನಿಯಮಾತ್ಮಕ ವ್ಯಾಕರಣವಾಗಿತ್ತು. ಈತನು ಸಂಸ್ಕೃತಕ್ಕೆ ಅನುಲಂಘನೀಯವಾದ ನಿಯಮಗಳನ್ನು ಹಾಕಿದ. ಪರಿಣಾಮವಾಗಿ ವ್ಯಾವಹಾರಿಕ ಭಾಷೆಯಾಗಿದ್ದ ಸಂಸ್ಕೃತವು ಕ್ರಮೇಣ ನಿಂತುಹೋಗಿ ಕೇವಲ ಗ್ರಂಥಸ್ಥ ಭಾಷೆಯಾಗಿ ಉಳಿದು ಮೃತ ಭಾಷೆಯಾಯಿತು.

ಪಾಣಿನಿಯ ನಂತರ ಬಂದ ವಯಾಕರಣಿಗಳು ಅವನ ಮಾರ್ಗವನ್ನೇ ತುಳಿದರು. ಕ್ರಿ. ಪೂ. ಸುಮಾರು ೩೫೦ ರಲ್ಲಿದ್ದ ಕಾತ್ಯಾಯನ, ಕ್ರಿ. ಶ. ಸುಮಾರು ೧೫೦ ರಲ್ಲಿದ್ದ ಪತಂಜಲಿ, ಕ್ರಿ. ಶ. ಸುಮಾರು ೪೭೦ ರಲ್ಲಿದ್ದ ಚಂದ್ರಗೋಮಿ, ಕ್ರಿ. ಶ. ಸುಮಾರು ೬೫೦ ರಲ್ಲಿದ್ದ ವಿಜಯಾದಿತ್ಯ, ಕ್ರಿ. ಶ. ಸುಮಾರು ೭೫೦ ರಲ್ಲಿದ್ದ ಜಿನೇಂದ್ರ ಬುದ್ಧಿ, ಕ್ರಿ. ಶ. ಸುಮಾರು ೧೧೧ ರಲ್ಲಿದ್ದ ಹರದತ್ತ, ಕ್ರಿ. ಶ. ೬೫೦ ರಲ್ಲಿದ್ದ ಭತೃಹರಿ, ಕ್ರಿ. ಶ. ೧೩೦೦ ರಲ್ಲಿದ್ದ ಕಯ್ಯಟ, ಕ್ರಿ. ಶ. ಸುಮಾರು ೧೬೩೦ ರಲ್ಲಿದ್ದ ಭಟ್ಟೋಜಿ ಮುಂತಾದವರು. ಪಾಣಿನಿಯ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬಂದರು. ಪಾಣಿನಿಯ ಅಷ್ಟಾಧ್ಯಾಯಿಗೆ ಪತಂಜಲಿ ಭಾಷ್ಯ ಬರೆದುದರಿಂದ ಅದರ ಮಹತ್ವ ಹೆಚ್ಚಾಯಿತು.

ಭಾರತದ ವ್ಯಾಕರಣಗಳ ಇತಿಹಾಸದಲ್ಲಿ ಪಾಣಿನಿ ಕಾತ್ಯಾಯನ ಪತಂಜಲಿ ಮೂರು ಪ್ರಮುಖ ಘಟ್ಟಗಳು ಅಥವಾ ಪ್ರವಾಹಗಳು ಎಂದು ಗುರುತಿಸಲಾಗಿದೆ. ಪತಂಜಲಿಯ ನಂತರ ಅನೇಕ ವ್ಯಾಖ್ಯಾನಗಳು ಅವುಗಳ ಮೇಲೆ ಪ್ರತಿವ್ಯಾಖ್ಯಾನ ಹುಟ್ಟಿಕೊಂಡವು. ಜಯಾದಿತ್ಯ ಮತ್ತು ವಾಮನರ ಕೌಶಿಕಾವೃತ್ತಿ, ಕಯ್ಯಟನ ಪ್ರದೀಪ, ಭಟ್ಟೋಜಿ ದೀಕ್ಷಿತನ ಸಿದ್ಧಾಂತ ಕೌಮುದಿ, ಜೈನ ಸನ್ಯಾಸಿ ಹೇಮಚಂದ್ರನ ಸಂಸ್ಕೃತದ ಶಬ್ದಾನುಶಾಸನ ಗಮನಾರ್ಹ ಪ್ರಾಚೀನ ವ್ಯಾಕರಣ ಕೃತಿಗಳಾಗಿವೆ. ಜಯಾದಿತ್ಯ ಮತ್ತು ವಾಮನರ ಕೌಶಿಕಾವೃತ್ತಿಯು ಅಷ್ಟಾಧ್ಯಾಯಿಯ ಮೇಲೆ ಮೂಡಿ ಬಂದ ವ್ಯಾಖ್ಯಾನ ಗ್ರಂಥವಾದರೆ ಕೈಯಟನ ಪ್ರದೀಪವು, ಪತಂಜಲಿಯ ಮಹಾಭಾಷ್ಯದ ಮೇಲೆ ಮೂಡಿಬಂದ ಗ್ರಂಥವಾಗಿದೆ. ಭಟ್ಟೋಜಿ ದೀಕ್ಷಿತನ ಸಿದ್ಧಾಂತ ಕೌಮುದಿ, ಪಾಣಿನಿಯ ಸೂತ್ರಗಳ ವ್ಯವಸ್ಥಾಪನೆಯಾಗಿದೆ. ಹೀಗೆ ಸಂಸ್ಕೃತ ವ್ಯಾಕರಣ ಪರಂಪರೆಯು ಬೆಳೆದು ಭಾರತದ ಇತರ ಭಾಷೆಗಳ ಮೇಲೆ ಪ್ರಭಾವವನ್ನು ಬೀರಿದ ಹಾಗೆ ಜಗತ್ತಿನ ಭಾಷಾಧ್ಯಯನಕ್ಕೆ ನಾಂದಿಯನ್ನು ಹಾಡಿತು. ಜಗತ್ತಿನ ಹಲವು ಭಾಷಿಕರು ತಮ್ಮ ತಮ್ಮ ಭಾಷೆಯನ್ನು ಕುರಿತು ವ್ಯಾಕರಣ ರಚಿಸಲು ಕಾರಣವಾದಂತೆ, ಸಂಸ್ಕೃತ ಭಾಷೆಯ ಕುರಿತು ಕುತೂಹಲ ಮೂಡಿ ಭಾರತೀಯ ಭಾಷೆಗಳತ್ತ ವಿದೇಶೀಯ ಹಲವು ವಿದ್ವಾಂಸರು ಅಧ್ಯಯನಕ್ಕೆ ತೊಡಗಲೂ ಕಾರಣರಾದರು.

**ಕನ್ನಡ ವ್ಯಾಕರಣ ಪರಂಪರೆ :**

ಸಂಸ್ಕೃತ ವ್ಯಾಕರಣಕ್ಕೆ ಪಾಣಿನಿ ಇದ್ದಂತೆ ಕನ್ನಡ ವ್ಯಾಕರಣಕ್ಕೆ ಕೇಶಿರಾಜನೇ ಅಗ್ರಗಣ್ಯ. ಕೇಶಿರಾಜನಿಗಿಂತ ಮೊದಲೆ ಕನ್ನಡದಲ್ಲಿ ಅನೇಕ ವ್ಯಾಕರಣ ಗ್ರಂಥಗಳು ದೊರೆತಿದ್ದರೂ ಅವು ಕೇಶಿರಾಜನ ಶಬ್ದಮಣಿದರ್ಪಣದಷ್ಟು ವೈಜ್ಞಾನಿಕ ದೃಷ್ಟಿಯಿಂದ

ಕೂಡಿರಲಿಲ್ಲ. ಕನ್ನಡ ವ್ಯಾಕರಣದ ಮೇಲೆ ಸಂಸ್ಕೃತ ವ್ಯಾಕರಣದ ಗಾಢ ಪ್ರಭಾವವಿದೆ. ಸಂಸ್ಕೃತ ವ್ಯಾಕರಣ ಮಾದರಿಯಲ್ಲಿ ಕನ್ನಡ ವ್ಯಾಕರಣ ರಚಿಸಿದ್ದರಿಂದ ಇದು ಸ್ಪಷ್ಟವಾಗುತ್ತದೆ. ಕನ್ನಡ ವ್ಯಾಕರಣ ಪರಂಪರೆಯನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ರೀತಿಯಾಗಿ ವಿಂಗಡಿಸಬಹುದು. ಒಂದು ಪ್ರಾಚೀನ ವ್ಯಾಕರಣ ಗ್ರಂಥಗಳು. ಇವುಗಳ ಮೇಲೆ ಸಂಸ್ಕೃತ ವ್ಯಾಕರಣ ಗ್ರಂಥಗಳ ಪ್ರಭಾವ ಗಾಢವಾಗಿದೆ. ಎರಡು : ಆಧುನಿಕ ಕನ್ನಡ ವ್ಯಾಕರಣ/ಭಾಷಾವಿಜ್ಞಾನದ ಈ ಮಾದರಿಯ ಮೇಲೆ ಪಾಶ್ಚಿಮಾತ್ಯ ಭಾಷಾವಿಜ್ಞಾನದ ಪ್ರಭಾವವಿದ್ದು. ಇವರಿಬ್ಬರಲ್ಲೂ ಭಾಷೆಯನ್ನು ನೋಡುವ ದೃಷ್ಟಿಯಲ್ಲಿ ಭಿನ್ನತೆಗಳಿರುವುದನ್ನು ಕಾಣಬಹುದಾಗಿದೆ.

**ಪ್ರಾಚೀನ ಕನ್ನಡ ವ್ಯಾಕರಣ ಗ್ರಂಥಗಳು :**

ಕನ್ನಡ ವ್ಯಾಕರಣದ ಪ್ರಾಚೀನತೆ ಆರಂಭವಾಗುವುದು ಉಪಲಬ್ದ ಮೊದಲ ಕೃತಿ ಶ್ರೀವಿಜಯನ ಕವಿರಾಜಮಾರ್ಗದಿಂದ. ನಂತರದಲ್ಲಿ ಲಭ್ಯವಾಗುವುದು ನಾಗವರ್ಮನ ಕರ್ನಾಟಕ ಭಾಷಾಭೂಷಣ ಮತ್ತು ಆತನ ಕಾವ್ಯಾವಲೋಕನದ ಮೊದಲ ಭಾಗವಾದ ಶಬ್ದಸ್ಮೃತಿ. ಕೇಶಿರಾಜನ ಶಬ್ದಮಣಿದರ್ಪಣ ಮತ್ತು ಭಟ್ಟಾಕಳಂಕನ ಶಬ್ದಾನುಶಾಸನ ಇವು ನಾಲ್ಕು ಪ್ರಾಚೀನ ಉಪಲಬ್ದ ವ್ಯಾಕರಣ ಗ್ರಂಥಗಳು. ಇನ್ನು ಎಷ್ಟೋ ವ್ಯಾಕರಣ ಗ್ರಂಥಗಳು ರಚನೆಯಾಗಿದ್ದರೂ ಅವು ಯಾವೂ ಈಗ ಲಭ್ಯವಿಲ್ಲ.

**ಕವಿರಾಜಮಾರ್ಗ :**

ಕನ್ನಡ ವ್ಯಾಕರಣ ಪರಂಪರೆ ಆರಂಭವಾಗುವುದು ಈ ಕೃತಿಯಿಂದಲೆ. ಕನ್ನಡ ಭಾಷೆ ಮತ್ತು ಇತಿಹಾಸದ ಅಧ್ಯಯನದ ದೃಷ್ಟಿಯಿಂದ ಮಹತ್ವ ಪೂರ್ಣ ಕೃತಿಯಾಗಿದೆ. ಮೂಲತಹ ಇದೊಂದು ಅಲಂಕಾರ ಪ್ರಧಾನ ಗ್ರಂಥವಾದರೂ ವ್ಯಾಕರಣ ವಿಚಾರಗಳು ಗೋಚರಿಸುತ್ತವೆ. ಭಾಷೆಯ ಸ್ವರೂಪ ಮತ್ತು ವ್ಯಾಕರಣಾಂಶಗಳ ಉಲ್ಲೇಖ ಇಲ್ಲಿ ಕಂಡುಬರುತ್ತದೆ. ನಾಗವರ್ಮ ಮತ್ತು ಕೇಶಿರಾಜ ತಮ್ಮ ಕೃತಿಗಳಲ್ಲಿ ಕವಿರಾಜಮಾರ್ಗಕಾರನ ಅಂಶಗಳನ್ನು ಉಲ್ಲೇಖಿಸಿರುವುದು ಕಂಡು ಬರುತ್ತದೆ. ಶ್ರೀವಿಜಯನು 'ಪಳಗನ್ನಡಮಂ ಪೊಲಗೆಡಸಿ ನುಡಿವರ್' ಎಂಬ ಹೇಳಿಕೆಯನ್ನು ಗಮನಿಸಿದರೆ ಅವನು ಕನ್ನಡದ ಅವಸ್ಥಾಭೇದಗಳನ್ನು ಗಮನಿಸಿರುವುದು ಸ್ಪಷ್ಟ. ಹಿರಿಯರ ಶ್ರೇಷ್ಠ ಶೈಲಿಯನ್ನು ಕೆಲವರು ಕೆಡಿಸುತ್ತಿರುವರೆಂಬ ಆಕ್ಷೇಪಣೆ ಈ ವಾಕ್ಯದಲ್ಲಿದೆ. ಕಾವೇರಿಯಿಂದ ಗೋದಾವರಿಯವರೆಗೆ ಹಬ್ಬಿದ ಕನ್ನಡ ನಾಡಿನಲ್ಲಿ ಕೊಪಣ ನಗರ (ಕೊಪ್ಪಳ), ಪುಲಿಗೆರೆ (ಲಕ್ಷ್ಮೇಶ್ವರ), ಕಿಸುವಳಲ್(ಪಟ್ಟದ ಕಲ್ಲು),

ಒಕ್ಕುಂದ ಪ್ರದೇಶವು ತಿರುಳುಗನ್ನಡ (ಶಿಷ್ಟಭಾಷೆ) ಪ್ರದೇಶವೆಂದು ಹೇಳುವ ಮೂಲಕ ತಿರುಳುಗನ್ನಡ ಪ್ರದೇಶದ ಮೇರೆ/ಸೀಮೆಯನ್ನು/ ಪ್ರಾದೇಶಿಕತೆಯನ್ನು ಶ್ರೀವಿಜಯ ಸೂಚಿಸಿದ್ದಾನೆ. ಭಾಷಾಶೈಲಿಗೆ ಸಂಬಂಧಿಸಿದಂತೆ ದಕ್ಷಿಣೋತ್ತರ ಮಾರ್ಗದ ಬಗೆಗೂ, ಕಾರಕ ವಿಷಯ, ವಚನ ವಿಚಾರ, ಕ್ರಿಯಾವಿಶೇಷಣ ಪ್ರಯೋಗ ವಿಶೇಷಣ, ವಿಶೇಷ ಪದಗಳ, ಸಮಾಸ, ಅರಿಸಮಾಸ, ಸಮ ಸಂಸ್ಕೃತ ಮುಂತಾದ ಅನೇಕ ವ್ಯಾಕರಣ ವಿಷಯಗಳ ಮಾಹಿತಿ ಇಲ್ಲಿ ದೊರೆಯುತ್ತದೆ. ಭಾಷೆಯ ಕುರಿತು, ನಾಡಿನ ವ್ಯಾಪ್ತಿ, ಜನಜೀವನ ಮುಂತಾದ ಹಲವು ವಿಷಯಗಳನ್ನು ಹೇಳುವುದು ಈತನ ಉದ್ದೇಶವಾದದ್ದರಿಂದ ಇದೊಂದು ಪೂರ್ಣವ್ಯಾಕರಣ ಕೃತಿ ಎನ್ನಲಾಗದು. ಆದರೂ ಭಾಷೆಯನ್ನು ಕುರಿತು ತನ್ನ ಕಾಲಘಟ್ಟದ ಹಲವು ಮಹತ್ವದ ಅಂಶಗಳನ್ನು ತಿಳಿಸಿದ್ದಾನೆ.

ಕನ್ನಡ ಪದಗಳ ಜೊತೆಯಲ್ಲಿ ಸಂಸ್ಕೃತ ಪದಗಳನ್ನು ಹೇಗೆ ಪ್ರಯೋಗಿಸಬಹುದು, ಹೇಗೆ ಪ್ರಯೋಗಿಸಬಾರದು ಎಂಬುದನ್ನು ಕುರಿತು ವಿವರಿಸಲಾಗಿದೆ. ಸಮಾಸದಲ್ಲಿ ಸಂಸ್ಕೃತ ಕನ್ನಡಗಳನ್ನು ತಿಳಿಯದೆ ಬೆರೆಸಿದರೆ, ಕುದಿಯುವ ಹಾಲಿಗೆ ಮಜ್ಜಿಗೆಯ ಹನಿಗಳನ್ನು ಬೆರೆಸಿದಂತಾಗುತ್ತದೆ ಎಂದು ಹೇಳಿದ್ದಾನೆ. ಹಾಗೇನೆ ಸಮಸಂಸ್ಕೃತ ಎಂಬ ಪದವನ್ನು ಬಳಸಿದ್ದಾನೆ. ಆದರೆ ಆತನ ನಂತರದ ವ್ಯಾಕರಣಕಾರರು ಈ ಕುರಿತು ವಿವರಣೆ ನೀಡಿದ್ದಾರೆ. ಭಟ್ಟಾಕಳಂಕ ಆ ಕುರಿತು ಒಂದು ಪ್ರಕರಣವನ್ನೇ ಬರೆದಿದ್ದಾನೆ. ಸಂಧಿ ಕಾರ್ಯಕ್ಕೆ ಸಂಬಂಧಿಸಿದಂತೆ, ಶ್ರುತಿ ದುಷ್ಟ, ಶ್ರುತಿ ಕಷ್ಟ, ವಿಸಂಧಿ, ವಿರೂಪ ಸಂಧಿಗಳ ವಿಚಾರವಾಗಿ ದೋಷಗಳನ್ನು ತಿಳಿಸಿದ್ದಾನೆ. ಹೀಗೆ ಕವಿರಾಜಮಾರ್ಗಕಾರ ಭಾಷೆಯನ್ನು ಕುರಿತು ಹಲವು ಉಪಯುಕ್ತ ಅಂಶಗಳನ್ನು ವಿವರಿಸಿದ್ದಾನೆ.

**ನಾಗವರ್ಮನ ಶಬ್ದಸ್ಮೃತಿ :**

ಶಬ್ದಸ್ಮೃತಿ ನಾಗವರ್ಮನ ಕಾವ್ಯಾವಲೋಕನದ ಮೊದಲ ಭಾಗವಾಗಿದೆ. ಹಾಗಾಗಿ ಅದೊಂದು ಸ್ವತಂತ್ರ ಕೃತಿಯಲ್ಲ. ಕವಿರಾಜಮಾರ್ಗದ ನಂತರ ಉಪಲಬ್ಧ ಕನ್ನಡ ವ್ಯಾಕರಣದ ಕೈಪಿಡಿಯಂತಿದೆ. ವ್ಯಾಕರಣದ ವಿಸ್ತಾರವಾದ ವಿವರಣೆಯಿದೆ. ಶಬ್ದಸ್ಮೃತಿ ಕನ್ನಡದಲ್ಲಿ ರಚನೆಯಾದದ್ದರಿಂದ ಸಂಸ್ಕೃತಗಿಂದ ಭಿನ್ನ ವ್ಯಾಕರಣಾಂಶಗಳನ್ನು ಹೊಂದಿದೆ. ಇದರಲ್ಲಿ ಸಂಜ್ಞಾ, ಸಂಧಿ, ನಾಮ, ಸಮಾಸ, ತದ್ಧಿತ, ಆಖ್ಯಾತ ಎಂಬ ಆರು ಪ್ರಕರಣಗಳು ೯೬ ಸೂತ್ರಗಳಿವೆ. ಈ ಸೂತ್ರಗಳಿಂದಲೇ ನಾಗವರ್ಮನು ಕನ್ನಡ ವ್ಯಾಕರಣ ಪ್ರಕ್ರಿಯೆಗಳನ್ನು ಪೂರ್ವಕವಿ ಪ್ರಯೋಗಗಳ ಮೂಲಕ ಉದಾಹರಣೆಯೊಂದಿಗೆ ವಿವರಿಸಿದ್ದಾನೆ. ಪೂರ್ವ ಕವಿಗಳ ರಚನೆಗಳನ್ನು

ಆಧರಿಸಿ ಶಾಸ್ತ್ರಗಳನ್ನು ಅದರಲ್ಲೂ ವ್ಯಾಕರಣ ಶಾಸ್ತ್ರವನ್ನು ರಚಿಸುವುದು ನಮ್ಮ ಶಾಸ್ತ್ರಕಾರರ ಪದ್ಧತಿ. ನಾಗವರ್ಮ ಕೂಡ ಇದಕ್ಕೆ ಹೊರತಲ್ಲ. ನಾಗವರ್ಮ ನಿದರ್ಶನ ಪದ್ಯಗಳನ್ನು ಪೂರ್ವಕವಿಗಳಿಂದಲೇ ಆಯ್ದು ಕೊಟ್ಟಿರುವುದರಲ್ಲಿ ಈ ಅಂಶವು ಸ್ಪಷ್ಟವಾಗಿ ಕಾಣುತ್ತದೆ. ಹಾಗೇನೆ ಈತ ತನ್ನ ಕಾಲದ ಜನರ ಆಡು ನುಡಿಯನ್ನು ಗಮನಿಸಿರುವುದು ವಿಶೇಷ.

ನಾಗವರ್ಮನು ತನ್ನನ್ನು 'ಅಭಿನವಶರ್ವವರ್ಮ'ನೆಂದು ಕರೆದುಕೊಂಡಿದ್ದಾನೆ. ಆದ್ದರಿಂದ ಶರ್ವವರ್ಮನ 'ಕಾತಂತ್ರವ್ಯಾಕರಣ'ದಿಂದ ಅವನು ಉಪಕೃತನಾಗಿರುವುದು ಸ್ಪಷ್ಟವಾಗುತ್ತದೆ. ಸೂತ್ರಗಳನ್ನು ನಿರೂಪಿಸುವಾಗಲೆಲ್ಲ ಪಾಣಿನಿಯ ಪದ್ದತಿಯನ್ನು ಹಿಡಿಯದೆ ಕಂದ ಪದ್ಯಗಳನ್ನು ಬಳಸಿರುವುದು, ಸಮಾನಾಕ್ಷರ, ಸಂಧ್ಯಕ್ಷರ, ನಾಮಿಗಳಂತಹ ಸಂಜ್ಞೆಗಳನ್ನು ಬಳಸಿರುವುದು ಇವುಗಳಿಂದ ಇದು ದೃಡಪಡುತ್ತದೆ. ಅಂತೂ ಸಂಸ್ಕೃತದ ಪ್ರಭಾವ ಇಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಕನ್ನಡದಲ್ಲಿ ಮಹಾಪ್ರಾಣಗಳಿಲ್ಲವೆಂದು ಹೇಳಲು ಅವನ ಮನಸ್ಸು ಒಪ್ಪುವುದಿಲ್ಲ. ಆ ಕಾರಣವಾಗಿಯೇ ಈತ ಹೇಳುವುದು ಸಂಖ್ಯೆಗಳನ್ನು ಹೇಳುವಾಗ ಮತ್ತು ಅನುಕರಣ ಶಬ್ದಗಳ ಸಂದರ್ಭದಲ್ಲಿ ಬರುತ್ತವೆ ಎನ್ನುತ್ತಾನೆ. ಹೀಗಿದ್ದೂ ಕನ್ನಡದ ವೈಶಿಷ್ಟ್ಯಗಳನ್ನು ಅವನು ಕಡೆಗಣಿಸಿಲ್ಲ. ಜಾತ್ಯೇಕ ವಚನ, ವಿಭಕ್ತಿಪಲ್ಲಟಗಳಂತಹವು ಕನ್ನಡಕ್ಕೆ ವಿಶಿಷ್ಟವಾದಂತಹವು ಎಂದಿದ್ದಾನೆ. ಬೇರೊಂದು ಪುಸ್ತಕದ ಅಂಗವಾಗಿದ್ದರೂ ಒಂದು ಪೂರ್ಣ ಪ್ರಮಾಣದ ವ್ಯಾಕರಣವಾಗಿಯೇ ಇದೆ.

**ನಾಗವರ್ಮನ ಕರ್ನಾಟಕ ಭಾಷಾಭೂಷಣ :**

ಕನ್ನಡ ವ್ಯಾಕರಣವನ್ನು ಪ್ರಥಮವಾಗಿ ಕನ್ನಡ ಸಂಸ್ಕೃತಗಳಲ್ಲಿ ರಚಿಸಿದ ಶ್ರೇಯಸ್ಸು ನಾಗವರ್ಮನದು. ಕನ್ನಡದ ಆದ್ಯ ವ್ಯಾಕರಣಕಾರನಾಗಿದ್ದಾನೆ. ಈತನ ಕರ್ನಾಟಕ ಭಾಷಾಭೂಷಣ ಕನ್ನಡದ ಆದಿ ವ್ಯಾಕರಣ ಗ್ರಂಥ. ಈತನಿಂದಾಗಿ ಕನ್ನಡ ವ್ಯಾಕರಣವೊಂದು ಸಂಸ್ಕೃತದಲ್ಲಿ ಮೂಡಿಬರುವಂತಾಯಿತು. ಉಭಯ ಭಾಷಾ ಪಂಡಿತನಾದ ನಾಗವರ್ಮ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಎರಕಹೊಯ್ದಿದ್ದಾನೆ. ಈತನ ಈ ಪರಂಪರೆಯನ್ನು ಮುಂದೆ ಬಂದ ವೈಯಾಕರಣಿಗಳು ಅನುಸರಿಸಿದರು. ನಾಗವರ್ಮನ ಪ್ರಭಾವದಿಂದ ಭಟ್ಟಾಕಳಂಕನು ಸಂಸ್ಕೃತದಲ್ಲಿ ಶಬ್ದಾನುಶಾಸನ ಎಂಬ ಕನ್ನಡ ವ್ಯಾಕರಣ ಗ್ರಂಥವನ್ನು ರಚಿಸಿದ. ಕೇಶಿರಾಜನ ಶಬ್ದಮಣಿದರ್ಪಣದ ಮೇಲೂ ನಾಗವರ್ಮನ ಪ್ರಭಾವವಿದೆ. ನಾಗವರ್ಮನ ಕರ್ನಾಟಕ ಭಾಷಾಭೂಷಣದಲ್ಲಿ ಸಂಜ್ಞಾ ವಿಧಾನ, ಸಂಧಿ ವಿಧಾನ, ವಿಭಕ್ತಿ ವಿಧಾನ, ಕಾರಕ ವಿಧಾನ, ಶಬ್ದರೀತಿ ವಿಧಾನ,

ಸಮಾಸ ವಿಧಾನ, ತದ್ಧಿತ ವಿಧಾನ, ಆಖ್ಯಾತ ನಿಯಮ ವಿಧಾನ, ಅವ್ಯಯ ನಿರೂಪಣಾ ವಿಧಾನ, ನಿಪಾತ ನಿರೂಪಣ ವಿಧಾನ ಎಂಬ ಹತ್ತು ಪರಿಚ್ಛೇದಗಳಿದ್ದು, ಸಂಸ್ಕೃತ ವ್ಯಾಕರಣಗಳ ಸೂತ್ರ ಪದ್ಧತಿಯನ್ನು ಅನುಸರಿಸಿದ ಈ ಕೃತಿಯಲ್ಲಿ ಒಟ್ಟು ೨೮೦ ಸೂತ್ರಗಳನ್ನು ಒಳಗೊಂಡಿದೆ. ಸಂಕ್ಷಿಪ್ತ ಸೋಪಜ್ಞ ಸಂಸ್ಕೃತ ವೃತ್ತಿಯ ಜೊತೆಗೆ ಕನ್ನಡ ಪ್ರಯೋಗಗಳಲ್ಲಿ ರಚಿತವಾದ ಒಂದು ಪ್ರಾಚೀನ ಹಳಗನ್ನಡ ವ್ಯಾಕರಣವಾಗಿದ್ದು, ಶಬ್ದಸ್ಮೃತಿಗಿಂತ ಹೆಚ್ಚಿನ ವಿವರಣೆಯನ್ನು ಹೊಂದಿದೆ. ಸೂತ್ರ ರೂಪದ ಈ ಕೃತಿಯ ಸೂತ್ರಗಳು ಸಂಸ್ಕೃತದಲ್ಲಿವೆ. ಅಲ್ಲದೆ ತಾನೆ ಬರೆದ ವೃತ್ತಿಯೂ ಸಂಸ್ಕೃತದಲ್ಲಿದೆ. ಆದರೆ ಪ್ರಯೋಗಗಳು ಮಾತ್ರ ಕನ್ನಡದಲ್ಲಿವೆ. ಸೂತ್ರಗಳು ಪಾಣಿನಿಯ ಅಷ್ಟಾಧ್ಯಾಯಿಯ ಸೂತ್ರದ ಮಾದರಿಯಲ್ಲಿ ರಚಿತವಾಗಿವೆ. ಕೆಲವು ಕಡೆ ಅಷ್ಟಾಧ್ಯಾಯಿಯ ಸೂತ್ರಗಳನ್ನು ಹಾಗೇ ತೆಗೆದುಕೊಂಡು ಬಳಸಿಕೊಂಡಿರುವುದು ಇದೆ. ನಾಗವರ್ಮನು ಸಂಸ್ಕೃತದ ಬಗ್ಗೆ ಹೆಚ್ಚಿನ ಒಲವನ್ನು ತೋರಿದ್ದಾನೆ. ಈ ಕೃತಿಯನ್ನು ಸಂಸ್ಕೃತದಲ್ಲೇ ರಚಿಸಿರುವುದು ಇದಕ್ಕೆ ಸಾಕ್ಷಿ. ಕನ್ನಡ ಸಂಸ್ಕೃತದ ಬಾಂಧವ್ಯವನ್ನು ಕವಿರಾಜಮಾರ್ಗಕಾರ ಪ್ರತ್ಯೇಕಿಸಿ ನೋಡಲು ಪ್ರಯತ್ನಿಸಿದ್ದಾನೆ. ಅದೇನೆ ಇರಲಿ ಕನ್ನಡ ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಮಹತ್ವದ ಹಲವು ಅಂಶಗಳನ್ನು ತಿಳಿಸಿದ್ದಾನೆ. ಆ ಮೂಲಕ ಕನ್ನಡ ವ್ಯಾಕರಣದ ವ್ಯವಸ್ಥಿತವಾದ ಅಧ್ಯಯನಕ್ಕೆ ತಳಹದಿಯನ್ನು ಹಾಕಿದ್ದಾನೆ. ಕರ್ನಾಟಕ ಭಾಷಾಭೂಷಣವು ಅನ್ಯ ಭಾಷೆಗಳ ವ್ಯಾಕರಣ ಕೃತಿಗಳ ಮೇಲೆ ಕೂಡ ಪ್ರಭಾವವನ್ನು ಬೀರಿದೆ. ತೆಲುಗಿನ ಕೇತನನ 'ಆಂಧ್ರಭಾಷಾ ಭೂಷಣ' ಮತ್ತು ಮಲೆಯಾಳಂನ 'ಲೀಲಾತಿಲಕ' ಇವುಗಳ ಮೇಲೆ ಪ್ರಭಾವವಿರುವುದನ್ನು ಕಾಣಬಹುದಾಗಿದೆ.

**ಕೇಶಿರಾಜನ ಶಬ್ದಮಣಿದರ್ಪಣ :**

ದ್ರಾವಿಡ ಭಾಷೆಗಳ ವ್ಯಾಕರಣ ಗ್ರಂಥಗಳಲ್ಲಿ ಶಬ್ದಮಣಿದರ್ಪಣ ಒಂದು ವಿಶೇಷ ಸ್ಥಾನವನ್ನು ಪಡೆದುಕೊಂಡಿದೆ. ಕೇಶಿರಾಜ ತನ್ನ ಕೃತಿಯನ್ನು ಕರ್ನಾಟಕ ಲಕ್ಷಣ ಶಬ್ದ ಶಾಸ್ತ್ರ ಎಂದು ವರ್ಣಿಸಿಕೊಂಡಿದ್ದಾನೆ. ಸಂಸ್ಕೃತದ ಚೌಕಟ್ಟಿನಲ್ಲಿಯೇ ಕೃತಿ ರಚಿಸಿದ್ದು ತನ್ನ ಪೂರ್ವ ಮತ್ತು ಸಮಕಾಲೀನ ಭಾಷೆಯ ಬಳಕೆ, ಪ್ರಯೋಗಗಳನ್ನು ಗಮನಿಸಿ ವ್ಯಾಕರಣ ನಿಯಮಗಳನ್ನು ಸೂತ್ರ ರೂಪದಲ್ಲಿ ನೀಡಿದ್ದಾನೆ. ಕೇಶರಾಜನ ಕಾಲಕ್ಕಾಗಲೆ ನಡುಗನ್ನಡದಲ್ಲಿ ಅಪಾರ ಸಾಹಿತ್ಯ ಸೃಷ್ಟಿಯಾಗಿತ್ತು. ತನ್ನ ಹಿಂದಿನ ೪೦೦ ವರ್ಷಗಳ ಹಿಂದಿನಿಂದ ನಡುಗನ್ನಡದ ವರೆಗಿನ ಕನ್ನಡವನ್ನು ಸಂಸ್ಕೃತದ ಮಾದರಿಯಲ್ಲಿ ವರ್ಣನಾತ್ಮಕ ಶೈಲಿಯಲ್ಲಿ ವಿವರಿಸಿದ್ದಾನೆ. ಕಾಲಾಂತರದಲ್ಲಿ ಭಾಷಾ ಬೆಳವಣಿಗೆಯಲ್ಲಾದ ಎಲ್ಲಾ ಬಗೆಯ ಬದಲಾವಣೆಗಳನ್ನು ಕೇಶಿರಾಜ ವಿಶ್ಲೇಷಿಸಿದ್ದಾನೆ.

ಗಜಗ ಗುಣನಂದಿ ಮನಸಿಜ ಅಸಗ ಚಂದ್ರಭಟ್ಟ ಗುಣವರ್ಮ ಶ್ರೀವಿಜಯ ಪೊನ್ನ ಪಂಪ ಸುಜನೋತ್ತಂಸ ಮೊದಲಾದ ಪ್ರಸಿದ್ಧ ಕವಿಗಳ ಕಾವ್ಯಗಳಲ್ಲಿ ಬಳಕೆಯಾಗಿರುವ ಭಾಷೆಯನ್ನು ಆಧಾರವಾಗಿಟ್ಟುಕೊಂಡು ಈ ಕೃತಿಯನ್ನು ರಚಿಸಲಾಗಿದೆ. ಇವುಗಳ ಜೊತೆಗೆ ಇತರ ಕವಿಗಳಿಂದಲೂ ಉದಾಹರಣೆಗಳನ್ನು ಆಯ್ದುಕೊಳ್ಳಲಾಗಿದೆ. ಇದರಲ್ಲಿ ಎಂಟು ಪ್ರಕರಣಗಳಿರುವುದಾಗಿ ಕೇಶಿರಾಜನೇ ಹೇಳಿಕೊಂಡಿದ್ದಾನೆ. ಮೊದಲನೆಯದಾದ ಸಂಜ್ಞಾಪ್ರಕರಣದ ಆರಂಭದಲ್ಲಿ ಕನ್ನಡ ವರ್ಣಮಾಲೆಯ ನಿರೂಪಣೆ ಬಂದಿದೆ. ಮೊದಲಿಗೆ ಸಂಸ್ಕೃತ ವರ್ಣಮಾಲೆಯನ್ನು ನಿರೂಪಿಸಿ ಅನಂತರ ಕನ್ನಡದಲ್ಲಿ ಇಲ್ಲದ ಅಕ್ಷರಗಳನ್ನು ಅದರಿಂದ ತೆಗೆದು ಹಾಕಿ, ಕನ್ನಡದಲ್ಲಿ ಮಾತ್ರ ಇರುವ ವಿಶೇಷಾಕ್ಷರಗಳನ್ನು ಅದಕ್ಕೆ ಸೇರಿಸಿ ಶುದ್ಧಗೆಗಳನ್ನು ಎಂದರೆ ಶುದ್ಧ ಕನ್ನಡದ ವರ್ಣಮಾಲೆಯನ್ನು ನಿರೂಪಿಸಲಾಗಿದೆ. ಎರಡನೆಯದಾದ ಸಂಧಿ ಪ್ರಕರಣದಲ್ಲಿ ಸಂಧಿಯ ಸ್ವರೂಪ, ಸಂಧಿಯಾಗದ ಸಂಧರ್ಭಗಳು, ಸಂಧಿ ವಿಕಲ್ಪ, ಸಂಧಿಮಾಡಬಾರದ ಪ್ರಸಂಗಗಳು ಸ್ವರ ಸಂಧಿ, ವ್ಯಂಜನ ಸಂಧಿ, ದ್ವಿತ್ವ ಸಂಧಿ ಈ ಎಲ್ಲಕ್ಕೂ ಸಂಬಂಧಿಸಿದ ವಿಚಾರಗಳನ್ನು ಇದರಲ್ಲಿ ವಿವರಿಸಲಾಗಿದೆ. ಮೂರನೆಯ ಅಧ್ಯಾಯವಾದ ನಾಮ ಪ್ರಕರಣದಲ್ಲಿ ಲಿಂಗದ ಸ್ವರೂಪ ಮತ್ತು ಪ್ರಕಾರಗಳು, ಸಮ ಸಂಸ್ಕೃತ, ಸಂಸ್ಕೃತ ಶಬ್ದಗಳು ಕನ್ನಡಕ್ಕೆ ಬರುವಾಗ ಆಗುವ ಬದಲಾವಣೆಗಳು ಇವನ್ನೆಲ್ಲ ಮೊದಲಿಗೆ ವಿವರಿಸಲಾಗಿದೆ. ಅನಂತರ ಲಿಂಗದಲ್ಲಿ ಒಂಬತ್ತು ಪ್ರಕಾರಗಳು ಇವೆ ಎಂದು ಹೇಳಿ ಅವುಗಳನ್ನು ವಿವರಿಸಲಾಗಿದೆ. ಕೊನೆಗೆ ಅವುಗಳ ಪೈಕಿ ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪಂಸಕಲಿಂಗ ಈ ಮೂರು ಮಾತ್ರ ಬಳಕೆಯಲ್ಲಿವೆ ಎಂದು ಹೇಳಲಾಗಿದೆ. ನಂತರ ವಿಭಕ್ತಿಗಳು ಹಾಗೂ ವಿಭಕ್ತಿ ಪಲ್ಲಟಕ್ಕೆ ಸಂಬಂಧಿಸಿದ ವಿವರಣೆಗಳಿವೆ. ವಚನಗಳ ಸಂಬಂಧದಲ್ಲಿ ಏಕವಚನ ಬಹುವಚನಗಳ ಜೊತೆಗೆ ದ್ವಿವಚನವನ್ನು ಸೇರಿಸಲಾಗಿದೆ ಮಾತ್ರವಲ್ಲದೆ ಅದು ಉಚಿತವಾಗಿ ಬರುತ್ತದೆ ಎಂದು ಹೇಳಲಾಗಿದೆ. ನಾಲ್ಕನೆಯದಾದ ಸಮಾಸ ಪ್ರಕರಣದಲ್ಲಿ ಸಮಾಸದ ಸ್ವರೂಪ ಪ್ರಮುಖ ಪ್ರಕಾರಗಳು, ಗಮಕ ಸಮಾಸ ಅರಿ ಸಮಾಸ ಇವುಗಳನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ. ನಂತರದ ತದ್ದಿತ ಪ್ರಕರಣದಲ್ಲಿ ತದ್ಭವದ ವಿಚಾರ ಬಂದಿದೆ. ನಂತರದ ಆಖ್ಯಾತ ಪ್ರಕರಣದಲ್ಲಿ ಕ್ರಿಯಾ ವಿಭಕ್ತಿ ಮತ್ತು ಅವುಗಳ ಪ್ರಯೋಗಕ್ಕೆ ಸಂಬಂಧಿಸಿದ ವಿಚಾರಗಳ ವಿಸ್ತೃತ ವಿವೇಚನೆಯಿದೆ. ಅದರ ನಂತರದ ಧಾತು ಪ್ರಕರಣದಲ್ಲಿ ಧಾತುಗಳ ಸುಧೀರ್ಘ ಪಟ್ಟಿಯಿದೆ. ಮುಂದಿನ ಅಪಭ್ರಂಶ ಪ್ರಕರಣದಲ್ಲಿ ತದ್ಭವಗಳ ಲಕ್ಷಣಗಳನ್ನು ವಿವರಿಸಲಾಗಿದೆ. ಕೊನೆಗೆ ತತ್ಸಮಗಳನ್ನು ಕುರಿತು

ಹೇಳಲಾಗಿದೆ. ಅದರ ನಂತರದ ಕೊನೆಯದಾದ ಅವ್ಯಯ ಪ್ರಕರಣದಲ್ಲಿ ಅವ್ಯಯಗಳು ಮತ್ತು ಅವುಗಳ ಬಳಕೆಯ ವಿವರಗಳು ಬಂದಿವೆ.

ಹೀಗೆ ವಿಸ್ತಾರವಾಗಿ, ವ್ಯವಸ್ಥಿತವಾಗಿ ನಿರೂಪಿತವಾಗಿರುವ ಕೇಶಿರಾಜನ ಶಬ್ದಮಣಿದರ್ಪಣವು ಕನ್ನಡದ ಅಸಾಧಾರಣ ಲಕ್ಷಣಗಳನ್ನು ತಿಳಿಸುತ್ತದೆ. ಇವತ್ತಿನವರೆಗೂ ತನ್ನ ಜನಪ್ರಿಯತೆಯನ್ನು ಉಳಿಸಿಕೊಂಡು ಬಂದಿದೆ.

**ಭಟ್ಟಾಕಳಂಕನ ಶಬ್ದಾನುಶಾಸನ :** ಹದಿನೇಳನೆಯ ಶತಮಾನದಲ್ಲಿ ರಚನೆಯಾಗಿದ್ದು ಹಳೆಗನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ವಿವರಿಸುವ ಇನ್ನೊಂದು ಪ್ರಾಚೀನ ವ್ಯಾಕರಣ ಗ್ರಂಥ. ಈ ಕೃತಿಯ ಮೇಲೆ ನಾಗವರ್ಮನ ಕರ್ನಾಟಕ ಭಾಷಾಭೂಷಣದ ಪ್ರಭಾವವಿದೆ. ಇದರಲ್ಲಿ ನಾಲ್ಕು ಪಾದಗಳಿವೆ. ಸಂಧಿ, ಲಿಂಗ, ಸಮ ಸಮಾಸ ಮತ್ತು ಧಾತು. ಜೊತೆಗೆ ಇತರ ವಿಷಯಗಳ ವಿವರಣೆಗೆ ಸಂಬಂಧಿಸಿದಂತೆ ೫೯೨ ಸೂತ್ರಗಳಲ್ಲಿ ವಿವರಿಸಿದ್ದಾರೆ. ಈ ಗ್ರಂಥಕ್ಕೆ ಸಂಸ್ಕೃತದಲ್ಲಿ 'ಭಾಷಾ ಮಂಜರೀ' ಎಂಬ ವೃತ್ತಿ ಹಾಗೂ 'ಮಂಜರೀ ಮಕರಂದ' ಎಂಬ ವ್ಯಾಖ್ಯೆಯೂ ಇದೆ. ಕನ್ನಡ ಭಾಷೆಯನ್ನು ಸಮಗ್ರವಾಗಿ ಹಿಂದಿನ ಯಾವ ವೈಯಾಕರಣಿಗಳೂ ವಿವರಿಸದ ರೀತಿಯಲ್ಲಿ ವಿಸ್ತೃತವಾಗಿ ವಿಶ್ಲೇಷಿಸಿದ್ದಾನೆ.

ಕ್ರಿ. ಶ. ಸುಮಾರು ೧೬೨೮ರಲ್ಲಿ ನಿಟ್ಟೂರು ನಂಜಯ್ಯನು ಶಬ್ಧಮಣಿದರ್ಪಣಕ್ಕೆ ಬರೆದ ಟೀಕುವನ್ನು ಬಿಟ್ಟರೆ ಮತ್ತೆ ಯಾವ ವ್ಯಾಕರಣ ಗ್ರಂಥಗಳು ೧೬-೧೯ನೆಯ ಶತಮಾನದ ಒಳಗಿನ ಕಾಲಾವಧಿಯಲ್ಲಿ ಸಿಕ್ಕುವುದಿಲ್ಲ. ಕನ್ನಡ ವ್ಯಾಕರಣ ಪ್ರಪಂಚದಲ್ಲಿ ೧೯ನೇ ಶತಮಾನದವರೆಗೆ ಕಾಣಸಿಗುವ ವ್ಯಾಕರಣ ಗ್ರಂಥಗಳು ಮೇಲಿನ ಈ ನಾಲ್ಕು ಕೃತಿಗಳು.

ಪ್ರಾಚೀನ ವ್ಯಾಕರಣ ಗ್ರಂಥಗಳು ಭಾಷೆ ಹೇಗೆ ಬಳಕೆಯಾಗಬೇಕು, ಹೇಗೆ ಇರಬೇಕು ಎಂದು ಭಾಷೆಗೆ ಕಟ್ಟಳೆಯನ್ನು ವಿಧಿಸುವ ನಿಯಮಾತ್ಮಕ ವ್ಯಾಕರಣವನ್ನು ರಚಿಸಿದರೇ ಹೊರತು, ಭಾಷೆ ಇರುವ ಸ್ವರೂಪದಲ್ಲಿಯೇ ಅದನ್ನು ವಿವರಣಾತ್ಮಕವಾಗಿ ವಿವರಿಸಲು ಪ್ರಯತ್ನಿಸಲಿಲ್ಲ ಎಂಬುದು ಈ ಕೃತಿಗಳಿಂದ ಸ್ಪಷ್ಟವಾಗುತ್ತದೆ.

ಈ ಮೇಲೆ ವಿವರಿಸಲ್ಪಟ್ಟ ಎಲ್ಲ ವ್ಯಾಕರಣ ಕೃತಿಗಳು ಸಂಸ್ಕೃತ ವ್ಯಾಕರಣದಿಂದ ಪ್ರಭಾವಿತವಾಗಿವೆ. ಮತ್ತು ಸಂಸ್ಕೃತ ಕೃತಿಗಳ ಮಾದರಿಯಲ್ಲಿ ರಚಿತವಾಗಿವೆ. ಆದರೆ ಕನ್ನಡದ ವಿಶಿಷ್ಟಾಂಶಗಳನ್ನು ಗುರುತಿಸಿವೆ. ರಚನೆಗೆ ಆಧಾರವಾಗಿ, ಪ್ರಧಾನವಾಗಿ ಪೂರ್ವ ಕವಿ ಕೃತಿಗಳ ಭಾಷೆಯನ್ನು ಸ್ವೀಕರಿಸಿದ್ದರೂ ಪ್ರಚಲಿತ ಆಡುನುಡಿಯನ್ನೂ

ಅಲ್ಲಲ್ಲಿ ಗಮನಿಸಿರುವುದು. ಹೀಗೆ ಈ ಕೃತಿಗಳು ಸಂಸ್ಕೃತದ ನೆರಳಿನಲ್ಲಿ ಅರಳಿದರೂ ತನ್ನತನದೊಂದಿಗೆ ಬೆಳೆದದ್ದೂ ಮತ್ತು ಇವತ್ತಿಗೂ ಮುಖ್ಯವಾಗಿರಲು ಕಾರಣವಾಗಿದೆ.

**ಆಧುನಿಕ ಭಾಷಾಜ್ಞಾನ ಬೆಳೆದು ಬಂದ ಬಗೆ :**

ಆಧುನಿಕ ಭಾಷಾವಿಜ್ಞಾನಿಗಳು ಭಾಷೆಗೆ ನಿಯಮವನ್ನು ಹೇರದೆ ಭಾಷೆಯು ಇರುವ ಸ್ವರೂಪಕ್ಕೆ ತಕ್ಕಂತೆ ವಿವರಣೆಯನ್ನು ಆರಂಭಿಸಿದರು. ಇದು ಪ್ರಾಚೀನ ಭಾಷಾ ವ್ಯಾಕರಣಕ್ಕೆ ಸಂಪೂರ್ಣ ವಿರುದ್ಧವಾದ ಮಾರ್ಗ. ಹಾಗಾಗಿ ಆಧುನಿಕ ಭಾಷಾವಿಜ್ಞಾನಿಗಳಿಗೆ ಭಾಷೆ ಮೊದಲು, ವ್ಯಾಕರಣ ನಂತರದ್ದು. ಅರ್ಥವಿವರಣೆ, ಅದರ ಉಪಯೋಗ, ಸಂದರ್ಭದ ಹಿನ್ನೆಲೆಯಲ್ಲಿ ಭಾಷೆಯನ್ನು ಅರ್ಥಮಾಡಿಕೊಳ್ಳಬೇಕೆಂಬ ಮನೋಭಾವ ಇವರದು. ವ್ಯಾಕರಣ ಭಾಷಿಕ ರಚನೆಯನ್ನು ಅರಿಯುವ ಒಂದು ಸಾಧನ ಮಾತ್ರ ಎಂಬುದು ಇವರ ಅಭಿಪ್ರಾಯ.

ಹತ್ತೊಂಬತ್ತನೆಯ ಶತಮಾನದ ಹೊತ್ತಿಗೆ ಹೊಸಗನ್ನಡ ಭಾಷಾ ಬಳಕೆ ಆರಂಭವಾದ್ದರಿಂದ ಹಳಗನ್ನಡ ವ್ಯಾಕರಣವು ಕಬ್ಬಿಣ ಕಡಲೆಯಂತಾಯಿತು ಮತ್ತು ವ್ಯರ್ಥ ಅಧ್ಯಯನ ಎಂಬ ಭಾವನೆ ಮೂಡತೊಡಗಿತು. ಅದೇ ಸಂದರ್ಭಕ್ಕೆ ಸರಿಯಾಗಿ ಭಾರತಕ್ಕೆ ಬಂದಿಳಿದ ಆಂಗ್ಲರು ಆಡಳಿತದ ಅನುಕೂಲಕ್ಕಾಗಿ ಮತ್ತು ಧರ್ಮ ಪ್ರಸಾರದ ಅನುಕೂಲಕ್ಕಾಗಿ ಸರಳವಾಗಿದ್ದ ಆ ಕಾಲದ ಹೊಸಗನ್ನಡವನ್ನೇ ಆಶ್ರಯಿಸಿದರು. ಇಂಗ್ಲೀಶ್ ಶಿಕ್ಷಣ ಪದ್ಧತಿ ಜಾರಿಗೆ ಬಂದ ನಂತರ ಬೋಧನೆಗೆ ಸರಳ ಕನ್ನಡ ವ್ಯಾಕರಣಗಳ ಅನಿವಾರ್ಯತೆ ಎದುರಾಯಿತು. ಈ ಅವಶ್ಯಕತೆಯನ್ನು ಪೂರೈಸುವುದಕ್ಕಾಗಿಯೆ ದೇಶೀಯ ಹಾಗೂ ವಿದೇಶೀಯ ಪಂಡಿತರಿಂದ ಸರಳವೂ ಸುಲಭವೂ ಆದ ಕನ್ನಡ ವ್ಯಾಕರಣಗಳು ರಚನೆಯಾಗತೊಡಗಿದವು. ಹಾಗಾಗಿ ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಕ್ರೈಸ್ತ ಪಂಡಿತರಿಂದ ಆಧುನಿಕ ವ್ಯಾಕರಣಗಳು ಪ್ರಕಟಗೊಳ್ಳತೊಡಗಿದವು.

ಹದಿನೆಂಟನೆಯ ಶತಮಾನದಿಂದ ಆರಂಭಗೊಂಡು ಇಲ್ಲಿಯವರೆಗೆ ಸುಮಾರು ೧೭೫ ವರ್ಷಗಳ ಕಾಲಾವಧಿಯಲ್ಲಿ ಬೆಳೆದು ಬಂದ ಕನ್ನಡ ವ್ಯಾಕರಣದ ಇತಿಹಾಸವನ್ನು ಪ್ರಥಮ ಹಂತ, ದ್ವಿತೀಯ ಹಂತ, ತೃತೀಯ ಹಂತ ಎಂದು ಮುಖ್ಯವಾಗಿ ಮೂರು ಹಂತಗಳನ್ನಾಗಿ ಮಾಡಬಹುದು.

ಪ್ರಥಮ ಹಂತ ( ೧೮೦೦ ರಿಂದ ೧೯೫೦ ) : ಪ್ರಥಮ ಹಂತದ ವ್ಯಾಕರಣಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ವರ್ಗಗಳಾಗಿ

ವಿಂಗಡಿಸಿದ್ದಾರೆ. ಒಂದು – ಸುಲಭ ವ್ಯಾಕರಣಗಳು. ಎರಡು – ಪ್ರೌಢ ವ್ಯಾಕರಣಗಳು. ಕನ್ನಡ ವ್ಯಾಕರಣವನ್ನು ಕುರಿತು ಸರಳವಾಗಿ ರಚನೆಯ ಆರಂಭ ಇಂಗ್ಲೀಷ್‌ನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ ಮೊದಲ್ಗೊಂಡಿತು. ವಿಲಿಯಂ ಕ್ಯಾರಿ ೧೮೧೭ರಲ್ಲಿ The Grammar of Karnataka Language ಎಂಬ ಕನ್ನಡ ವ್ಯಾಕರಣವನ್ನು ರಚಿಸಿದ. ಇದು ಆಧುನಿಕ ವ್ಯಾಕರಣಕ್ಕೆ ಬರೆದ ವ್ಯಾಕರಣ ಮಾತ್ರವೇ ಅಲ್ಲದೆ ಕನ್ನಡದಲ್ಲಿ ಬಂದ ಮೊದಲ ಕನ್ನಡ ವ್ಯಾಕರಣ ಪುಸ್ತಕವೂ ಹೌದು. ೧೮೨೦ರಲ್ಲಿ ಜಾನ್ ಮೆಕೆರೆಲ್ Karnataka Vyakarana ಎಂಬ ಪುಸ್ತಕವನ್ನು ಬರೆದ. ಈ ಪುಸ್ತಕ ಅಥವಾ ವ್ಯಾಕರಣ ರಚನೆಯ ಹಿಂದಿನ ಉದ್ದೇಶವನ್ನು ಮೊದಲು ಸ್ಪಷ್ಟಪಡಿಸಿದ್ದಾನೆ. ಯಾವ ಅಧಿಕಾರಿಯೂ ಸ್ಥಳೀಯ ಭಾಷೆಯ ಜ್ಞಾನವಿಲ್ಲದೆ ಆಡಳಿತವನ್ನು ಸಮರ್ಥವಾಗಿ ನಡೆಸಲಾರ. ಈ ಉದ್ದೇಶದ ಈಡೇರಿಕೆಯ ಅಂಗವಾಗಿ ಕೇಶಿರಾಜನ ಶಬ್ದಮಣಿದರ್ಪಣವನ್ನು ಆಕರವಾಗಿಟ್ಟುಕೊಂಡು ಕನ್ನಡ ವ್ಯಾಕರಣವನ್ನು ಬರೆದಿದ್ದಾನೆ.

ವಿಲಿಯಂ ಕ್ಯಾರೆ ಮತ್ತು ಜಾನ್ ಮೆಕೆರೆಲ್‌ನ ನಂತರ ೧೮೫೪ರಲ್ಲಿ ಝಿಗ್ಲರನು Practical Key to canarese Language ಎಂಬ ಪುಸ್ತಕವನ್ನು ಬರೆದ. ಈ ವ್ಯಾಕರಣ ಕೃತಿಯಲ್ಲಿ ಕನ್ನಡ ಭಾಷೆಯನ್ನು ಹಲವು ನೆಲೆಯಲ್ಲಿ ಚರ್ಚೆಯನ್ನು ನಡೆಸಿದ್ದಾನೆ. ಇಂಗ್ಲೀಷ್‌ನ ಕೆಲವು ನಿದರ್ಶನಗಳನ್ನು ಸಹ ಕನ್ನಡದಲ್ಲಿ ಹೇಳಿದ್ದಾನೆ. ಇಷ್ಟು ಅಲ್ಲದೆ ಇದರ ಪ್ರಮುಖವಾದ ಅಂಶವೆಂದರೆ, ಸಂಸ್ಕೃತದ ಎಲ್ಲ ವರ್ಣಗಳನ್ನು ತೆಗೆದುಕೊಳ್ಳದೆ ಕನ್ನಡಕ್ಕೆ ಬೇಕಾದವುಗಳನ್ನು ಮಾತ್ರ ತೆಗೆದುಕೊಂಡು ಉಳಿದವುಗಳನ್ನು ಬಿಡಲಾಗಿದೆ. ಈತನ ಮತ್ತೊಂದು ಕೃತಿ ಎಂದರೆ 'ಕನ್ನಡ ಶಾಲಾ ವ್ಯಾಕರಣ' ಇದನ್ನು ೧೮೬೬ರಲ್ಲಿ ರಚಿಸಿದನು.

೧೮೫೯ರಲ್ಲಿ An elementary Grammar of the Kannada Language ಎಂಬ ಕನ್ನಡ ವ್ಯಾಕರಣವನ್ನು ಥಾಮಸ್ ಹಡ್ಸನ್‌ನು ಬರೆದ. ಈ ಕೃತಿಯಲ್ಲಿ ವ್ಯಾಕರಣ ಮತ್ತು ವಾಕ್ಯ ರಚನೆಯ ವಿಭಾಗದಲ್ಲಿ ಅಕ್ಷರಗಳ ಬಗ್ಗೆ,ನಾಮಗಳ ಬಗ್ಗೆ, ವಿಶೇಷಣ, ಸರ್ವನಾಮಗಳ ಬಗ್ಗೆ, ಕ್ರೀಯಾಪದಗಳ ಬಗ್ಗೆ, ಕ್ರೀಯಾವಿಶೇಷಣಗಳ ಬಗ್ಗೆ, ಅವ್ಯಯಗಳ ಬಗ್ಗೆ ಹೀಗೆ ವ್ಯಾಕರಣದ ಹಲವು ಅಂಶಗಳ ನೆಲೆಯಲ್ಲಿ ಶಿಸ್ತುಬದ್ಧವಾಗಿ ವಿವರವಾಧ ಚರ್ಚೆ ಇದೆ. ಈ ವ್ಯಾಕರಣದ ಚೌಕಟ್ಟು ಗಮನಾರ್ಹವಾಗಿದೆ. ಸೂಕ್ತವಾದ ವಿವರಣೆ ಮತ್ತು ಉದಾಹರಣೆಗಳೊಂದಿಗೆ ವಿವರಿಸಲ್ಪಟ್ಟಿದೆ.

ಈ ಒಂದು ಹಂತದ ನಂತರ ಕನ್ನಡ ಪ್ರಾಚೀನ ಗ್ರಂಥಗಳ ಸಂಪಾದನೆ ಕಾರ್ಯ ನಡೆಯುತ್ತದೆ. ಗ್ಯಾರೆಟ್ ೧೮೫೮ರಲ್ಲಿ 'ಶಬ್ದಮಣಿದರ್ಪಣ'ವನ್ನು ಸಂಪಾದಿಸಿದ. ೧೮೭೨ರಲ್ಲಿ ಕಿಟೆಲ್‌ನು ಇನ್ನಷ್ಟು ಪರಿಶ್ರಮವಹಿಸಿ ಶಬ್ದಮಣಿದರ್ಪಣ ಸಂಪಾದನೆಯನ್ನೂ, ೧೮೫೬ರಲ್ಲಿ ಸಂಕ್ಷೇಪ ವ್ಯಾಕರಣ ಸೂತ್ರಗಳನ್ನೂ ಕಟ್ಟಿಕೊಟ್ಟಿದ್ದಾನೆ. ೧೮೮೯ರಲ್ಲಿ 'ಹಳೆಗನ್ನಡ ವ್ಯಾಕರಣ ಸೂತ್ರಗಳು' ಮತ್ತು ೧೯೦೩ರಲ್ಲಿ 'Grammar of Kannada Language' ಗ್ರಂಥವನ್ನು ರಚಿಸಿದ. ೧೯೦೬ರಲ್ಲಿ ಗ್ರಿಯರ್ಸನ್ kanerese Grammar ಮತ್ತು ಸ್ಪೆನ್ಸರ್ ೧೯೨೦ರಲ್ಲಿ Kanarese Grammar ವ್ಯಾಕರಣವನ್ನು ಕನ್ನಡಕ್ಕೆ ಮಹತ್ವದ ಕೊಡುಗೆಗಳಾಗಿ ಕೊಟ್ಟಿದ್ದಾರೆ.

ಭಾರತಕ್ಕೆ ಬಂದಿಳಿದ ವಿದೇಶಿ ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ, ವ್ಯಾಸಂಗಿಗಳಿಗೆ ಸುಲಭ ಕನ್ನಡ ವ್ಯಾಕರಣದ ಅವಶ್ಯಕತೆ ಇದ್ದ ಸಂದರ್ಭದಲ್ಲಿ ಮತ್ತು ಕನ್ನಡ ಬಾರದ ಇಂಗ್ಲೀಶರು ಕ್ರೈಸ್ತ ಧರ್ಮ ಪ್ರಚಾರಕರು ಹಾಗೂ ಹೊಸ ಪೀಳಿಗೆಯವರು ಕನ್ನಡವನ್ನು ಸುಲಭವಾಗಿ ಕಲಿಯುವುದಕ್ಕೆ ಅನುಕೂಲವಾಗುವಂತೆ ಕೆಲವು ಆಂಗ್ಲ ವಿದ್ವಾಂಸರು ಇಂಗ್ಲೀಶಿನಲ್ಲಿ ಕನ್ನಡ ವ್ಯಾಕರಣಗಳನ್ನು ರಚಿಸಿದರು. ಆರಂಭದಲ್ಲಿ ಇಂಗ್ಲೀಶ್ ವ್ಯಾಕರಣ ಪದ್ಧತಿಯನ್ನು ಅನುಸರಿಸಿ ಇಂಗ್ಲೀಶಿನಲ್ಲಿಯೇ ಬರೆಯಲಾಯಿತು. ನಂತರದಲ್ಲಿ ವಿದ್ಯಾರ್ಥಿಗಳಿಗೆ ಸುಧಾರಿತ ಮಟ್ಟದಲ್ಲಿ ವ್ಯಾಕರಣಗಳು ರಚಿತವಾದವು. ನಿತ್ಯಜೀವನದ ಉದಾಹರಣೆಗಳೊಂದಿಗೆ ಅವುಗಳನ್ನು ವಿಶ್ಲೇಷಿಸಲಾಯಿತು. ಅಂತಹ ವ್ಯಾಕರಣಗಳಲ್ಲಿ ಕೆಲವು ಪ್ರಮುಖವಾದವುಗಳನ್ನು ಇಲ್ಲಿ ಹೆಸರಿಸಲಾಗಿದೆ. ಕ್ರಿ. ಶ. ೧೮೧೭ರಲ್ಲಿ ರೆವೆರೆಂಡ್ ಡಾ. ವಿಲಿಯಂ ಕಾರಿಯ "The Grammar of karnatak Language" ೧೮೨೦ ರಲ್ಲಿ ಮದ್ರಾಸ್ ಸಿವಿಲ್ ಸರ್ವಿಸ್ ಅಧಿಕಾರಿ ಜಾನ್ ಮೆಕೆರಲ್ ಅವರ Karnataka Vyakarana, ಅಥವಾ A Grammar of Carnaka Languages, ೧೮೪೯ ರಲ್ಲಿ ರೆವೆರೆಂಡ್ ಸಿ. ಕೇಂಬಲ್‌ರ Elements of Kanarese Grammar, ( ಕನ್ನಡ ವ್ಯಾಕರಣ ಸಾರ ).

೧೮೫೫ ರಲ್ಲಿ ಥಾಮಸ್ ಹಡ್ಸನ್‌ರ ಕನ್ನಡ ವ್ಯಾಕರಣ, ೧೮೫೯ರಲ್ಲಿ ಅದೇ ಹಡ್ಸನ್‌ರ Canares Grammar Or An Elementi Grammar of the Kannada or Canarase, ೧೮೬೭ರಲ್ಲಿ ಮುನಿಷಿ ಶ್ರೀನಿವಾಸಯ್ಯ ಎಂಬ ದೇಶಿ ಪಂಡಿತರ ಪದಕಾವ್ಯ ವ್ಯಾಕರಣ (The Canarese Grammar in Rhyme), ೧೮೬೮ ರಲ್ಲಿ ಜಿ. ಕೋಯಿರುಘ್ ಅವರ ಕನ್ನಡ ಬಾಲ ವ್ಯಾಕರಣ, ೧೮೭೦ರಲ್ಲಿ ರೆವೆರೆಂಡ್ ಎಫ್ ಝಿಗ್ಲರ್ ಅವರ A Practical Key to the canarese Language, ೧೮೮೨ ರಲ್ಲಿ ಕೃಷ್ಣಮಾ ಚಾರ್ಯರ Grammar of the Modern Canarese Languages, ೧೮೮೬ ರಲ್ಲಿ ವೆಂಕಟ

ರಂಗೋ ಕಟ್ಟಿ ಅವರ ಕನ್ನಡ ಲಘು ವ್ಯಾಕರಣ, ೧೮೬೫ರಲ್ಲಿ ಅವರದೇ Out Lines of Kanarese Grammar, ಇವೆಲ್ಲ ಆರಂಭದಲ್ಲಿ ಮೂಡಿಬಂದ ವ್ಯಾಕರಣ ಕೃತಿಗಳಾಗಿವೆ. ನಂತರ ಡಾ. ಎಫ್. ಕಿಟೆಲ್ ಒಂದು ಕನ್ನಡ, ಮತ್ತೊಂದು ಇಂಗ್ಲೀಶ್ ಭಾಷೆಯಲ್ಲಿ ವ್ಯಾಕರಣ ಕೃತಿಗಳನ್ನು ಬರೆದರು. "ಕನ್ನಡ ವ್ಯಾಕರಣ ಸೂತ್ರಗಳು ಮತ್ತು ಸಂಕ್ಷೇಪ ವ್ಯಾಕರಣ ಸೂತ್ರಗಳು" ೧೮೮೯ರಲ್ಲಿ ಬರೆದರು. ಇಂಗ್ಲೀಶಿನಲ್ಲಿ ೧೯೦೩ರಲ್ಲಿ A Grammar of Kannada Language, ಎಂಬ ಕನ್ನಡ ವ್ಯಾಕರಣ ಕೃತಿಯನ್ನು ಬರೆದರು. ೧೮೮೪ರಲ್ಲಿ ಬಿ. ಗ್ರೇಟರ್ ಅವರು Table of Canarese Language, ಪ್ರಕಟಿಸಿದರು. ೧೯೧೩ ರಲ್ಲಿ ರೆವೆರೆಂಡ್ ಕಾಲ್ಡ್‌ವೆಲ್‌ರು 'ದ್ರಾವಿಡ ಅಥವಾ ದಕ್ಷಿಣ ಭಾರತೀಯ ಭಾಷೆಗಳ ತುಲನಾತ್ಮಕ ವ್ಯಾಕರಣ' ಬೆಳಕು ಕಂಡಿತು. ದ್ರಾವಿಡ ಭಾಷಾ ವಿಜ್ಞಾನ ಪ್ರಪಂಚದಲ್ಲಿ ಕಾಲ್ಡ್‌ವೆಲ್ಲರ ಈ ಕೃತಿಗೆ ಅತ್ಯಂತ ವಿಶಿಷ್ಟವಾದ ಸ್ಥಾನವಿದೆ. ಈ ಕೃತಿ ದ್ರಾವಿಡ ಭಾಷೆಗಳ ಬಗೆಗೆ ಒಂದು ಹೊಸ ಪ್ರಜ್ಞೆಯನ್ನೇ ಮೂಡಿಸಿತು. ೧೯೧೪ರಲ್ಲಿ ಹೆರಾಲ್ಡ್ ಸ್ಪೆನ್ಸರ್ ಅವರ A Canarese Language, ಪ್ರಕಟಗೊಂಡಿತು. ರಿಗ್ಲೆರ್ ಅವರ A Practical Key to the Canarese Grammar, ರೆವೆರೆಂಡ್ ಎಫ್ ಕಿಟಲ್‌ರ A Grammar of Kannada Language ಹಾಗೂ ರೆವೆರಂಡ್ ಕಾಲ್ಡವೆಲ್‌ರ ದ್ರಾವಿಡ ಅಥವಾ ಭಾರತೀಯ ಭಾಷೆಗಳ ತುಲಾನಾತ್ಮಕ ವ್ಯಾಕರಣ ಈ ಮೂರು ಕೃತಿಗಳನ್ನು ಹೊರತು ಪಡಿಸಿದರೆ, ಉಳಿದವೆಲ್ಲವು ಇಂಗ್ಲೀಶ್ ವ್ಯಾಕರಣ ಮಾದರಿಯಲ್ಲಿ ಶಾಲಾ ಪಠ್ಯಕ್ರಮಕ್ಕನುಗುಣವಾಗಿ ರಚಿತವಾದವುಗಳಾಗಿವೆ.

೧೮೮೮ರಲ್ಲಿ ಕೆ. ಕೃಷ್ಣಮಾಚಾರ್ಯರು 'ಹೊಸಗನ್ನಡ – ನುಡಿಗನ್ನಡ' ಎಂಬ ಹೊಸಗನ್ನಡ ವ್ಯಾಕರಣ ಕೃತಿ ಹೊರ ತಂದರು. ಸಂಭಾಷಣೆಯ ರೂಪದಲ್ಲಿದ್ದು ಆಡು ನುಡಿಯನ್ನೆ ವ್ಯಾಕರಣ ರಚನೆಗೆ ಗಣನೆಗೆ ತೆಗೆದುಕೊಂಡಿದ್ದು ಈ ಕೃತಿಯ ವೈಶಿಷ್ಟ್ಯ. ಇವರದೆ ಹಳಗನ್ನಡಕ್ಕೆ ಸಂಬಂಧಿಸಿದ 'ಹಳಗನ್ನಡಿ – ನುಡಿಗನ್ನಡಿ' ಎಂಬ ಕೃತಿಯನ್ನು ರಚಿಸಿದರು. ಆದರೆ ಈ ಎರಡೂ ಕೃತಿಗಳು ಹೆಚ್ಚು ಜನಪ್ರಿಯವಾಗಲಿಲ್ಲ. ೧೮೯೦ರಲ್ಲಿ ಎಂ. ರಾಮಸ್ವಾಮಿ ಶಾಸ್ತ್ರಿಯವರ ಕರ್ನಾಟಕ ವಾಗ್ವಿಧಾಯಿನಿ ಪ್ರಕಟಗೊಂಡು ಏಳು ಆವೃತ್ತಿಗಳನ್ನು ಕಂಡಿತು. ೧೮೯೨ರಲ್ಲಿ ಧೋಂಡೋ ನರಸಿಂಹ ಮುಳಬಾಗಿಲು ಅವರ ನುಡಿಗಟ್ಟು ಕೃತಿ ಬೆಳಕು ಕಂಡಿತು. ೧೯೨೭ರಲ್ಲಿ ಮೈಸೂರು ವಿ. ವಿ. ಯಿಂದ ಕನ್ನಡ ಕೈಪಿಡಿ ಪ್ರಕಟವಾಯಿತು. ಈ ಕೃತಿಯ ಮೊದಲ ಭಾಗವಾದ ಹಳಗನ್ನಡದ ವ್ಯಾಕರಣವನ್ನು ಟಿ. ಶ್ರೀನಿವಾಸ ರಾಘವಾಚಾರ್ಯ ಮತ್ತು ಬಿ. ಕೃಷ್ಣಪ್ಪನವರೂ ಎರಡನೆಯ ಭಾಗವಾದ ಕರ್ನಾಟಕ ಛಂದಸ್ಸನ್ನು ಟಿ. ಶ್ರೀನಿವಾಸ ರಾಘವಾಚಾರ್ಯರೂ, ಮೂರನೆಯ ಭಾಗವಾದ ಅಲಂಕಾರವನ್ನು ಎ. ಆರ್.

ಕೃಷ್ಣಶಾಸ್ತ್ರಿಗಳು ಮತ್ತು ಕೆ. ವರದಾಚಾರ್ಯರೂ, ನಾಲ್ಕನೆಯ ಭಾಗವಾದ ಕನ್ನಡ ಭಾಷೆಯ ಚರಿತ್ರೆಯನ್ನು ಪ್ರೊ. ಬಿ. ಎಂ. ಶ್ರೀ. ಮತ್ತು ಪ್ರೊ. ಟಿ. ಎಸ್. ವೆಂಕಣ್ಣಯ್ಯನವರೂ, ಐದನೆಯ ಭಾಗವಾದ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಬಿ. ಎಂ. ಶ್ರೀ. ಬರೆದರು. ಒಂದು ಮತ್ತು ನಾಲ್ಕನೆಯ ಭಾಗಗಳು ಸಂಕ್ಷಿಪ್ತ ಕನ್ನಡ ವ್ಯಾಕರಣ ವಿಷಯಗಳನ್ನು ಒಳಗೊಂಡಿದ್ದು ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸಂಕ್ಷಿಪ್ತ ವ್ಯಾಕರಣಾಂಶಗಳನ್ನು ಅಚ್ಚುಕಟ್ಟಾಗಿ ವಿವರಿಸಿರುವುದರಿಂದ ಕನ್ನಡ ಕೈಪಿಡಿ ಗಮನಾರ್ಹಕೃತಿಯಾಗಿದೆ. ಈ ಕೃತಿ ಹಲವಾರು ಮುದ್ರಣಗಳನ್ನು ಕಂಡಿದ್ದು ಪಠ್ಯ ಕ್ರಮವಾಗಿಯೂ ಜನಪ್ರಿಯಗೊಂಡಿದೆ. ನಂತರದಲ್ಲಿ ೧೯೨೮ರಲ್ಲಿ ಮ. ಪ್ರ. ಪೂಜಾರ ಅವರ 'ಕನ್ನಡ ನುಡಿಗನ್ನಡಿ' (ಹೊಸಗನ್ನಡ ವ್ಯಾಕರಣ) ಹಾಗೂ ಛಂದೋಮಂಜರಿ ಪ್ರಕಟಗೊಂಡು ಅನೇಕ ಮುದ್ರಣಗಳನ್ನು ಕಂಡು ಜನಪ್ರಿಯವಾದವು.

೧೯೩೩ರಲ್ಲಿ ಬಿ. ಮಲ್ಲಪ್ಪ ಅವರ ಶಬ್ದಸಾರ ಪ್ರಕಟಗೊಂಡಿತು. ೧೯೩೬ರಲ್ಲಿ ಪಂಜೆ ಮಂಗೇಶರಾಯರ ಕನ್ನಡ ಮೂಲ ವ್ಯಾಕರಣವು ಪ್ರಕಟಗೊಂಡು ಸದ್ಯ ಆರು ಆವೃತ್ತಿಗಳನ್ನು ಕಂಡಿದೆ. ೧೯೫೦ರಲ್ಲಿ ಎಸ್. ಎಸ್. ಬಸವನಾಳ ಮತ್ತು ಪಂಡಿತ ಜೆ.

ಎ. ಕವಲಿ ಅವರ 'ಕನ್ನಡ ಚೆನ್ನುಡಿ' ಪ್ರಕಟವಾಯಿತು. ಹೀಗೆ ೧೮೦೦ರಿಂದ ೧೯೫೦ರವರೆಗೆ ಸುಮಾರು ೬೦-೬೫ಕ್ಕೂ ಅಧಿಕ ವ್ಯಾಕರಣ ಕೃತಿಗಳು ಪ್ರಕಟಗೊಂಡು ಬಹುತೇಕ ಶಾಲಾ ವ್ಯಾಕರಣ, ಸಾಮಾನ್ಯ ಸರಳ ವ್ಯಾಕರಣಗಳೇ ಇದರಲ್ಲಿ ಅಧಿಕವಾಗಿದ್ದವು.

೧೮೦೦ರಿಂದ ೧೯೫೦ರ ಅವಧಿಯಲ್ಲಿ ಸರಳ ವ್ಯಾಕರಣ ಕೃತಿಗಳು ಮತ್ತು ಪ್ರೌಢ ವ್ಯಾಕರಣ ಕೃತಿಗಳು ರಚನೆಗೊಂಡವು. ಇಲ್ಲಿ ಅವುಗಳನ್ನು ಹೆಸರಿಸಬಹುದಾಗಿದೆ. ರೆವರೆಂಡ್ ಕಾಲ್ಡ್‌ವೆಲ್‌ರ *A Comparative Grammar of the Dravidian or South Indian Family of Languages*. ದ್ರಾವಿಡ ಅಥವಾ ದಕ್ಷಿಣ ಭಾರತೀಯ ಭಾಷೆಗಳ ತೌಲನಿಕ ವ್ಯಾಕರಣವು ಗಮನಾರ್ಹ ಕೃತಿಯಾಗಿದೆ. ಕನ್ನಡ ಭಾಷೆಯನ್ನು ಇತರ ದ್ರಾವಿಡ ಭಾಷೆಗಳೊಡನೆ ತೌಲನಿಕವಾಗಿ ವಿವೇಚಿಸಲಾಗಿದೆ. ದ್ರಾವಿಡ ಭಾಷೆಗಳ ಬೈಬಲ್ ಎನಿಸಿಕೊಂಡಿದೆ. ತೌಲನಿಕ ಅಧ್ಯಯನ ಮಾದರಿಯ ಕೃತಿಯನ್ನು ೧೯೫೬ರಲ್ಲಿ ಇಂಗ್ಲೀಷಿನಲ್ಲಿ ರಚಿಸಿ ಕಾಲ್ಡ್‌ವೆಲ್ ಇಡೀ ಪ್ರಪಂಚದ ವಿದ್ವಾಂಸರ ಗಮನ ಸೆಳೆದರು. A Grammar of the Kannada Language, ಇದು ಪ್ರಧಾನವಾಗಿ ಕೇಶಿರಾಜನ ಶಬ್ದಮಣಿದರ್ಪಣವನ್ನಾಧರಿಸಿ ರಚಿತವಾದ ಪ್ರೌಢವ್ಯಾಕರಣ ಗ್ರಂಥ. ನಂತರದಲ್ಲಿ ಹಡ್ಸನ್‌ರ ಕನ್ನಡ ವ್ಯಾಕರಣ, ಜಿಗ್ಲರ್‌ರ ಕನ್ನಡ ಶಾಲಾ ವ್ಯಾಕರಣ ಹಾಗೂ

ಮುಳುಬಾಗಿಲರ ಕನ್ನಡ ನುಡಿಗಟ್ಟು ಪ್ರೌಢ ವ್ಯಾಕರಣ ಗ್ರಂಥಗಳಾಗಿವೆ. ೧೯೪೯ರಲ್ಲಿ ಜೂಲ್ಸ್ ಬ್ಲಾಕ್‌ರ The Grammatical Structure of Dravidian Language, ತೌಲನಿಕ ವ್ಯಾಕರಣ ಗ್ರಂಥವು ಫ್ರೆಂಚ್ ಭಾಷೆಯಲ್ಲಿ ಪ್ರಕಟವಾಯಿತು. ಕಾಲ್ಡವೆಲ್, ಜೂಲ್ಸ್ ಬ್ಲಾಕರ ಕೃತಿಗಳು ಕನ್ನಡಕ್ಕೆ ಮೀಸಲಾದ ಕೃತಿಗಳಲ್ಲವಾದರೂ ಅವೆರಡು ದಕ್ಷಿಣ ಭಾರತೀಯ ಭಾಷೆಗೆ ಸಂಬಂಧಿಸಿದವು. ಭಾಷೆಗಳ ತೌಲನಿಕ ಅಧ್ಯಯನಕ್ಕೆ ಅಮೂಲ್ಯ ಕಾಣಿಕೆಯನ್ನು ನೀಡಿವೆ. ಅಲ್ಲದೆ ಕನ್ನಡ ವ್ಯಾಕರಣದ ಕೆಲವು ಪ್ರಮುಖ ಅಂಶಗಳನ್ನು ಒಳಗೊಂಡಿದ್ದು ಕನ್ನಡ ವ್ಯಾಕರಣ ರಚಿಸುವವರಿಗೆ ಹೊಸ ಆಯಾಮ ಒದಗಿಸಿದವು.

೧೯೩೪ರಲ್ಲಿ ಆರ್. ನರಸಿಂಹ ಚಾರ್ಯರ The History of kannad language ಕೂಡ ಗಮನಾರ್ಹ ಪ್ರೌಢ ವ್ಯಾಕರಣ ಗ್ರಂಥವಾಗಿದೆ. ಮೈಸೂರು ವಿ. ವಿ. ಪ್ರಕಟಿಸಿದ ಕನ್ನಡ ಕೈಪಿಡಿಯ ಒಂದನೆಯ ಸಂಪುಟದ ಒಂದನೆಯ ಭಾಗವಾದ 'ಹಳಗನ್ನಡ ವ್ಯಾಕರಣ'ವು ಪ್ರಾಚೀನ ವ್ಯಾಕರಣ ವಿಷಯಗಳಿಗೆ ಮತ್ತು ಭಾಷಾ ಚರಿತ್ರೆಗೆ ಸಂಬಂಧಿಸಿದ ಮಹತ್ವದ ಕೃತಿಯಾಗಿದೆ. ಅಲ್ಲದೆ ಅವಶ್ಯಕತೆ ಇರುವಲ್ಲಿ ಪ್ರಾಚೀನರ ಅಭಿಪ್ರಾಯದ ವಿವರಣೆಗಳನ್ನು ಸೇರಿಸಲಾಗಿದೆ. ನಿಷ್ಪಕ್ಷಪಾತೆ ಸಂಕ್ಷೇಪ ದೃಷ್ಟಿ, ಭಾವ ಶುದ್ಧಿ ಈ ಕೃತಿ ನಿರೂಪಣೆಯಲ್ಲಿ ಎದ್ದು ಕಾಣುವ ಅಂಶಗಳಾಗಿವೆ.

೧೯೧೪ರಲ್ಲಿ ರಚಿತವಾದ ಹೆರಾಲ್ಡ್ ಸ್ಪೆನ್ಸರ್‌ರ A canareses Grammar, ಪ್ರೌಢ ವ್ಯಾಕರಣದ ಮೇಲೆ ಹಡ್ಸನ್ ಮತ್ತು ಕಿಟೆಲ್‌ರ ಪ್ರಭಾವವಿದೆ. ಇಲ್ಲಿ ವ್ಯಾಕರಣಾಂಶಗಳನ್ನು ವಿಸ್ತಾರವಾಗಿಯೂ ಪರಿಷ್ಕೃತವಾಗಿಯೂ ನಿರೂಪಿಸಲಾಗಿದೆ. ಇಂಗ್ಲೀಶ್ ವಿದ್ಯಾರ್ಥಿಗಳ ಕನ್ನಡ ಕಲಿಕೆಗಾಗಿ ಇಂಗ್ಲೀಶ್‌ನಲ್ಲಿ ಬರೆದ ಈ ಪ್ರೌಢ ವ್ಯಾಕರಣವು ಕನ್ನಡ ಭಾಷೆಯನ್ನು ಬಳಸುವುದರಲ್ಲಿ ಆಸಕ್ತರಾಗಿರುವ ಕನ್ನಡೇತರರಿಗೂ ಅಮೂಲ್ಯ ಕೈಪಿಡಿಯಾಗಿದೆ. ಇದು ಇಂಗ್ಲೀಶ್ ವ್ಯಾಕರಣ ಪದ್ಧತಿಯನ್ನು ಕೈಬಿಟ್ಟು ಕನ್ನಡ ವ್ಯಾಕರಣ ಪದ್ಧತಿಯನ್ನು ಅನುಸರಿಸಿದ ಕೃತಿಯಾಗಿದೆ.

ಕನ್ನಡ ಶಾಸನಗಳ ಭಾಷೆಯನ್ನು ವಿವರಿಸುವ ಹಲವಾರು ಗ್ರಂಥಗಳು ಈ ಅವಧಿಯಲ್ಲಿ ಮೂಡಿ ಬಂದಿವೆ. ಮುಖ್ಯವಾಗಿ ಎ. ಎನ್. ನರಸಿಂಹಯ್ಯನವರ A Grammar of the Oldest Kanarese Inscription, ಎಂಬ ಪಿಎಚ್.ಡಿ. ಪ್ರಬಂಧ ಪ್ರಕಟವಾಯಿತು. ಈ ಗ್ರಂಥ ಆರು ಮತ್ತು ಏಳನೆಯ ಶತಮಾನದ ಕನ್ನಡ ಶಾಸನಗಳ ಭಾಷೆಯನ್ನು ವ್ಯಾಕರಣವನ್ನು ಒಳಗೊಂಡಿದೆ. ೧೯೪೬ರಲ್ಲಿ ಪ್ರಕಟವಾದ ಜಿ. ಎಸ್. ಗಾಯಿಯವರ Historical Grammar of Old Kannada, ಎಂಬ ಪ್ರೌಢ ವ್ಯಾಕರಣ ಗ್ರಂಥವು ಎಂಟು, ಒಂಬತ್ತು, ಹತ್ತನೆಯ ಶತಮಾನದ ಕನ್ನಡ ಶಾಸನಗಳ ಭಾಷೆಯ

ಅಧ್ಯಯನವನ್ನೊಳಗೊಂಡ ಪಿಎಚ್.ಡಿ. ಮಹಾಪ್ರಬಂಧವಾಗಿದೆ. ಡಾ. ಕೆ. ಕುಶಾಲಪ್ಪ ಗೌಡರ A Grammar of Kannada, ಎಂಬ ಪಿಎಚ್.ಡಿ. ಪ್ರಬಂಧವು ಹತ್ತರಿಂದ ಹದಿನಾಲ್ಕನೆಯ ಶತಮಾನದವರೆಗಿನ ಕನ್ನಡ ಶಾಸನಗಳ ಭಾಷೆಯ ವೈಜ್ಞಾನಿಕ ಅಧ್ಯಯನವನ್ನು ಒಳಗೊಂಡ ಪ್ರೌಢ ಪ್ರಬಂಧವಾಗಿದೆ. ಹಾಗೆಯೇ ಎಂ. ಬಿ, ನೇಗಿನಹಾಳರ ಪಿಎಚ್.ಡಿ. ಪ್ರಬಂಧವು ಕ್ರಿ. ಶ. ೪೫೦ರಿಂದ ೫೫೦ರವರೆಗಿನ ಕನ್ನಡ ಶಾಸನಗಳ ಭಾಷಿಕ ಅಧ್ಯಯನವನ್ನೊಳಗೊಂಡಿದೆ. ಇನ್ನೂ ಅನೇಕ ಪ್ರಬಂಧಗಳು ಈ ಮಾದರಿಯಲ್ಲಿಯೇ ಮೂಡಿಬಂದಿರುತ್ತವೆ.

(೧೯೫೦ ರಿಂದ ೧೯೬೫) ಇಪ್ಪತ್ತನೆಯ ಶತಮಾನದ ಆರಂಭದ ಕಾಲದಲ್ಲಿ ಸ್ವಾತಂತ್ರ್ಯದ ಹೋರಾಟದ ಬಿಸಿಯೇರಿದ್ದರಿಂದ ಆ ಕಾಲದಲ್ಲಿ ಅಷ್ಟು ಗಮನಾರ್ಹವಾದ ಕೃತಿಗಳು, ಅಧ್ಯಯನಗಳು ನಡೆಯಲಿಲ್ಲ. ೧೯೪೦ರ ವರೆಗೂ ಎಲ್ಲ ಪ್ರಕಾರಗಳು ಹೋರಾಟಕ್ಕೆ ಮೀಸಲಾಗಿದ್ದವು. ನಂತರ ೧೯೪೦-೫೦ರ ದಶಕದಲ್ಲಿ ಭಾಷೆಯನ್ನು ವೈಜ್ಞಾನಿಕವಾಗಿ ಅಧ್ಯಯನಮಾಡುವ ಕ್ರಮ ಜಾರಿಗೆ ಬಂದಿತು. ಹೀಗೆ ಪಾಶ್ಚಾತ್ಯ ಭಾಷಾವಿಜ್ಞಾನದ ಪ್ರಭಾವದಿಂದ ಕನ್ನಡ ಭಾಷೆಯನ್ನು ವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸುವ ಹಲವಾರು ಕೃತಿಗಳು ಹೊರಬಂದವು. ಎ. ಎನ್. ನರಸಿಂಹಯ್ಯನವರ A Grammar of Oldest Kenarese Inscriptions ೧೯೪೧ ರಲ್ಲಿ ಪ್ರಕಟವಾಯಿತು. ಇಲ್ಲಿ ಆರು ಮತ್ತು ಏಳನೆಯ ಶತಮಾನದ ಶಾಸನಗಳ ಕನ್ನಡ ಭಾಷೆಯನ್ನು ಆಧುನಿಕ ಭಾಷಾವಿಜ್ಞಾನದ ರೀತಿಯಲ್ಲಿ ವರ್ಣನಾತ್ಮಕ ವಿಧಾನದಲ್ಲಿ ಶಾಸ್ತ್ರೀಯವಾಗಿ ವಿವರಿಸಿದರು. ಆ ಮೂಲಕ ಕನ್ನಡ ಭಾಷೆಯ ಶಾಸ್ತ್ರೀಯ ಅಧ್ಯಯನಕ್ಕೆ ಮೊದಲ ಬಾರಿಗೆ ನಾಂದಿ ಹಾಡಿದಂತಾಯಿತು.

ಎ. ಎನ್. ನರಸಿಂಹಯ್ಯನವರ ಕೃತಿಯನ್ನು ಆಧಾರವಾಗಿಟ್ಟುಕೊಂಡು ೧೯೪೬ರಲ್ಲಿ Historical Grammar of Old Kannada, ರಚನೆಯಾಯಿತು. ಇದು ಎಂಟು, ಒಂಬತ್ತು, ಹತ್ತನೆಯ ಶತಮಾನದ ಶಾಸನಗಳ ಕನ್ನಡ ಭಾಷೆಯನ್ನು ವೈಜ್ಞಾನಿಕ ದೃಷ್ಟಿಕೋನದಿಂದ ವಿಶ್ಲೇಷಿಸುತ್ತದೆ. ಎ. ಎನ್. ನರಸಿಂಹಯ್ಯನವರು ಕನ್ನಡದ ಮೊದಲ ಉಪಲಬ್ದ ಶಾಸನದಿಂದಹಿಡಿದು ಏಳನೆಯ ಶತಮಾನದ ಅಂತ್ಯದವರೆಗಿನ ಎಲ್ಲ ಶಾಸನಗಳ ಕನ್ನಡ ಭಾಷೆಯನ್ನು ವೈಜ್ಞಾನಿಕ ದೃಷ್ಟಿಯಿಂದ ವಿಶ್ಲೇಷಿಸಿದರು. ಹೀಗೆ ಮುಂದುವರೆದ ಕಾರ್ಯವು ಹನ್ನೊಂದನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗಿನ ಅಪಾರ ಕನ್ನಡ ಶಾಸನಗಳ ವೈಜ್ಞಾನಿಕ ಅಧ್ಯಯನ ಕಾರ್ಯವೂ ವಿವಿಧ ವಿದ್ವಾಂಸರಿಂದ ಮುನ್ನಡೆಯಿತು. ಈ ಕಾರಣದಿಂದ ೧೯೫೦ರಿಂದ ೧೯೬೫ರ ಹೊತ್ತಿಗೆ ಕನ್ನಡ ವ್ಯಾಕರಣ ಅಧ್ಯಯನ ಕ್ಷೇತ್ರವು

ವಿಸ್ತೃತವಾಯಿತು. ಆ ಮೂಲಕ ಸರಳ ಕನ್ನಡ ವ್ಯಾಕರಣ ಕಾಲವು ಮುಗಿದು ಕನ್ನಡ ಭಾಷೆಯ ವೈಜ್ಞಾನಿಕ ಅಧ್ಯಯನದ ಕಾಲ ಆರಂಭವಾಯಿತು.

೧೯೫೦ರ ನಂತರದ ಕಾಲದಲ್ಲೂ ಡಾ. ತೀ. ನಂ. ಶ್ರೀ, ಶ್ರೀ ನರಸಿಂಹಚಾರ್ಯ, ಡಾ. ಗಾಯಿ, ಡಾ. ರಾ. ಯ. ಧಾರವಾಡಕರ, ಡಾ. ಆರ್. ಸಿ. ಹಿರೇಮಠ, ವಿಲ್ಯಂಬ್ರೈಟ್, ವಿಲಿಯಂ ಮಾಡ್ತಾ, ಡಾ. ಹಾ. ಮ. ನಾಯಕ, ಡಾ. ಎಚ್. ಎಸ್. ಬಿಳಿಗಿರಿ, ಮೊದಲಾದವರು ಸಮಕಾಲೀನ ಭಾಷಾವಿಜ್ಞಾನದ ಮೂಲತತ್ವಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡ ಭಾಷೆಯನ್ನು ವಿಶ್ಲೇಷಿಸಿದರು. ಕನ್ನಡ ಭಾಷಾವಿಜ್ಞಾನ ಕ್ಷೇತ್ರದಲ್ಲಿ ಇದೊಂದು ಮುಂದುವರೆದ ಹಂತವಾಗಿದೆ. ಆನಂತರದಲ್ಲಿ ಕನ್ನಡ ಭಾಷಾ ಅಧ್ಯಯನದ ನವೀನವಾದ ಮಾರ್ಗವೊಂದು ನಿರ್ಮಾಣವಾಯಿತು. ಕನ್ನಡ ಭಾಷೆಗೆ ತಕ್ಕ ವೈಯಾಕರಣ ರಚನೆಯಾಗಬೇಕೆಂದು

೧೯೨೮ರಲ್ಲಿ ಪ್ರತಿಪಾದಿಸಿದ್ದ ವಾದವು ೪೦ ವರ್ಷಗಳ ನಂತರ ಕಾರ್ಯರೂಪಕ್ಕೆ ಬಂದಿತು. ತರುವಾಯ ಹಂತದಲ್ಲಿ ಕನ್ನಡ ಭಾಷೆಗೆ ತಕ್ಕ ವ್ಯಾಕರಣ ರಚಿಸುವ ಕಾರ್ಯ ಆರಂಭವಾಯಿತು.

ಮ. ಪ್ರ. ಪೂಜಾರ್ ಅವರು ಕನ್ನಡ ಮತ್ತು ಸಂಸ್ಕೃತಗಳಲ್ಲಿ ಅಗಾಧ ಪಂಡಿತರು. ಹಳೆಗನ್ನಡದ  ನಾಲ್ಕು ವ್ಯಾಕರಣ ಕೃತಿಗಳಾದ ಶಬ್ದಸ್ಮೃತಿ, ಭಾಷಾಭೂಷಣ, ಶಬ್ದಮಣಿದರ್ಪಣ ಮತ್ತು ಶಬ್ದಾನುಶಾಸನಗಳನ್ನು ಸಾಕಷ್ಟು ಅರ್ಥೈಸಿಕೊಂಡಿದ್ದರು. ಅವರ ವ್ಯಾಕರಣ ಕೃತಿಗಳ ಮೇಲೆ ಇವುಗಳ ಪ್ರಭಾವವನ್ನು ಗುರುತಿಸಬಹುದಾಗಿದೆ. 'ನುಡಿಗನ್ನಡಿ'-ಭಾಗ೧,೨,೩. ಕನ್ನಡ ನುಡಿಗನ್ನಡಿ ಮತ್ತು ಛಂಧೋಮಂಜರಿ ಪುಸ್ತಕಗಳನ್ನು ಶಾಲಾಮಕ್ಕಳಿಗಾಗಿ ಬರೆದಿದ್ದಾರೆ. ಇವು ಕೇಶಿರಾಜ, ಭಟ್ಟಾಕಳಂಕರು ಹೇಳಿದ ವ್ಯಾಕರಣ ವಿಚಾರಗಳನ್ನೇ ಆಧರಿಸಿ ಸುಲಭವಾಗಿ ರಚಿಸಿದ್ದಾರೆ.

ಆಧುನಿಕ ಭಾಷಾಶಾಸ್ತ್ರಜ್ಞರು ಗುರುತಿಸಿರುವಂತೆ 'ಅ' ಕಾರದ ಎರಡು ಉಚ್ಚಾರಗಳನ್ನು ಪೂಜಾರರು ಆಗಲೇ ಗುರುತಿಸಿದ್ದರು. ಶಬ್ದಗಳ ಕೊನೆಯಲ್ಲಿ ಅಕಾರದ ಉಚ್ಚಾರ ವಿಸ್ತೃತವಾಗಿರುತ್ತದೆ. ಶಬ್ದಮಧ್ಯದಲ್ಲಿ ಅಕಾರದ ಉಚ್ಚಾರಣೆ ಸಂಕುಚಿತವಾಗಿರುತ್ತದೆ ಎಂದು ಹೇಳಿದ್ದಾರೆ. ಬಂದ, ಹೋದ ಶಬ್ದಗಳಲ್ಲಿಯ ಅಂತ್ಯ ಅಕರ ಇತರ ಕಡೆಗಳಲ್ಲಿ ಬರುವ 'ಅ' ಕಾರಕ್ಕಿಂತ ವಿಸ್ತೃತವಾಗಿದೆ. ಎಂದು ಉದಾಹರಿಸುತ್ತಾರೆ. ಹೀಗೆ ಕನ್ನಡದ ಉಚ್ಚಾರದಲ್ಲಿ ಅನೇಕ ಸಂಶೋಧನೆಗಳಾಗಬೇಕಿದೆ ಎಂದು ಅನೇಕ ವಿಷಗಳನ್ನು ಕುರಿತು ಗಮನ ಸೆಳೆಯುತ್ತಾರೆ.

ಗಮಕ ಸಮಾಸ, ಕೃದಂತ ವಿಶೇಷಣ, ಅಂಶಿಸಮಾಸದ ಬಗ್ಗೆ ಕೇಶಿರಾಜ ಮತ್ತು ಭಟ್ಟಾಕಳಂಕನನ್ನು ತೌಲನಿಕವಾಗಿ ಯೋಚಿಸಿ ಭಟ್ಟಾಕಳಂಕನ ನಿಲುವನ್ನು ಒಪ್ಪುತ್ತಾರೆ. ಬಹುವ್ರಿಹಿ ಸಮಾಸ ಕನ್ನಡಕ್ಕೆ ಬೇಕೆ? ಎಂದು ಪ್ರಶ್ನಿಸುತ್ತಾರೆ. ಬಹುವ್ರಿಹಿ ಸಮಾಸ ಬಹಳಷ್ಟು ಕಡೆಗಳಲ್ಲಿ ತದ್ಧಿತಾಂತಗಳಂತೆ ವರ್ತಿಸುತ್ತದೆಯಾದ್ದರಿಂದ ಬಹುವ್ರಿಹಿ ಸಮಾಸವನ್ನು ಬಿಟ್ಟರೂ ಕನ್ನಡಕ್ಕೆ ನಷ್ಟವಿಲ್ಲವೆನ್ನುತ್ತಾರೆ ಮ.ಪ್ರ.ಪೂಜಾರ ಅವರು. ಹೀಗೆ ಹತ್ತು ಹಲವು ಸಂಗತಿಗಳನ್ನು ಕುರಿತು ಯೋಚಿಸುವ ಪೂಜಾರರು ಎಂಬತ್ತಕ್ಕೂ ಹೆಚ್ಚು ಕೃತಿಗಳನ್ನುರಚಿಸಿದ್ದಾರೆ. ಹಾಗೆಯೇ ಕನ್ನಡದಲ್ಲಿ ವರ್ಣನಾತ್ಮಕ ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಕೇಳಿಬರುವ ಪ್ರಮುಖ ಹೆಸರುಗಳಲ್ಲಿ ಆರ್. ಸಿ. ಹಿರೇಮಠ ಅವರದು ಸಹ ಆಗಿದೆ. ಭಾಷೆಯ ವಿವಿಧ ಅವಸ್ಥೆಗಳನ್ನು, ವಿವಿಧ ಮಾರ್ಗಗಳನ್ನು ವಿವಿಧ ರೀತಿಯ ಉಪಯೋಗಗಳನ್ನು ಇದ್ದಕ್ಕಿದ್ದಂತೆ ಪ್ರತಿಕೃತಿಸಬೇಕು ಎಂಬ ಧೋರಣೆಯಿಂದ ವರ್ಣನಾತ್ಮಕ ಭಾಷಾವಿಜ್ಞಾನ ಕ್ಷೇತ್ರವು ಅಧ್ಯಯನದ ವ್ಯಾಪ್ತಿಯನ್ನು ನಿರ್ಮಿಸಿಕೊಂಡಿತು. ವರ್ಣನಾತ್ಮಕ ಭಾಷಾವಿಜ್ಞಾನದ ಶೋಧಗಳನ್ನು ಕಾಲಕ್ರಮದಲ್ಲಿ ಇಟ್ಟು ನೋಡುವ, ಬದಲಾವಣೆಗಳ ಸೂತ್ರ ಕಂಡುಹಿಡಿಯುವ, ಇತರ ಜ್ಞಾತಿ ಭಾಷೆಗಳೊಡನೆ ಹೋಲಿಸಿನೋಡುವ ತಾರ್ಯಕ್ಕಾಗಿ ಐತಿಹಾಸಿಕ ಮತ್ತು ತೌಲನಿಕ ವಿಜ್ಞಾನಗಳು ಹುಟ್ಟಿದವು. ಆದರೆ ವರ್ಣನಾತ್ಮಕ ಭಾಷಾವಿಜ್ಞಾನ ಮಾತ್ರ ತನ್ನ ನಿರ್ಣಯಗಳನ್ನು ಕೇವಲ ಆಕರ ಸಾಕ್ಷಿಗಳ ಮೇಲೆಯೇ ನಿಂತಿತು. ಆಕರಗಳನ್ನು ಕೊಟ್ಟರೆ ಅದರಿಂದ ಹೊರಡುವ ನಿರ್ಣಯ ಸ್ವತಹ ಸಿದ್ಧವಾಗುತ್ತದೆ. ಈ ಅರ್ಥದಲ್ಲಿ ಭಾಷಾವಿಜ್ಞಾನದ ನಿರ್ಣಯಗಳೆಲ್ಲ ಆಕರಗಳು ಹೇಳುವ ಸತ್ಯದ ಪುನರುಕ್ತಿ ಎನ್ನಬಹುದು.

ಡಾ. ಆರ್. ಸಿ. ಹಿರೇಮಠರ Structer of Kannada ೧೯೬೨ರಲ್ಲಿ ರಚಿಸಲಾದ ಕೃತಿಯು ಅಂತಹದೊಂದು ವರ್ಣನಾತ್ಮಕ ವಿಶ್ಲೇಷಣೆಯಾಗಿದೆ. ಧಾರವಾಡದ ಬ್ರಾಹ್ಮಣೇತರರು ಮಾತನಾಡುವ ಭಾಷೆಯ ಬಗೆಗೆ ವಿವರಗಳು ಬೇಕಾದಲ್ಲಿ ಈ ಗ್ರಂಥಕ್ಕೆ ಹೋಗಬೇಕು ಎನ್ನವಷ್ಟು ಸಮೃದ್ಧವಾಗಿದೆ. ವಿಲಿಯಂ ಬ್ರೈಟ್ Outline of colloquial Kannada , ಮೈಸೂರಿನ ಬ್ರಾಹ್ಮಣರ ಆಡುಮಾತಿನ ವಿಶ್ಲೇಷಣೆಯಾಗಿದೆ. ಡಿ. ಎನ್. ಶಂಕರ ಭಟ್ ಅವರು ಸಂಪಾದಿಸಿದ Linguistic Survey ಪುಸ್ತಕಮಾಲೆಯಲ್ಲಿ ಕರ್ನಾಟಕದ ಬೇರೆ ಬೇರೆ ಭಾಗಗಳ ಕನ್ನಡಗಳ ವರ್ಣನೆ ಸಿಗುವುದು. Structer of Kannada ದಲ್ಲಿ ಧ್ವನಿಮಾ ಆಕೃತಿಮಾ ಮತ್ತು ವಾಕ್ಯವಿಶ್ಲೇಷಣೆ ಎಂಬ ಮೂರು ಮುಖ್ಯಭಾಗಗಳಿವೆ. ಮೊದಲನೆಯ ಧ್ವನಿಮಾ ವಿಭಾಗಗಳಲ್ಲಿ ಸ್ವರ ಮತ್ತು ವ್ಯಂಜನ ಧ್ವನಿಮಾಗಳ ವಿವರಣೆ ಬಂದು ಧ್ವನಿಗಳ ಏರಿಳಿತ

ಹಾಗೂ ಸಂಧಿಯ ವಿವರಗಳು ಹೇಳಲ್ಪಟ್ಟಿವೆ. ಎರಡನೆಯ ವಿಭಾಗದಲ್ಲಿ ನಾಮಪದ ಮತ್ತು ಕ್ರೀಯಾಪದಗಳ ಆಕೃತಿಮಾ ವಿವರಣೆ ಇದೆ. ನಾಮ ಹಾಗೂ ಕ್ರೀಯೆಯ ವ್ಯುತ್ಪತ್ತಿಗಳು ಚರ್ಚೆಗೊಳಗಾಗಿವೆ. ಮೂರನೆಯ ಭಾಗದಲ್ಲಿ ವಾಕ್ಯರಚನೆಯ ಚರ್ಚೆ ಇದೆ. ವಾಕ್ಯ ಭೋದನೆಯ ಪ್ರಕಾರಗಳು ಶಬ್ದಾನುಕ್ರಮ, ವಾಕ್ಯಖಂಡನೆಗಳ ರಚನೆ, ವಿಭಕ್ತಿ ಪಲ್ಲಟಗಳೇ ಅಲ್ಲದೆ ಧಾರವಾಡದವೇ ಆದ ಕೆಲವು ಪ್ರಯೋಗಗಳ ಚರ್ಚೆ ಇದೆ. ಎಕಾರದ ಕೆಳಸ್ತರದ ಉಚ್ಚಾರಣೆಯಾದ ಹ್ರಸ್ವ ಅ್ಯ ಹಾಗೂ ದೀರ್ಘ ಆ್ಯ ಗಳ ವಿಭೇದ ಹಾಗೂ ಒಕಾರದ ಕೆಳಸ್ತರದ ಉಚ್ಚಾರಣೆಯಾದ ಹ್ರಸ್ವ ಒ ಮತ್ತು ದೀರ್ಘ ಓಗಳ ವಿಭೇದಗಳನ್ನು ತೋರಿಸಿದುದು ವಿಶೇಷ. ಕಾವು ಎಂದರೆ ಉಷ್ಣತೆ, ಕಾವು ಎಂದರೆ ಕೊಡಲಿಯಂಥ ಸಲಕರಣೆಯ ಹಿಡಿಕೆ, ಈ ಶಬ್ದಗಳಲ್ಲಿ ಅನುನಾಸಿಕವು ನಿರನುನಾಸಿಕದ ಜೊತೆ ತೋರುವ ವಿಭೇದವನ್ನು ಹೇಳುತ್ತಾರೆ. ಅಂಗಳ ಎಂದರೆ ಮನೆಯ ಮುಂದಿನ ಬಯಲು, ಅಂಗಳ ಎಂದರೆ ಬಾಯಿಯ ಮೇಲ್ಭಾಗ. ಈ ಮೊದಲಾದ ಶಬ್ದಗಳಲ್ಲಿ ಕಾಣುವ ಆ ಮತ್ತು ಅದರ ಎತ್ತರಿಸಿದ ಉಚ್ಚಾರವಾದ ಅ ಗಳ ವಿಭೇದ ಧಾರವಾಡ ಕನ್ನಡದ ಅನೇಕ ಪದಗಳಲ್ಲಿ ಕಾಣುತ್ತದೆ ಎಂಬುದನ್ನು ಮೊದಲಿಗೆ ತೋರಿಸಿಕೊಟ್ಟಿದ್ದಾರೆ.

ಪ್ರಾಚೀನ ಕನ್ನಡ ವ್ಯಾಕರಣಗಳು ಕನ್ನಡದಲ್ಲಿ ಸಮರ್ಥವಾಗಿ ರಚಿತವಾಗಿದ್ದಂತೆ ಆಧುನಿಕ ಭಾಷಾಶಾಸ್ತ್ರದ ಸನ್ನಿವೇಶದಲ್ಲೂ ಸಹ ಅಷ್ಟೇ ಹಿನ್ನೆಲೆಯ ಆಯಾಮದ ಮುಂದುವರಿಕೆಯಾಗಿ ಚಲಿಸಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಯುರೋಪಿನಿಂದ ಬಂದ ಭಾಷಾಶಾಸ್ತ್ರಜ್ಞರು ಕನ್ನಡ ಭಾಷೆಗೆ ಇಂಗ್ಲೀಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ರಚಿಸಲು ಯತ್ನಿಸಿದರು. ಒಂದು ಮಿತಿಯಾದ ಪಠ್ಯದ ಮಾದರಿಯನ್ನು ಮತ್ತು ಭಾಷೆಯನ್ನು ಕಲಿಯಲು ಅನುವಾಗುವ ಮಾದರಿಯನ್ನು ಮೀರಿ ಭಾಷೆಯನ್ನು ಅರ್ಥಮಾಡಿಕೊಳ್ಳಲು ಮುಂದಾಗಲಿಲ್ಲವೆಂದು ಕಾಣುತ್ತದೆ. ಆದರೆ ತೀನಂಶ್ರೀಯವರು ಅಂತಹದೊಂದು ಪ್ರಯತ್ನವನ್ನು ಕನ್ನಡ ಮಧ್ಯಮ ವ್ಯಾಕರಣದ ಮೂಲಕ ಆ ಕೊರತೆಯನ್ನು ನೀಗಿಸುತ್ತಾರೆ. ೧೮೮೦ರಿಂದ ೧೯೩೫ರವರೆಗೆ ಕನ್ನಡದ ಪ್ರಾಚೀನ ವ್ಯಾಕರಣಗಳಿಂದಲೆ ಆಕರಗಳನ್ನು ರೂಪಿಸಿಕೊಂಡು ಕನ್ನಡ ವ್ಯಾಕರಣದ ಪಠ್ಯ ಪುಸ್ತಕಗಳು ಹುಟ್ಟಿಕೊಂಡವು. ಕನ್ನಡದ ಪ್ರಾಚೀನ ವ್ಯಾಕರಣ ಗ್ರಂಥಗಳಿಂದ ತಮ್ಮ ಆಕರಗಳನ್ನು ರೂಪಿಸಿಕೊಳ್ಳುತ್ತಿದ್ದುದರಿಂದ ಆ ವ್ಯಾಕರಣದ ನಿಯಮಗಳು ಹಳೆಗನ್ನಡಕ್ಕೆ ಹೆಚ್ಚು ನಿಕಟವಾಗಿ ಹೊಸಗನ್ನಡದಿಂದ ತುಸು ದೂರವೇ ಉಳಿದವು. ೧೯೨೮ರ ಸುಮಾರಿಗೆ ನಾ. ಶ್ರೀ. ರಾಜಪುರೋಹಿತರು ಪ್ರಸ್ತುತವಾದ ಕನ್ನಡ ಭಾಷೆಗೆ ತಕ್ಕುದಾದ ವ್ಯಾಕರಣದ ಅಗತ್ಯತೆಯನ್ನು ಕುರಿತು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ

ಪ್ರತಿಪಾದಿಸಿದ್ದರು. ಪರಿಣಾಮವಾಗಿ ಕೃಷ್ಣಮಾಚಾರ್ಯರು ಹೊಸಗನ್ನಡ ನುಡಿಗನ್ನಡಿ ೧೮೮೨ರಲ್ಲಿ, ದೊಂಡೋ ನರಸಿಂಹ ಮುಳಬಾಗಿಲು ಅವರ ನುಡಿಗಟ್ಟು ೧೮೮೨ರಲ್ಲಿ ರಚನೆಯಾದವುಗಳನ್ನು ಬಿಟ್ಟರೆ ಉಳಿದಂತೆ ಅಂತಹ ಪ್ರಯತ್ನವೇನೂ ಕಾಣಲಿಲ್ಲ.

ತೀನಂಶ್ರೀಯವರು ಬಿ.ಎಂ.ಶ್ರೀ, ಡಿ.ಎಲ್.ಎನ್.ಅವರ ಗರಡಿಯಲ್ಲಿ ತರಬೇತುಗೊಂಡು ಕನ್ನಡದ ಹಲವು ಉಪಯುಕ್ತ ಕಾರ್ಯಗಳನ್ನು ಮಾಡಿದ್ದಾರೆ. ವ್ಯಾಕರಣ, ಭಾಷಾಶಾಸ್ತ್ರ, ಅಲಂಕಾರಶಾಸ್ತ್ರ, ಛಂದಸ್ಸು, ಗ್ರಂಥಸಂಪಾದನೆ ಮತ್ತು ಸಾಹಿತ್ಯ ವಿಮರ್ಶೆಯ ಕ್ಷೇತ್ರದಲ್ಲಿ ಸಾಕಷ್ಟು ಹೊಸ ವಿಚಾರಗಳನ್ನು, ದೃಷ್ಟಿಕೋನಗಳನ್ನು ಮೂಡಿಸಿದ್ದಾರೆ. ಭಾರತೀಯ ಮತ್ತು ಪಾಶ್ಚಾತ್ಯ ಭಾಷಾಶಾಸ್ತ್ರದ ಅಭ್ಯಾಸವನ್ನು ಮಾಡಿದ್ದಲ್ಲದೆ ಕನ್ನಡ ಭಾಷೆಯನ್ನು ಕುರಿತು ಭಾಷಾವಿಜ್ಞಾನದ ಬೇಸಿಗೆ ಶಾಲೆಯ ತರಬೇತಿಗಳಲ್ಲಿ ಅನೇಕ ವಿಷಯಗಳನ್ನು ಮಂಡಿಸಿದ್ದಾರೆ. The Mutation of i e u and o in Kannada ಎಂಬ ಲೇಖನದಲ್ಲಿ ಹಳಗನ್ನಡದ ಕಿಡು-ಕೆಡು, ಕುಡು-ಕೊಡು ಆದ ಧ್ವನಿ ವ್ಯತ್ಯಾಸದ ನಿಯಮಗಳ ಇತಿಮಿತಿಯನ್ನು ಗುರುತಿಸಿದ್ದಾರೆ. English as the Kannadiga Speaks it ಎಂಬ ಲೇಖನದಲ್ಲಿ ಕನ್ನಡಿಗರು ಮಾತಾಡುವ ಇಂಗ್ಲೀಷು ಮೂಲ ಇಂಗ್ಲೀಷಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ವಿವರಿಸುತ್ತಾರೆ. ಕನ್ನಡದಲ್ಲಿ ಪ್ರಾಂತ ಭೇದಗಳಿರುವಂತೆಯೇ ಇಂಗ್ಲೀಷಿನಲ್ಲಿ ಇವೆ ಎಂಬುದನ್ನು ವಿವರಿಸುತ್ತಾರೆ. ಕನ್ನಡದ ನಾಲಿಗೆ ನುಡಿಯರಿಗರಿಗೆ ಇಂಗ್ಲೀಷನ್ನು ಉಚ್ಚರಿಸಿದರೆ ವ್ಯತ್ಯಾಸ ಕಂಡುಬರುತ್ತದೆ. ಉದಾಹರಣೆಗೆ ಟಿಕೆಟ್ (ತಿಕೀಟು), ಡೇಟ್ (ದಿನಾಂಕ) ಮೊದಲಾದ ಶಬ್ದಗಳಲ್ಲಿ ಬರುವ ಇಂಗ್ಲೀಷಿನ ವರ್ತ್ಸ್ಯ ಣ, ಜ ಗಳು ಕನ್ನಡದಲ್ಲಿ ಮೂರ್ಧನ್ಯ ಟ್, ಡ್ ಗಳಾಗುತ್ತವೆ. ಹಾಗೆಯೆ ಕೋಲೇಜ್-ಕಾಲೇಜ್ ಆಗುತ್ತದೆ. ತೀ.ನಂ.ಶ್ರೀಯವರ ಕನ್ನಡ ಮಧ್ಯಮ ವ್ಯಾಕರಣ ಜನಪ್ರೀಯಗೊಂಡಿತು. ಭಾಷಾಶಾಸ್ತ್ರೀಯ ದೃಷ್ಟಿಕೋನದಿಂದ ವ್ಯಾಕರಣದ ನಿಯಮಗಳನ್ನು ಹೇಳಿ ನಂತರ ಉದಾಹರಣೆಗಳನ್ನು ನೀಡಿದ್ದು ಎಲ್ಲರಿಗೂ ಗಮನಸೆಳೆಯುವ ಮಹತ್ವದ ಕೃತಿಯಾಗಿತ್ತು. ಇದಲ್ಲದೆ ಹತ್ತಕ್ಕೂ ಹೆಚ್ಚು ಲೇಖನಗಳನ್ನು ಭಾಷಾಶಾಸ್ತ್ರದ ದೃಷಿಕೋನದಲ್ಲಿ ರಚಿಸಿದ್ದಾರೆ.

ಕನ್ನಡ ಭಾಷೆಯನ್ನು ಆಧುನಿಕ ಭಾಷಾವಿಜ್ಞಾನದ ತತ್ವಗಳ ಆಧಾರದ ಮೇಲೆ ಪ್ರೊ. ತೀ. ನಂ. ಶ್ರೀ. ಅವರು 'ಕನ್ನಡ ಮಾಧ್ಯಮ ವ್ಯಾಕರಣ' ಬರೆದರು. ಇದು ಕನ್ನಡ ವ್ಯಾಕರಣ ಕ್ಷೇತ್ರಕ್ಕೆ ಸಂದ ಒಂದು ಮಹತ್ವದ ಕಾಣಿಕೆ. ಹಾಗೆಯೇ ಇಂಗ್ಲೆಂಡಿನಲ್ಲೂ ಭಾಷಾಶಾಸ್ತ್ರ ಅಧ್ಯಯನಮಾಡಿ ಬಂದ ಶಿ. ಚೆ. ನಂದಿಮಠರು ವ್ಯಾಕರಣ, ಭಾಷಾಶಾಸ್ತ್ರಗಳನ್ನೂ ಅಧ್ಯಯನಮಾಡಿದ ಶ್ರೇಷ್ಟ ವಿದ್ವಾಂಸರು. ( ಬಿ. ಎಂ. ಶ್ರೀ, ಡಿ.

ಎಲ್. ಎನ್. ಮುಂತಾದವರು ಭಾಷಾ ಕ್ಷೇತ್ರದಿಂದ ದೂರ ಉಳಿದರು ). ೧೯೩೩ರಲ್ಲಿ ಶಂಬಾ ಜೋಶಿಯವರ "ಕನ್ನುಡಿಯ ಹುಟ್ಟು" ಹಾಗೂ ೧೯೩೯ರಲ್ಲಿ 'ಕನ್ನಡದ ನೆಲೆ' ಬೆಳಕು ಕಂಡವಾದರೂ ಅವು ತಮ್ಮ ಭಾವನಾತ್ಮಕ ಬರವಣಿಗೆಯಿಂದಾಗಿ ಮಹತ್ವ ಪಡೆಯದೆ ಹೋದವು. ಪ್ರ. ಗೋ. ಕುಲಕರ್ಣಿಯವರ 'ಕನ್ನಡ ಭಾಷೆಯ ಚರಿತ್ರೆ' ವಿಶಿಷ್ಟ ಶೈಲಿಯ ವ್ಯಾಕರಣ ಕೃತಿಯಾಗಿದ್ದು, ವರ್ಣನಾತ್ಮಕ, ತೌಲನಿಕ ಭಾಷಾವಿಜ್ಞಾನದ ತತ್ವಗಳ ಸ್ಥೂಲವಾದ ಕಲಸು ಮೇಲೋಗರದಂತಿದೆ. ಡಾ. ಎಚ್. ಎಸ್. ಬಿಳಿಗಿರಿಯವರು 'ಆಲೋಕ' 'ವರ್ಣನಾತ್ಮಕ ವ್ಯಾಕರಣ' ಕೃತಿಗಳನ್ನೂ ಬರೆದರು.

ಈ ಕಾಲಘಟ್ಟದಲ್ಲಿ ಪ್ರಾಚೀನ ವ್ಯಾಕರಣ ಗ್ರಂಥಗಳ ಪ್ರಕಟಣೆ ಹಾಗೂ ಸಂಪಾದನೆಯ ಕಾರ್ಯವೂ ನಡೆಯಿತು. ಕೇಶಿರಾಜನ 'ಶಬ್ದಮಣಿ ದರ್ಪಣ'ವನ್ನೂ ಮರು ಪರಿಶೀಲಿಸಿ ಸಂಪಾದಿಸುವ ಪ್ರಯತ್ನ ನಡೆದವು, ಈ ಕ್ಷೇತ್ರದಲ್ಲಿ ದುಡಿದವರು ಡಿ. ಪದ್ಮನಾಭ ಶರ್ಮ, ದೊಡ್ಡ ಸ್ವಾಮಿ, ಶಂಭುಲಿಂಗಪ್ಪ ಬಿ. ಟಿ., ಸಾಸನೂರು ಹಾಗೂ ಡಾ. ಎಮ್. ಎಮ್. ಕಲಬುರ್ಗಿ ಪ್ರಮುಖರು.

೧೯೫೬ ರಲ್ಲಿ ಭಾಷಾವಾರು ರಾಜ್ಯಗಳ ಅಸ್ತಿತ್ವದ ಫಲವಾಗಿ ಕನ್ನಡಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯುವಂತಾಯಿತು. ಆಧುನಿಕ ಭಾಷಾವಿಜ್ಞಾನವು ಹಲವಾರು ವಿದ್ವಾಂಸರನ್ನು ತನ್ನತ್ತ ಆಕರ್ಷಿಸಿತು. ಕನ್ನಡ ಭಾಷೆಯ ತೌಲನಿಕ, ಐತಿಹಾಸಿಕ, ವರ್ಣನಾತ್ಮಕ ರೀತಿಯಲ್ಲಿ ವಿಶ್ಲೇಷಿಸುವ ಕಾರ್ಯ ಆರಂಭವಾಯಿತು. ಜೊತೆಗೆ ಶಾಸನ ನಾಣ್ಯಗಳ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸುವ ಪ್ರಯತ್ನವು ಪ್ರಾರಂಭವಾಯಿತು. ೧೯೫೮ರಲ್ಲಿ ವಿಲಿಯಂ ಬ್ರೈಟ್ (William Bright) ಅವರ An Outline of Colloquial Kannada ಎಂಬ ಕೃತಿ ಪ್ರಕಟವಾಯಿತು. ಇದು ಪ್ರಾದೇಶಿಕ ಭಾಷೆ ಆಡುನುಡಿಯನ್ನು ವೈಜ್ಞಾನಿಕವಾಗಿ ಚರ್ಚಿಸುವ ಪ್ರಯತ್ನದ ಫಲವಾಗಿ ರಚನೆಯಾದ ಕೃತಿಯಾಗಿದೆ. ೧೯೬೧ರಲ್ಲಿ ಡಾ. ಆರ್. ಸಿ. ಹಿರೇಮಠ ಅವರ The Structure of Kannada ಪ್ರಕಟವಾಯಿತು. ಭಾರತದಲ್ಲಿ ಪ್ರಥಮ ಬಾರಿಗೆ ಒಂದು ಪ್ರದೇಶದ ಆಡು ನುಡಿಯನ್ನು ಆರಿಸಿಕೊಂಡು ವರ್ಣನಾತ್ಮಕವಾಗಿ ರಚಿಸಿದ ವ್ಯಾಕರಣ ಎಂಬ ಕೀರ್ತಿ ಈ ಗ್ರಂಥಕ್ಕಿದೆ. ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯ ಕನ್ನಡವನ್ನು ಅಥವಾ ಧರವಾಡ ಬೆಳಗಾಂವ್ ಬಿಜಾಪೂರ ಭಾಗಗಳಲ್ಲಿ ಪ್ರಚಲಿತವಿರುವ ಧಾರವಾಡ ಕನ್ನಡದ ಆಡುನುಡಿಯನ್ನು ವಿಶ್ಲೇಷಿಸುವ ಒಂದು ಗ್ರಂಥವಿದು. ಈ ಗ್ರಂಥದಲ್ಲಿ ಧ್ವನಿಮಾ ವಿಜ್ಞಾನ (Phonology) ಮತ್ತು ಆಕೃತಿಮಾ ವಿಜ್ಞಾನ (Morphology)ಎಂಬ ಎರಡು ಪ್ರಧಾನ ಖಂಡಗಳಿವೆ. ಮೊದಲ ಧ್ವನಿಮಾ ವಿಜ್ಞಾನ ಖಂಡದಲ್ಲಿ ನಾಲ್ಕು ಪ್ರಕರಣಗಳಿದ್ದರೆ, ಎರಡನೆಯ ಆಕೃತಿಮಾ ಖಂಡದಲ್ಲಿ ಆರು ಪ್ರಕರಣಗಳಿವೆ. ಈ

ಗ್ರಂಥದಲ್ಲಿ ಆಧುನಿಕ ಭಾಷಾವಿಜ್ಞಾನದ ಪ್ರಭೇದ ಹಾಗೂ ಪದ್ಧತಿಗಳಿಗೆ ಸಂಬಂಧಿಸಿದ ಮುನ್ನುಡಿ ಇದ್ದು ಅಭ್ಯಾಸಕ್ಕೆ ಅನುಕೂಲವಾಗುವ ಶಬ್ದಾನುಕ್ರಮ ಪಟ್ಟಿಯೂ ಇದರಲ್ಲಿ ಸೇರಿದೆ. ೧೯೬೨ರಲ್ಲಿ ಎಂ. ಎಸ್. ಆಂಡ್ರನೋವ್ (M.S.Andronov) ಅವರ Kannada Language ಗ್ರಂಥ ರಷ್ಯನ್ ಭಾಷೆಯಲ್ಲಿ ಮೊದಲಬಾರಿಗೆ ಪ್ರಕಟವಾಯಿತು. ಕನ್ನಡ ವ್ಯಾಕರಣವನ್ನು ಪ್ರಥಮ ಭಾರಿಗೆ ರಷ್ಯನ್ ಭಾಷೆಯಲ್ಲಿ ವಿಶ್ಲೇಷಿಸಿದ ಕೃತಿ ಇದಾಗಿದೆ.

ಕನ್ನಡದಲ್ಲಿ ಭಾಷಾ ವಿಜ್ಞಾನದ ಮೂಲ ತತ್ವಗಳನ್ನು ಕುರಿತು ಪ್ರಕಟವಾದ ಗ್ರಂಥಗಳಲ್ಲಿ ಕಾಲದ ದೃಷ್ಟಿಯಿಂದ ಪ್ರೊ. ಜಾಹಾಗೀರದಾರರ 'ಶಾರದೆಯ ಸಂಸಾರ' ಮೊದಲನೆಯದು. ಆದರೆ ೧೯೬೫ರಲ್ಲಿ ಪ್ರಕಟವಾದ ಡಾ. ಎಂ. ಚಿದಾನಂದ ಮೂರ್ತಿಯವರ ಭಾಷಾವಿಜ್ಞಾನದ ಮೂಲತತ್ವಗಳು ಎಂಬ ಕೃತಿ ವೈಜ್ಞಾನಿಕ ದೃಷ್ಟಿಯಿಂದ ವಿಸ್ತರಣಗೊಂಡ ಆಧುನಿಕ ವಿಚಾರಧಾರೆಯಲ್ಲಿ ಭಾಷಾವಿಜ್ಞಾನದ ಮೂಲತತ್ವಗಳನ್ನು ಕುರಿತು ಕನ್ನಡದಲ್ಲಿ ಮೊದಲಬಾರಿಗೆ ಬರೆದು ಪ್ರಕಟವಾದ ಕೃತಿಯಾಗಿದೆ. ಈ ಕೃತಿ ಮುಖ್ಯವಾಗಿ ವಿದ್ಯಾರ್ಥಿಗಳನ್ನು ಹಾಗೂ ಭಾಷಾವಿಜ್ಞಾನದ ಪರಿಚಯ ಮಾಡಿಕೊಳ್ಳಬಯಸುವ ವಿದ್ವಾಂಸರನ್ನು ದೃಷ್ಟಿಯಲ್ಲಿರಿಸಿಕೊಂಡು ರಚಿತವಾಗಿದೆ. ಡಾ. ಎಂ. ಚಿದಾನಂದ ಮೂರ್ತಿ ಹೇಳುವಂತೆ ಈ ಗ್ರಂಥದಲ್ಲಿ ಐತಿಹಾಸಿಕ ಭಾಷಾವಿಜ್ಞಾನಕ್ಕೆ ಹೆಚ್ಚು ಪ್ರಾಮುಖ್ಯತೆ ಸಿಕ್ಕಿದೆ. ಈ ಗ್ರಂಥದ ಹನ್ನೊಂದನೆಯ ಅಧ್ಯಾಯದಲ್ಲಿ ವಿವರಣಾತ್ಮಕ, ಐತಿಹಾಸಿಕ, ತೌಲನಿಕ ಭಾಷಾವಿಜ್ಞಾನಗಳ ಸ್ಥೂಲ ಪರಿಚಯ ಮಾಡಿಕೊಡಲಾಗಿದೆ. ಇದು ನೇರವಾಗಿ ಕನ್ನಡ ಭಾಷಾವಿಜ್ಞಾನಕ್ಕೆ ಸಂಬಂಧಿಸಿದ ಕೃತಿಯಲ್ಲ, ಸಾಮಾನ್ಯ ಭಾಷಾವಿಜ್ಞಾನವನ್ನು ಕುರಿತದ್ದು. ಆದರೂ ಪರೋಕ್ಷವಾಗಿ ಕನ್ನಡ ಭಾಷೆಯ ವಿಜ್ಞಾನಕ್ಕೆ ಸಂಬಂಧಿಸಿದೆ. ಕನ್ನಡ ಭಾಷೆಯ ದೃಷ್ಟಿಯಿಂದ ಅಲ್ಲಲ್ಲಿ ತತ್ವಗಳನ್ನು ವಿವೇಚಿಸಿದೆ. ಕನ್ನಡದಿಂದ ಅನೇಕ ಉದಾಹರಣೆಗಳನ್ನು ಆಯ್ದುಕೊಡಲಾಗಿದೆ. ಕನ್ನಡ ಭಾಷೆಯಲ್ಲಿ ರಚಿತವಾದ ಈ ಕೃತಿ ಭಾಷಾವಿಜ್ಞಾನದ ತಿರುಳನ್ನು ಕನ್ನಡದಲ್ಲಿ ಸರಳವಾದ ಶೈಲಿಯಲ್ಲಿ ಮೂಡಲು ಪ್ರಯತ್ನಿಸಿದೆ. ಭಾಷಾವಿಜ್ಞಾನ ಕ್ಷೇತ್ರದಲ್ಲಿ ಈ ಗ್ರಂಥ ಅಪೂರ್ವ ಸ್ಥಾನ ಪಡೆದುಕೊಂಡಿದೆ. ಈ ಗ್ರಂಥವು ಪ್ರಾಚೀನ ಭಾಷಾತತ್ವ ವಿವರಣೆಗಳ ಸರಳ ಸಂಕ್ಷಿಪ್ತ ಕನ್ನಡ ನಿರೂಪಣೆಯಾಗಿದ್ದರೂ ಲೇಖಕರು ಅಲ್ಲಲ್ಲಿ ಸ್ವಂತ ಅಧ್ಯಯನದ ಅಂಶಗಳನ್ನು ಸಂಶೋಧನೆಯ ಫಲಿತಗಳನ್ನು ವಿರಳವಾಗಿ ಸೇರಿಸಿದ್ದು ಗಮನಿಸಲೇಬೇಕಾದ ಸಂಗತಿಯಾಗಿದೆ. ಅಲ್ಲದೆ ಸರಳವಾದ ಶೈಲಿಯನ್ನು ಹೊಂದಿದೆ.

೧೯೬೦ರಲ್ಲಿ ಮೈಸೂರು ವಿ. ವಿ. ಯಿಂದ ಪ್ರಕಟವಾದ 'ಸುವರ್ಣ ಸಂಚಯ'ದಲ್ಲಿ ಕನ್ನಡ ಭಾಷೆಯ ಸ್ವರೂಪವನ್ನು ಕುರಿತು ಏಳು ಉಪಯುಕ್ತ ಲೇಖನಗಳಿವೆ. ಈ ಲೇಖನಗಳು ಪ್ರಧಾನವಾಗಿ ಕನ್ನಡ ಭಾಷೆಯ ಪ್ರಾದೇಶಿಕ ಪ್ರಭೇದಗಳ ಸ್ವರೂಪವನ್ನು ಕುರಿತು ವಿವೇಚಿಸಿರುವುದು ಗಮನಾರ್ಹ ಸಂಗತಿಯಾಗಿದೆ. ಆ ಏಳು ಲೇಖನಗಳು ಕೆಳಗಿನಂತಿವೆ.

೧. ಕನ್ನಡ ಭಾಷೆ - ಇಂದು – ಪ್ರೊ. ದೇ. ಜ. ಗೌ.

೨. ಹಳೆಯ ಮೈಸೂರು ಕನ್ನಡ – ಡಾ. ಎಂ. ಚಿದಾನಂದ ಮೂರ್ತಿ

೩. ಧಾರವಾಡ ವಿಜಾಪೂರಗಳ ಕನ್ನಡ - ಡಾ. ಆರ್. ಸಿ. ಹಿರೇಮಠ

೪. ದಕ್ಷಿಣ ಕನ್ನಡದ ಕನ್ನಡ – ಪ್ರೊ. ಎಂ. ಮರಿಯಪ್ಪ ಭಟ್ಟ

೫. ಗುಲ್ಬರ್ಗಾ, ರಾಯಚೂರುಗಳ ಕನ್ನಡ – ಪ್ರೊ. ಡಿ. ಕೆ. ಭೀಮಸೇನ್ ರಾವ್

೬. ಮಹಾರಾಷ್ಟ್ರ ಗಡಿನಾಡಿನ ಕನ್ನಡ – ಮಿರ್ಜಿ ಅಣ್ಣಾರಾಯ

೭. ಕನ್ನಡದ ಈಗಿನ ಪ್ರಾದೇಶಿಕ ಪ್ರಭೇದಗಳು - ಡಾ. ಕೆ. ಕುಶಾಲಪ್ಪಗೌಡ

ಅಲ್ಲದೆ, ಪ್ರಭುದ್ಧ ಕರ್ನಾಟಕದಲ್ಲಿ ಶ್ರೀ ಮಾನ್ವಿಯವರ 'ರಾಯಚೂರು ಕನ್ನಡ' ಎಂಬ ಲೇಖನವೂ, ಬಿ. ವಿ. ವೀರಭದ್ರಪ್ಪನವರ 'ಮೈಸೂರು ಕನ್ನಡದ ಸಾಮಾಜಿಕ ಪ್ರಭೇದಗಳು' ಎಂಬ ಅನುವಾದ ಲೇಖನವೂ ಪ್ರಕಟವಾಯಿತು. ಲೇಖನದ ಮೂಲ ಕತೃ ವಿಲಿಯಂ ಬ್ರೈಟ್. ಕನ್ನಡ ಅಕ್ಷರಗಳ ವಿದ್ವತ್ ಪೂರ್ಣ ವಿವೇಚನೆಯನ್ನು ಒಳಗೊಂಡ ಶ್ರೀ ಸೇಡಿಯಾಪು ಕೃಷ್ಣ ಭಟ್ಟರ ' ಕನ್ನಡ ವರ್ಣಗಳು' ಎಂಬ ಉಪನ್ಯಾಸವು ಧಾರವಾಡ ವಿ. ವಿ.ಯ ಕನ್ನಡ ಸಂಶೋಧನಾ ಸಂಸ್ಥೆಯಿಂದ ಪ್ರಕಟವಾಯಿತು. ಮಹಾಪ್ರಾಣಗಳು ಹಾಗೂ ಪಂಚಮಿ, ಸಪ್ತಮಿ ವಿಭಕ್ತಿಗಳನ್ನು ಕುರಿತಂತೆ ಎಂ. ಮರಿಯಪ್ಪ ಭಟ್ಟರ ಲೇಖನವು ಪ್ರಭುದ್ಧ ಕರ್ನಾಟಕದಲ್ಲಿ ಪ್ರಕಟವಾಯಿತು. ತೀ. ನಂ. ಶ್ರೀ.ಯವರ ವಿದ್ವತ್‌ಪೂರ್ಣ ಲೇಖನದಲ್ಲಿ ಕನ್ನಡ ಭಾಷಾಸ್ವರೂಪವನ್ನು ಕುರಿತು ವಿವೇಚಿಸಿದ್ದಾರೆ. ೧೯೫೬ರಲ್ಲಿ ಡಾ. ಡಿ. ಎಲ್. ಎನ್.ರ 'ಶಬ್ದವಿಹಾರ' ಎಂಬ ಸಣ್ಣ ಗ್ರಂಥ ಪ್ರಕಟವಾಯಿತು. ಡಿ. ಎಲ್. ಎನ್ ಈ ಕೃತಿಯಲ್ಲಿ ಅನೇಕ ಶಬ್ದಗಳ ಚರಿತ್ರೆಯನ್ನು ಭಾಷಾಶಾಸ್ತ್ರದ ದೃಷ್ಟಿಯಿಂದ ವಿದ್ವತ್‌ಪೂರ್ಣವಾಗಿ ವಿವೇಚಿಸಿದ್ದಾರೆ. ಶಬ್ದಾರ್ಥ ನಿರ್ಣಯವನ್ನು ಕುರಿತಂತೆ ಕನ್ನಡದಲ್ಲಿ ಈ ರೀತಿಯ ಕೃತಿ ಇದೊಂದೆ ಎನ್ನಬಹುದಾಗಿದೆ.

ಕನ್ನಡ ಭಾಷೆಯೊಡನೆ ಸಹೋದರ ದ್ರಾವಿಡ ಭಾಷೆಗಳ ತೌಲನಿಕ ಅಧ್ಯಯನ ಕನ್ನಡದಲ್ಲಿ ಅಷ್ಟಾಗಿ ನಡೆಯದಿದ್ದ ಸಂದರ್ಭದಲ್ಲಿ ಹಂಪನಾ ಅವರ 'ದ್ರಾವಿಡ

ಭಾಷಾವಿಜ್ಞಾನ' ಹಾಗೂ ಸಂಗಮೇಶ ಸವದತ್ತಿ ಮಠ ಅವರ 'ದ್ರಾವಿಡ ಭಾಷಾ ವ್ಯಾಸಂಗ' ಈ ಕ್ಷೇತ್ರದಲ್ಲಿ ಮೂಡಿ ಬಂದ ಎರಡು ಗಮನಾರ್ಹ ಕೃತಿಗಳಾಗಿವೆ. ಹಂಪನಾ ಅವರು ವಿದ್ಯಾರ್ಥಿಗಳನ್ನು ಭಾಷಾಭ್ಯಾಸಿಗಳನ್ನು ಆಧಾರವಾಗಿಟ್ಟುಕೊಂಡು ರಚಿಸಿದ ಈ ಕೃತಿಗೆ ಪ್ರೊ. ದೇ. ಜ. ಗೌ. ಅವರ ವಿದ್ವತ್‌ಪೂರ್ಣವಾದ ಮುನ್ನುಡಿಯೂ ಇದೆ. ದ್ರಾವಿಡ ಭಾಷೆಗಳ ಚರಿತ್ರೆಯನ್ನು ಹಾಗೂ ನಾನಾ ವೈಶಿಷ್ಟ್ಯಗಳನ್ನು ಒಂದೇ ಕಡೆಯಲ್ಲಿ ಮೊದಲಬಾರಿಗೆ ಕನ್ನಡದಲ್ಲಿ ಕಾಣುವುದು ಇದೇ ಕೃತಿಯಲ್ಲಿ.

ಆಯಾ ಭಾಷೆಗಳ ಬಗೆಗೆ ಈವರೆಗೆ ಬಂದಿರುವ ಕೆಲವು ಸಂಶೋಧನೆಯ ವಿವರಗಳನ್ನು ಕಾಣಬಹುದಾಗಿದೆ. ೧೯೭೬ರಲ್ಲಿ ಪ್ರಕಟವಾದ ಸಂಗಮೇಶ ಸವದತ್ತಿಮಠ ಅವರ 'ದ್ರಾವಿಡ ಭಾಷಾ ವ್ಯಾಸಂಗ'ವು ಐದು ಆವೃತ್ತಿಗಳನ್ನು ಕಂಡಿದ್ದು ವಿದ್ಯಾರ್ಥಿಗಳಿಗೂ, ವಿದ್ವಾಂಸರಿಗೂ ಪ್ರಯೋಜನಾಕಾರಿಯಾಗಿದೆ. ದ್ರಾವಿಡ ಭಾಷಾವಿಜ್ಞಾನದಲ್ಲಿ ತಿಳಿದುಕೊಳ್ಳಬೇಕಾದ ಎಲ್ಲ ವಿಷಯಗಳು ಈ ಕೃತಿಯಲ್ಲಿ ಅಡಕವಾಗಿವೆ. ೧೯೬೬ರಲ್ಲಿ ವಿಲಿಯಂ. ಮೆಕ್ಕೊಕ್ಮ್ಯಾರ್‌ಟ್ (William Mccormack) ಅವರ Kannada - A Cultural Introduction to the Spoken Styles of the Languages ಪ್ರಕಟವಾಯಿತು. ಆಧುನಿಕ ಭಾಷಾವಿಜ್ಞಾನದ ಧ್ವನಿಶಾಸ್ತ್ರದ ದೃಷ್ಟಿಯಿಂದ ಕನ್ನಡ ಭಾಷೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿದ ಇನ್ನೊಂದು ಗಮನಾರ್ಹ ಗ್ರಂಥ. ಬಿ. ಬಿ. ರಾಜಪುರೋಹಿತರ A Coustic Characteristics of Kannada ಕನ್ನಡ ಭಾಷೆಯ ವೈಜ್ಞಾನಿಕ ವಿಶ್ಲೇಷಣೆಗೆ ಇದೊಂದು ಮಹತ್ವದ ಕಾಣಿಕೆಯಾಗಿದೆ.

ಇದಲ್ಲದೆ ಕನ್ನಡದಲ್ಲಿ ಭಾಷಾವಿಜ್ಞಾನದ ತತ್ವಗಳನ್ನು ಆಧಾರವಾಗಿಟ್ಟುಕೊಂಡು ರಚಿತವಾದ ಕೆಲವು ಗ್ರಂಥಗಳನ್ನು ಕಾಣಬಹುದಾಗಿದೆ. ಕೆ. ಎಂ. ಕೃಷ್ಣರಾವ್ ಅವರ "ಕನ್ನಡ ಭಾಷೆಯ ಸ್ವರೂಪ" ವಿಲ್ಯಂ ಮಾಡ್ತ ಅವರ "ಕನ್ನಡ ಭಾಷೆಯ ರೂಪ ರೇಷೆಗಳು" ಡಿ. ಎನ್. ಶಂಕರಭಟ್ಟರ "ಸಂಕ್ಷಿಪ್ತ ಕನ್ನಡ ಭಾಷೆಯ ಚರಿತೆ" ಬಿ. ವಿ. ಪಾಟೀಲರ "ವ್ಯಾಕರಣ ಲೋಕ" ಡಿ. ಎನ್. ಶಂಕರಭಟ್ಟರ "ಕನ್ನಡ ವಾಕ್ಯಗಳು" ಹೆರಾಲ್ಡ್ ಶಿಫ್‌ಮನ್‌ರ 'A Reference Grammar of Spoken Kannada' ಎಚ್. ಎಸ್. ಬಿಳಿಗಿರಿಯವರ 'ಆಲೋಕ', ಜಿ. ಎಸ್. ಕುಳ್ಳಿಯವರ 'ವರ್ಣನಾತ್ಮಕ ಭಾಷಾವಿಜ್ಞಾನ' 'ಆಧುನಿಕ ಭಾಷಾವಿಜ್ಞಾನ' 'ಐತಿಹಾಸಿಕ ಭಾಷಾವಿಜ್ಞಾನ' 'ಭಾಷಾಸೌಧ' 'ಭಾಷೆ' ಮತ್ತು ಭಾಷಾವಿಜ್ಞಾನ ಹಾಗೂ 'Kesiraja's Shabdamanidarpana" ಕೆ. ಕುಶಾಲಪ್ಪಗೌಡರ 'ಕನ್ನಡ ಭಾಷೆ ಮತ್ತು ವ್ಯಾಕರಣಗಳ ಅಧ್ಯಯನ', ಡಿ. ಪದ್ಮನಾಭ ಶರ್ಮ ಭುವನಳ್ಳಿಯವರ ಕೇಶಿರಾಜಕೃತ

‘ಶಬ್ದಮಣಿದರ್ಪಣ’ (ನಲ್‌ನುಡಿಗನ್ನಡ), ದೊಡ್ಡಸ್ವಾಮಿಯವರ ‘ಶಬ್ದಮಣಿದರ್ಪಣ ದಿಗ್ದರ್ಶನ’ ತಾ. ಸು. ಶಾಮರಾಯ ಮತ್ತು ಎಚ್. ನಂಜೇಗೌಡರ ‘ಶಬ್ದಮಣಿದರ್ಪಣ’, ಶಂಭುಲಿಂಗಪ್ಪನವರ ‘ಶಬ್ದಮಣಿದರ್ಪಣ ಸಾರ’ ವಿ. ಶಿವಾನಂದ ಅವರ ‘ಶಬ್ದಮಣಿದರ್ಪಣ ವಿಳಾಸ’ ಬಿ. ಟಿ. ಸಾಸನೂರು ಹಾಗೂ ಡಾ. ಎಂ. ಎಂ. ಕಲಬುರ್ಗಿಯವರ ‘ಶಬ್ದಮಣಿದರ್ಪಣ ಸಂಗ್ರಹ’ ಡಾ. ಎಂ. ಎಂ. ಕಲಬುರ್ಗಿಯವರ ‘ಪ್ರತಿಬಿಂಬ’ ಜಿ. ಎಸ್. ಕಾಪ್ಸೆ ಅವರ ‘ಶಬ್ದಸ್ಮೃತಿ’ ಎಂ. ವಿ. ಸೀತರಾಮಯ್ಯನವರ ‘ಪ್ರಾಚೀನ ಕನ್ನಡ ವ್ಯಾಕರಣಗಳು’ ಡಾ. ಸಂಗಮೇಶ ಸವದತ್ತಿ ಮಠ ಅವರ ‘ಕನ್ನಡ ಭಾಷಾ ವ್ಯಾಸಂಗ’ ಹಂಪನಾ ಅವರ ‘ಭಾಷಾವಿಜ್ಞಾನ’ ಡಾ. ಕೆ. ಕೆಂಪೇಗೌಡ ಹಾಗೂ ಪ್ರೊ. ಆರ್. ವಿ. ಎಸ್. ಸುಂದರಂ ಅವರ ‘ಭಾಷೆ ಮತ್ತು ಭಾಷಾವಿಜ್ಞಾನ’ ‘ಧ್ವನಿಮಾ ವಿಜ್ಞಾನ’ ‘ಭಾಷಾ ವರ್ಗೀಕರಣ’ ರಾ. ಯ. ಧಾರವಾಡಕರ ಅವರ ‘ಕನ್ನಡ ಭಾಷಾಶಾಸ್ತ್ರ’ ಮುಂತಾದವು. ಆಧುನಿಕ ಭಾಷಾವಿಜ್ಞಾನದ ತತ್ವಗಳ ಹಿನ್ನೆಲೆಯಲ್ಲಿ ರಚನೆಯಾದ ಗಮನಾರ್ಹ ಕೃತಿಗಳು.

ಅಲ್ಲದೆ ಇದೇ ಕಾಲಾವಧಿಯಲ್ಲಿ ಕನ್ನಡ ಭಾಷಾ ವ್ಯಾಕರಣಕ್ಕೆ ಸಂಬಂಧಿಸಿದಂತೆ ಚಿಕ್ಕ ಪುಟ್ಟ ಪುಸ್ತಕಗಳು ಪ್ರಕಟವಾದವು. ಅವುಗಳಲ್ಲಿ ಎಚ್. ಜಿ. ಲೋಕಾಪುರ ಅವರ ಕನ್ನಡ ನುಡಿಯ ಬೆಳವಣಿಗೆ, ಟಿ. ಎಸ್. ರಾಜಗೋಪಾಲರ ಕನ್ನಡ ಲಿಪಿಯ ಹುಟ್ಟು ಬೆಳವಣಿಗೆ, ಬಿ. ರಾಮಚಂದ್ರರಾವ್ ಅವರ ಕನ್ನಡ ಭಾಷೆಯ ಹುಟ್ಟು ಬೆಳವಣಿಗೆ, ಸಂಗಮೇಶ ಸವದತ್ತಿ ಮಠರವರ ಕಲ್ಬುರ್ಗಿ ಕನ್ನಡ, ಎಸ್. ಲಕ್ಷ್ಮಿನಾರಾಯಣ ಆರೋರರವರ ಅನ್ಯಭಾಷೆಗಳ ಮೇಲೆ ಕನ್ನಡದ ಪ್ರಭಾವ, ಮುಂತಾದವು. ಕನ್ನಡ ಭಾಷಾ ವ್ಯಾಕರಣ ಕ್ಷೇತ್ರಕ್ಕೆ ಪೂರಕವಾದ ಕೃತಿಗಳಾಗಿವೆ.

ಕನ್ನಡ ಉಪಭಾಷೆಯನ್ನು ವೈಜ್ಞಾನಿಕ ರೀತಿಯಲ್ಲಿ ವಿಶ್ಲೇಷಿಸುವ ಹಲವಾರು ಪಿಎಚ್.ಡಿ. ಪ್ರಬಂಧಗಳು ಪ್ರಕಟವಾಗಿವೆ. ಅದರಲ್ಲಿ ಉಪಧ್ಯಾಯ ಅವರ A Comparative Study of Four Kannada Dialect, ಮೆಕ್ಕೊರ್ಮಾಕ್ ಅವರ Social Dialects in Dharawad, ಇತ್ಯಾದಿ. ಡೆಕ್ಕನ್ ಕಾಲೇಜ್ ಪೂನಾದಿಂದ ಹೊರಬಂದ ಇತರ ಕೃತಿಗಳೆಂದರೆ ಎ. ಎಸ್. ಆಚಾರ್ಯರ ‘ಹಾಲಕ್ಕಿ ಕನ್ನಡ’ ೧೯೬೭ರಲ್ಲಿ ಪ್ರಕಟವಾಯಿತು. ಯು. ಪಿ. ಉಪಧ್ಯಾಯ ಅವರ ‘ನಂಜನಗೂಡು ಕನ್ನಡ’ ೧೯೬೮ರಲ್ಲಿ ಪ್ರಕಟವಾಯಿತು. ಆರ್. ಮಹದೇವ ಅವರ ‘ಗುಲ್ಬರ್ಗಾ ಕನ್ನಡ’ ೧೯೬೮ರಲ್ಲಿ, ಎ. ಎಸ್. ಆಚಾರ್ಯ ಅವರ ‘ಒಕ್ಕೂರು ಕನ್ನಡ’ ಮತ್ತು ‘ತಿಪಟೂರು ಕನ್ನಡ’ ಕೃತಿಗಳು ೧೯೭೧ರಲ್ಲಿ ಪ್ರಕಟವಾದವು. ಅಲ್ಲದೆ ಇದೇ ಸಂಸ್ಥೆಯಿಂದ ‘ವಿಜಾಪೂರ ಕನ್ನಡ’, ಬಳ್ಳಾರಿ ಕನ್ನಡ’, ‘ಮಧುರೈ ಕನ್ನಡ’ ಮತ್ತು ‘ಕೊಯಂಬತ್ತೂರು

ಕನ್ನಡ' ಪ್ರಕಟವಾಗಿವೆ. ನಂತರದಲ್ಲಿ ದೀವರ, ಹವ್ಯಕ, ಸೋಲಿಗ, ಬಡಗ, ಗೌಡ ಮುಂತಾದ ಉಪಭಾಷೆಗಳ ಕುರಿತ ಸಂಪ್ರಬಂಧಗಳು ಪ್ರಕಟವಾಗಿವೆ.

ಕನ್ನಡ ಭಾಷೆ ನಡೆದು ಬಂದ ದಾರಿಯನ್ನು ಗುರುತಿಸುವಲ್ಲಿ ಅನೇಕ ವಿದ್ವಾಂಸರು ಪ್ರಯತ್ನಿಸಿ ಯಶಸ್ವಿಯಾಗಿದ್ದಾರೆ. ಅದರಲ್ಲಿ ರಾ. ಯ. ಧಾರವಾಡಕರ ಅವರ 'ಕನ್ನಡ ಭಾಷಾಶಾಸ್ತ್ರ' ೧೯೫೦, ಕೈಪಿಡಿಕಾರರ 'ಕನ್ನಡ ಭಾಷೆಯ ಚರಿತ್ರೆ' (೧೯೫೫), ಪ್ರಾ. ಗೋ. ಕುಲಕರ್ಣಿಯವರ 'ಕನ್ನಡ ಭಾಷೆಯ ಚರಿತ್ರೆ' (೧೯೬೯), ನರಸಿಂಹಾಚಾರ್ಯರ History of kannada Language (೧೯೬೯), ವಿ. ಆರ್. ಉಮರ್ಜಿ ಅವರ Kannada Language its Oringin and Development ಮುಂತಾದವು.

ಕನ್ನಡ ಕಾವ್ಯ ಭಾಷೆಯನ್ನು ವಿಶ್ಲೇಷಿಸುವ ಕಾರ್ಯವೂ ನಡೆದಿದೆ. ಅವುಗಳಲ್ಲಿ ಬಿ. ರಾಮಚಂದ್ರರಾವ್ ಅವರ ಪಂಪನ ವಿಕ್ರಮಾರ್ಜುನ ವಿಜಯದ ಭಾಷೆಯ ವರ್ಣನಾತ್ಮಕ ವ್ಯಾಕರಣ, ಸಿ. ಓಂಕಾರಪ್ಪ ಅವರ ಕುಮಾರವ್ಯಾಸ ಭಾರತದ ವರ್ಣನಾತ್ಮಕ ವ್ಯಾಕರಣ, ಕೆ. ಕುಶಾಲಪ್ಪಗೌಡರು ವಡ್ಡಾರಾಧನೆಯ ಭಾಷಾಧ್ಯಯನ, ಬಿ. ವಿ. ರಾಜಪುರೋಹಿತರ ವಚನಗಳ ಭಾಷಾಧ್ಯಯನ, ಸಂಗಮೇಶ ಸವದತ್ತಿ ಮಠ ಅವರ ಹರಿಹರನ ರಗಳೆಯ ಭಾಷಾಧ್ಯಯನ, ಸಂಗಮೇಶ ಬಿರಾದಾರ ಅವರ ನಾಗವರ್ಮನ ಕೃತಿಗಳ ಭಾಷಾಧ್ಯಯನ ಮುಂತಾದವು. ಕರ್ನಾಟಕ ವಿ.ವಿ. ಹೊರಡಿಸುವ ಕನ್ನಡ ಭಾಷಾಪ್ರಭೇದಗಳ ಅಧ್ಯಯನಕ್ಕೆ ಮೀಸಲಾದ 'ಕರ್ನಾಟಕ ಭಾರತಿ' ಎಂಬ ವಿಶೇಷ ಸಂಚಿಕೆಯೂ ಕನ್ನಡ ಭಾಷಾ ಅಧ್ಯಯನಕ್ಕೆ ಸಂಬಂಧಿಸಿದಂತೆ ನೂರಾರು ಲೇಖನಗಳನ್ನು ಪ್ರಕಟಿಸಿದೆ.

ಹೀಗೆ ದ್ರಾವಿಡ ಭಾಷೆಗಳೊಂದಿಗೆ ಕನ್ನಡ ಭಾಷೆಯನ್ನು ಹೋಲಿಸಿ ನೋಡಿದರೆ ಕನ್ನಡದಲ್ಲಿ ಭಾಷಾವಿಜ್ಞಾನದ ಕೃಷಿ ಹುಲುಸಾಗಿಯೇ ನಡೆದಿದ್ದು ಕಂಡುಬರುತ್ತದೆ. ಆಧುನಿಕ ಭಾಷಾವಿಜ್ಞಾನವನ್ನು ಕುರಿತ ಗ್ರಂಥಗಳು ಇಂಗ್ಲೀಶ್ ಭಾಷೆಯಲ್ಲಿ ಅಪಾರವಾಗಿದ್ದರೂ ಕನ್ನಡದಲ್ಲಿ ವಿರಳವಾಗಿವೆ.

# ಅಧ್ಯಾಯ : ೫

# ಕನ್ನಡ ಭಾಷಾಧ್ಯಯನದ ಮಾದರಿಗಳು

ಕನ್ನಡ ಭಾಷೆಗೆ ತನ್ನದೇ ಆದ ಅಧ್ಯಯನದ ಮಾದರಿ ಇದೆಯೇ? 'ಭಾರತೀಯ' ಎಂಬ ಹೆಸರಿನಲ್ಲಿ ನಡೆದು ಬಂದ ಅಧ್ಯಯನ ಮಾದರಿಯನ್ನು 'ನಮ್ಮದು' ಎಂದು ಕಾಣುತ್ತ ಅಥವಾ ಕಲಿಯುತ್ತ ಬಂದಿರುವ ಇತರ ಭಾರತೀಯ ಎಲ್ಲಾ ಭಾಷೆಗಳು ಅಥವಾ ಪ್ರಾಂತೀಯ ಭಾಷೆಗಳಲ್ಲಿ, ಇಂತಹ ಪ್ರಶ್ನೆ ಹುಟ್ಟಿದರೆ ಸೂಜಿಗವೇನು ಅಲ್ಲ. ಯಾಕೆಂದರೆ ಭಾಷೆಯನ್ನೇ ತನ್ನ ಮಾಧ್ಯಮವಾಗಿ ರಚಿತಗೊಳ್ಳುವ ಸಾಹಿತ್ಯ, ಸಾಹಿತ್ಯ ಮೀಮಾಂಸೆ, ಕಾವ್ಯ ಮೀಮಾಂಸೆ, ಚಿಂತನೆಯಂತಹ ಕ್ಷೇತ್ರದಲ್ಲಿ ಅನೂಚಾನವಾಗಿ ಅಥವಾ ಭಾರತೀಯ ಅಥವಾ ಸಂಸ್ಕೃತಕ್ಕೆ ಅನುಯಾಯಿಯಾಗಿ ನಡೆದುಕೊಂಡು ಬಂದದ್ದು ಇದೆ. ಸಾಹಿತ್ಯ ಮತ್ತು ಕಾವ್ಯಮೀಮಾಂಸೆ ಹೇಗೆ ಭಾರತೀಯವಾದದ್ದೋ ಅಥವಾ ಸಂಸ್ಕೃತವನ್ನು ಭಾರತೀಯವಾಗಿಸಿ ಉಳಿದವುಗಳ ಕುರಿತು ಪ್ರಶ್ನೆ ಮೂಡಿಸಿದಂತೆ ನಾಜೂಕಿನಿಂದ ನಿರ್ವಹಿಸಿ ಅದೇ ಉಳಿದ ಭಾಷೆಗಳ ಬಣ್ಣ ಕೂಡ ಎಂದು ಒಪ್ಪಲಾಯಿತು. ಈ ಒಪ್ಪು ಮತ್ತು ಒಪ್ಪಿಸುವ ಹಿಂದೆ ದೊಡ್ಡ ರಾಜಕಾರಣವೇ ಇದೆ. ಸಂಸ್ಕೃತ ಶ್ರೇಷ್ಠವಾದದ್ದು. ಭಾರತೀಯ ಸಂಸ್ಕೃತಿಯ ಸಮಗ್ರ ಸಾರವೇ ಸಂಸ್ಕೃತ ಎನ್ನುವಂತೆ ಕಂಡದ್ದು. ಇದನ್ನು ಸಂಸ್ಕೃತೇತರ ಭಾಷಿಕರೂ ತಮ್ಮ ಮತ ಹಾಕುವ ಮೂಲಕ ತಮ್ಮ ಭಾಷೆಯ ಅಸ್ಮಿತೆಯನ್ನು ಕಾಣದೆ, ತಮ್ಮ ತಮ್ಮ ಭಾಷೆಗಳ ಅಸ್ಮಿತೆಯನ್ನು ಸಂಸ್ಕೃತದಲ್ಲಿ ವಿಲೀನಗೊಳಿಸಿದರು. ೧೯೫೨ರಲ್ಲಿ 'ಭಾರತೀಯ ಕಾವ್ಯಮೀಮಾಂಸೆ' ಬರೆದ ತೀ. ನಂ. ಶ್ರೀಯವರು ಮಾತುಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬಹುದಾಗಿದೆ. ಕನ್ನಡದಲ್ಲಿ ಕಾವ್ಯಮೀಮಾಂಸೆಯ ಕ್ಷೇತ್ರದಲ್ಲಿ ಆಚಾರ್ಯ ಕೃತಿ ಎಂದೇ ಜನಜನಿತಗೊಂಡಿದೆ. ಲೇಖಕರು ಅರಿಕೆಯಲ್ಲಿ ಹೇಳಿರುವುದು. "ಭಾರತೀಯ ಕಾವ್ಯಮೀಮಾಂಸೆ" ಎಂದು ಈ ಗ್ರಂಥಕ್ಕೆ ಹೆಸರಿಟ್ಟಿದ್ದರೂ ಸಂಸ್ಕೃತ ಭಾಷೆಯಲ್ಲಿರುವ ಕಾವ್ಯಲಕ್ಷಣ ಗ್ರಂಥಗಳನ್ನೇ ಪ್ರಧಾನವಾಗಿ ಅವಲಂಬಿಸಿ ಇದನ್ನು ಬರೆಯಲಾಗಿದೆ. ಕನ್ನಡದಲ್ಲಿ ದೊರೆಯುವ ಲಕ್ಷಣ ಗ್ರಂಥಗಳನ್ನು ಕುರಿತು ಒಂದು ಅಧ್ಯಾಯ ಇದಕ್ಕೆ ಪರಿಶಿಷ್ಟವಾಗಿ ಬಂದಿದೆ. ಭರತ ಖಂಡದ ಮಿಕ್ಕ ಭಾಷೆಗಳಲ್ಲಿ ಈ ಶಾಸ್ತ್ರ ಹೇಗೆ ಬೆಳೆಯಿತು ಯಾವ ರೂಪ ತಾಳಿತು ಎಂಬುದನ್ನು ವ್ಯಾಸಂಗಮಾಡಿ ನಿರೂಪಿಸಲು ನನಗೆ ಶಕ್ಯವಾಗಲಿಲ್ಲ. ಆದರೂ ಕೆಲವು ವಿವರಗಳಲ್ಲೂ ವಿಶೇಷಾಂಶಗಳಲ್ಲೂ ಭೇದವಿರಬಹುದೇ ಹೊರತು, ನಮ್ಮ ಎಲ್ಲ ದೇಶ

ಭಾಷೆಗಳಿಗೆ – ಕನ್ನಡಕ್ಕೆ ಹೇಗೋ ಹಾಗೆಯೇ – ಸಂಸ್ಕೃತವೇ ಮೂಲ ವಸ್ತುವನ್ನೂ ರೂಪ ರೇಖೆಗಳನ್ನೂ ಒದಗಿಸಿದೆ ಎಂದು ನಂಬಬಹುದು. ಆ ಮಟ್ಟಿಗಾದರೂ ಸಂಸ್ಕೃತ ಗ್ರಂಥಗಳಲ್ಲಿ ಕಾಣಬರುವ ಕಾವ್ಯಮೀಮಾಂಸೆ ನಿಸ್ಸಂದೇಹವಾಗಿ ಭಾರತೀಯ ಕಾವ್ಯಮೀಮಾಂಸೆಯೇ ಆಗುತ್ತದೆ.' ಇದು ಸಂಸ್ಕೃತದ ಕನ್ನಡಕ ಧರಿಸಿ ಕನ್ನಡ ಸಾಹಿತ್ಯ, ಕಾವ್ಯಮೀಮಾಂಸೆ, ಭಾಷೆ, ಛಂದಸ್ಸು, ವ್ಯಾಕರಣ ನೋಡಿದವರೆಲ್ಲ ಮಾಡುವ ಸಾಮಾನ್ಯ ತಪ್ಪಾಗಿದೆ. ಭಾರತೀಯ ಎಂಬ ಪರಿಕಲ್ಪನೆ ಅನ್ಯಾಯ ಮಾಡಿರುವ ಕ್ಷೇತ್ರಗಳಲ್ಲಿ ಕನ್ನಡ ಭಾಷಾಧ್ಯಯನ ಕೂಡ ಒಂದು.

ಕನ್ನಡ ಭಾಷಾಧ್ಯಯನವು ಆರಂಭದ ಹಂತದಲ್ಲಿ ಸಂಸ್ಕೃತ, ಪ್ರಾಕೃತಗಳಿಂದಲೂ ಆಧುನಿಕ ಸನ್ನಿವೇಶದಲ್ಲಿ ಪಾಶ್ಚಾತ್ಯದಿಂದಲೂ ತಮ್ಮ ಭಾಷಾಧ್ಯಯನದ ತಾತ್ವಿಕ ಪ್ರೇರಣೆ ಪಡೆದಿದೆ ಎಂಬ ಸಾಮಾನ್ಯ ಗ್ರಹಿಕೆ ರೂಢಿಯಲ್ಲಿದೆ. ಆದರೆ ಆಧುನಿಕ ಕನ್ನಡ ಭಾಷೆಯ ಅಧ್ಯಯನದ ನೆಲೆಯನ್ನು ತನ್ನ ಒಳಗಿನಿಂದ ಅಂತರ್ಮುಖಿಯಾಗುತ್ತಲೇ ಹೊಸ ಹೆಣಿಗೆಗಳನ್ನು ರೂಪಿಸಿಕೊಂಡಿದೆ. ಹಾಗೆಯೇ ಇತರೆ ದೇಶೀಯ ಭಾಷೆಗಳೂ ಸಹ ಇಂತಹದೇ ತನ್ನತನದ ಹುಡುಕಾಟದಲ್ಲಿ ನಿರತವಾಗಿ ಒಂದರೊಡನೊಂದು ಬೆರೆತುಕೊಳ್ಳುವ ಅಥವಾ ಐಡಿಯಾಗಳನ್ನು ರೂಪಿಸಿಕೊಳ್ಳುವ, ಪ್ರಭಾವದ ನೆಲೆಗಳನ್ನು ಸಹ ತಳುಕು ಹಾಕುವಂತಿಲ್ಲ. ಈ ಪ್ರಕ್ರಿಯೆಯೇ ಹಿಂದಿಗಿಂತ ಇಂದು ಹೆಚ್ಚಾಗಿದೆ. ಇದನ್ನು ಕ್ಲೀಷೆಗೊಳಿಸದೆ ಒಂದು ಗಂಭೀರ ನೆಲೆಯಾಗಿ ನಿಂತು ನೋಡಿದರೆ, ಯಾವುದೇ ಜೀವಂತ ಭಾಷಿಕ ಸಮುದಾಯದ ಭಾಷಿಕ ಪರಂಪರೆಯ ಪ್ರೇರಣೆಗಳನ್ನು ಕಡಪಡೆದು ತಂದ ಬೀಜದಿಂದ ಬೆಳೆದ ಬೆಳೆ ಎಂಬಂತೆ ಅರ್ಥೈಸಲು ಬರುವುದಿಲ್ಲ. ಇನ್ನೊಬ್ಬರ ಮಗುವನ್ನು ನಮ್ಮ ಮಗುವೆಂದು ಆಡಿಸಲು ಎಷ್ಟೊತ್ತು ತಾನೆ ಸಾಧ್ಯ. ಪರಕೀಯತೆ ಅಳಿಯಲಾಗದು. ಹಾಗೆಯೇ ಒಂದು ಒಡನಾಟದ ಪ್ರಜ್ಞೆ ಹೊಸತೇನನ್ನಾದರು ಮೂರ್ತ ಅಥವಾ ಅಮೂರ್ತ ನೆಲೆಯಲ್ಲಿ ಹುಟ್ಟು ಹಾಕದೆ ಇರಲಾರದು.

ಆಧುನಿಕ ಕನ್ನಡ ಭಾಷಾಧ್ಯಯನದ ನೆಲೆಗಳು "ಅನ್ಯ" ಪ್ರೇರಣೆಯಿಂದ ಸೆಲೆಯೊಡೆದ ನದಿ ಮಾತ್ರ ಎಂದು ಹೇಳುವುದನ್ನು ನಿರಾಕರಿಸಿ ಒಂದು ಸಮನ್ವಯ ಸ್ಥಿತಿಯಲ್ಲಿ ಅರ್ಥೈಸಿಕೊಳ್ಳುವುದಾದರೆ, ಸೇಡಿಯಾಪು ಕೃಷ್ಣಭಟ್ಟರ ರೂಪಕಾತ್ಮಕವಾದ ಮಾತೊಂದಿದೆ "ಜಡಿಮಳೆ ಸುರಿದೊಡನೆ ಎಲ್ಲೆಲ್ಲಿಯೂ ಹರಿಯುವ ನೀರಿನ ಮೂಲ ಯಾವುದು?" ಈ ಪ್ರಶ್ನೆಯ ಮೂಲಕ ಆಲೋಚಿಸಬಹುದಾಗಿದೆ. ಅಂದರೆ ಯಾವುದೇ ಒಂದು ಭಾಷೆಯ ಅಧ್ಯಯನದ ಸಮೃದ್ಧಿಯಲ್ಲಿ ಬಹು ಮೂಲದ ಪ್ರೇರಣೆಗಳು ಭಾಗವಹಿಸಿರುತ್ತವೆ. ಈ ಪ್ರೇರಣೆಯ ಕುರಿತು ಎಚ್ಚರಿಕೆ ಹೇಳಿಕೊಳ್ಳುವುದೆಂದರೆ ಅಥವಾ

ಕತ್ತಿಯಂಚಿನ ನಡಿಗೆಗೆ ಒಂದು ನೋಟ ಬೀರುವುದಾದರೆ, ಒಂದು ಭಾಷೆ ಯಾರ ಹಂಗೂ ಇಲ್ಲದೆ ತನ್ನದೇ ಆದ 'ಅನನ್ಯ' ಭಾಷಾಧ್ಯಯನದ ಮಾದರಿಯನ್ನು ರೂಪಿಸಿಕೊಳ್ಳಬಲ್ಲದು ಎಂಬ ಹುಸಿ ಅಭಿಮಾನಕ್ಕೆ ಈಡಾಗುವ ಅಪಾಯವಿದೆ. ಕನ್ನಡವು ಹಿಂದಿನಿಂದಲೂ 'ಅನ್ಯ'ಗಳ ಸಂಗಾಟ ಅನುಸಂಧಾನವನ್ನು ಮಾಡುತ್ತಲೇ ಬಂದಿದೆ. ಈ ಅನುಸಂಧಾನದಲ್ಲಿ ಅನೇಕ ಬಗೆಯ ಕೊಡುಕೊಳೆ, ರಾಜಿ, ಸಂಘರ್ಷ, ಸಮನ್ವಯತೆಗಳಿವೆ. ಅದರ ಆಳದಿಂದಲೇ ಭಾಷೆಯ ಅಧ್ಯಯನದ ತಾತ್ವಿಕ ನೆಲೆಗಳು ರೂಪುತಳೆಯಲು ಕಾರಣವಾಗಿದೆ. "ಹೊರಗಿನಿಂದ" ಪಡೆದದ್ದನ್ನು ತನ್ನ ಒಳ ಅಗತ್ಯದಲ್ಲಿ ಅರಗಿಸಿಕೊಂಡು ಬದಲಿಸಿಕೊಂಡು, ಅರಗದ ಕದಲದ ಕಡೆ ತುಸು ತಡವಾಗಿಯಾದರೂ ವೈರುಧ್ಯ ವ್ಯಕ್ತಪಡಿಸಿ ತನ್ನತನಕ್ಕೆ ಹೊಸತನ್ನು ಮಂಡಿಸಿದೆ ಮತ್ತು ಮಂಡಿಸುತ್ತಲೂ ಇದೆ.

ಇದೆಲ್ಲದರ ಮುಂದುವರಿಕೆ ಅಥವಾ ಫಲಿತವೇ ಕನ್ನಡ ಭಾಷಾಧ್ಯಯನ ಆಗುತ್ತದೆ. ಈ ಅರ್ಥದಲ್ಲಿ ಕನ್ನಡ ಭಾಷಾಧ್ಯಯನವನ್ನು, ಭಾರತದ ಭಾಷೆಗಳಂತೆ, ಧರ್ಮಗಳಂತೆ, ವ್ಯಾಕರಣಗಳಂತೆ, ಸಂಸ್ಕೃತಿಗಳಂತೆ ಒಂದು ಸಂಕರ ಸೃಷ್ಟಿ. ಸಂಕರವು ಭಾರತದ ಸಂಸ್ಕೃತಿ, ಭಾಷೆ, ಧರ್ಮ ಹಾಗೂ ಭಾಷೆಗಳ ನಿಜವಾದ ಕುರುಹು. ಹೀಗಾಗಿ ಶುದ್ಧಮೂಲ ಹುಡುಕುತ್ತ ಹೋಗುವುದು ಒಂದು ಹಾಸ್ಯಾಸ್ಪದವಾಗಿದೆ. ಇಲ್ಲವೆ ಮೂಲಭೂತವಾಗಿದೆ. ಆದ್ದರಿಂದ ಕನ್ನಡ ಭಾಷಾಧ್ಯಯನವು ಯಾವುದೋ ಶ್ರೇಷ್ಠ ಅಥವಾ ಆಚಾರ್ಯ ಭಾಷೆಯಿಂದ ಬಂದುದು ಎಂಬ ವಾದದಂತೆಯೇ ಎಂಬುದು. ಕನ್ನಡದಲ್ಲಿಯೇ ಸ್ವಯಂಭೂ ಆಗಿ ರೂಪುಗೊಂಡಿತು ಎನ್ನವುದೂ ಕೂಡ ಸಲ್ಲದ ವಕಾಲತ್ತು ಆಗಿದೆ.

ಕನ್ನಡ ಭಾಷಾಧ್ಯಯನದಲ್ಲಿ 'ಕನ್ನಡತನ'ದ ಹುಡುಕಾಟ ಮಾಡುವ ಪ್ರಶ್ನೆ ಹಿಂದಿನಿಂದಲೂ ಕಾಡಿದೆ ಎನ್ನುವುದರಲ್ಲಿ ಅನುಮಾನವಿಲ್ಲ. ಅಂದರೆ ಕನ್ನಡ ಭಾಷೆಯು ತನ್ನತನ ಪಡೆದುಕೊಳ್ಳುವ ಯತ್ನದ ಭಾಗವಾಗಿ, 'ಕವಿರಾಜಮಾರ್ಗ'ದಿಂದಲೇ ಶುರುವಾಗುತ್ತದೆ. ಮಾರ್ಗಕಾರನು, ಸಂಸ್ಕೃತದ 'ಪಡಿನೆಳಲಿನ'ಲ್ಲಿಯೆ ನಾಡು – ನುಡಿಯ ಚರ್ಚೆಮಾಡುತ್ತಾನೆ. ಮುಂದುವರೆದು ಕವಿರಾಜಮಾರ್ಗಕಾರ ಯಾವುದು ಸಂಸ್ಕೃತಕ್ಕೆ 'ದೋಷ'ವೆಂದು ಕಾಣುತ್ತದೆಯೋ ಅದುವೆ ಕನ್ನಡದ ವಿಶಿಷ್ಟತೆ ಎಂದು ಬಿಡುತ್ತಾನೆ. ಈಗಾಗಲೇ ಸಿದ್ಧವಿರುವ ಮಾದರಿಯ 'ಭಾರತೀಯತೆ'ಯ ಆದರ್ಶವೆಂದು ಭಾವಿಸಿದ ಮಾದರಿಯಂತೆ ಆಗಲೂ ಯತ್ನಿಸುವುದು. ಆದರೆ ಅದರಂತಾಗಲು ಆಗುವುದಿಲ್ಲ ಎಂಬ ವಾಸ್ತವವು ಗೊತ್ತಾಗುವುದು. ನೀವು ಹೇಳುವ ದೋಷವೇ ನಮ್ಮ ಗುಣವೆಂದು ತಿರುಗಿಬೀಳುವುದು.

ಈ ಬಗೆಯ ಇರಿಸು ಕನ್ನಡವು ಉದ್ದಕ್ಕೂ ಅನುಭವಿಸುತ್ತ ಬಂದಿದೆ. ಕನ್ನಡ ಭಾಷಾಧ್ಯಯನವು ತಿರುಗಿಬೀಳುವ ಈ ಗಳಿಗೆಗಳೇ ತನ್ನ ನಿಜ ಸ್ವರೂಪ ಕಂಡುಕೊಳ್ಳುವ ಜ್ಞಾನೋದಯದ ಕ್ಷಣಗಳು. ಇದಕ್ಕೆ ಶಬ್ದಮಣಿದರ್ಪಣದಲ್ಲಿ ಸಾಕಷ್ಟು ನಿದರ್ಶನಗಳನ್ನು ನೋಡಬಹುದು. ಅಲ್ಲದೆ ಇವತ್ತು ಡಾ. ಕೆ. ವಿ. ನಾರಾಯಣ ಮತ್ತು ಡಾ. ಡಿ. ಎನ್. ಶಂಕರ ಭಟ್ಟರ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಬಲವಾದ ಧ್ವನಿಯನ್ನು ಸಹ ಕಾಣಬಹುದಾಗಿದೆ. ಅಂದರೆ ಸಂಸ್ಕೃತದೊಂದಿಗಿನ ಚಲನೆಯ ಮೂಲಕವೇ ತನ್ನತನದ ಹುಡುಕಾಟವನ್ನು ನಡೆಸಿದ್ದರು. ಹೀಗೆ ಒಂದು ಅಂತಸ್ಥ ಜ್ಞಾನದ ಒಳಗೇ ಭಾಷೆ ನಾಡು ನುಡಿ ಸಮುದಾಯ ಸಂಸ್ಕೃತಿಯ ಸ್ವರೂಪ, ಪ್ರದೇಶ ಒಳಗೊಂಡಿರಬಹುದಾಗಿತ್ತು. ಕವಿರಾಜಮಾರ್ಗದ ಮಹತ್ವವಿರುವುದು ಇಲ್ಲಿ. ಹಾಗೆನೆ ಇವತ್ತಿನ ಪ್ರಮುಖ ಕನ್ನಡ ಭಾಷಾಧ್ಯಯನಕಾರರಾದ ಡಾ. ಡಿ. ಎನ್. ಶಂಕರ ಭಟ್ಟರ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಇಂತಹ ಅಂತಸ್ಥತೆಯಿಂದ ಸೀಳಿಕೊಂಡು ಕಂಡುಕೊಂಡ ಅಸ್ಮಿತತೆಯ ಹುಡುಕಾಟ. ಇದರ ಶೀರ್ಷಿಕೆಯೇ ಅದರ ತಾತ್ವಿಕತೆಯನ್ನು ಪ್ರಚುರಪಡಿಸುತ್ತದೆ. ಇದರಲ್ಲಿ ಕನ್ನಡವು ಮತ್ತೊಂದರ ಪಡಿನೆಳಲಾಗಿರುವುದನ್ನು ವಿವರಿಸಲಾಗಿದೆ. ಅಷ್ಟೇ ಅಲ್ಲ ಕನ್ನಡವು ತನ್ನತನವನ್ನು ಪಡೆದುಕೊಳ್ಳಲು ಬೇಕಾದ ಸಂಕಲ್ಪವೂ ಇಲ್ಲಿದೆ. ಇದನ್ನು ಡಾ. ಡಿ. ಎನ್. ಶಂಕರಭಟ್ಟರವರು ರೂಪಕಾತ್ಮಕ ಮಾದರಿಯಲ್ಲಿ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಕೃತಿಯಲ್ಲಿ ವಿವರಿಸಿದ್ದಾರೆ. "ಈ ವ್ಯಾಕರಣಾಭ್ಯಾಸದ ಸಮಸ್ಯೆಯನ್ನು ನಿಮ್ಮ ಮನೆಗೆ ದಾರಿ ಹೇಳುವ ಸಮಸ್ಯೆಗೆ ಹೋಲಿಸಿ ನೋಡಬಹುದು, ನಿಮ್ಮ ಮನೆಗೆ ಹೋಗಲು ದಾರಿ ಕೇಳಿದವರಿಗೆ ನಮ್ಮೂರಿನ ದೇವಸ್ಥಾನಕ್ಕೆ ಹೋಗುವ ದಾರಿಯನ್ನು ಮೊದಲಿಗೆ ಹೇಳಿ ಅನಂತರ ಅಲ್ಲಿಂದ ನಿಮ್ಮ ಮನೆಗೆ ಹೋಗುವ ದಾರಿಯನ್ನು ಹೇಳಿದಿರಾದರೆ, ಅದು ಅವರಿಗೆ ಸಹಾಯಕವಾಗಲೂ ಸಾಧ್ಯವಿದೆ, ತೊಂದರೆಯನ್ನುಂಟು ಮಾಡಲೂ ಸಾಧ್ಯವಿದೆ. ನಿಮ್ಮ ಮನೆ ದೇವಸ್ಥಾನಕ್ಕಿಂತ ಬೇರೆಯೇ ಆದ ಒಂದು ದಿಕ್ಕಿನಲ್ಲಿ ಇದೆಯಾದರೆ ಅನವಶ್ಯಕವಾಗಿ ತೊಂದರೆಯಾದೀತು. ಇಂತಹ ಸಂದರ್ಭಗಳಲ್ಲಿ ನಿಮ್ಮ ಮನೆಯ ದಾರಿಯನ್ನು ಮತ್ತು ದೇವಸ್ಥಾನಕ್ಕೆ ಹೋಗುವ ದಾರಿಯನ್ನು ಬೇರೆ ಬೇರೆಯಾಗಿ ತಿಳಿಸುವುದೇ ಒಳ್ಳೆಯದಲ್ಲವೇ?

ಸಂಸ್ಕೃತ ಬಹಳ ಪ್ರಮುಖವಾದ ಒಂದು ಭಾಷೆ. ಅತ್ಯುತ್ತಮವಾದ ಕಾವ್ಯ ಮತ್ತು ಶಾಸ್ತ್ರಗ್ರಂಥಗಳು ಅದರಲ್ಲಿವೆ. ಅದನ್ನು "ದೇವ ಭಾಷೆ" ಯೆಂದೇ ಪರಿಗಣಿಸುವವರೂ ಹಲವರಿದ್ದಾರೆ. ಹಾಗಾಗಿ ಅದರ ವ್ಯಾಕರಣವನ್ನು

ಕಲಿಯುವುದೆಂದರೆ ದೇವಸ್ಥಾನಕ್ಕೆ ಹೋಗಲು ದಾರಿ ಯಾವುದೆಂದು ತಿಳಿಯುವಂತೆಯೇ ಎಂದು ಹೇಳಬಹುದು. ಪ್ರಾಕೃತ, ಪಾಲಿ, ಅಪಭ್ರಂಶ ಮೊದಲಾದ ಭಾಷೆಗಳು ಸಂಸ್ಕೃತಕ್ಕೆ ತೀರ ಹತ್ತಿರವಾದ ಭಾಷೆಗಳು. ಹಾಗಾಗಿ ಅವುಗಳ ವ್ಯಾಕರಣವನ್ನು ಕಲಿಯುವುದಿದ್ದರೆ ಸಂಸ್ಕೃತ ವ್ಯಾಕರಣವನ್ನು ಮೊದಲು ಕಲಿತು ಅನಂತರ ಅದಕ್ಕಿಂತ ಈ ಭಾಷೆಗಳ ವ್ಯಾಕರಣಗಳು ಹೇಗೆ ಭಿನ್ನವಾಗಿವೆ ಎಂಬುದನ್ನು ತಿಳಿಯುವುದರ ಮೂಲಕ ಅವುಗಳ ವ್ಯಾಕರಣವನ್ನು ಅರ್ಥಮಾಡಿಕೊಳ್ಳುವುದು ಬಹುಶ: ಹೆಚ್ಚು ಸುಲಭವಾಗಬಹುದು. ಇದು ದೇವಸ್ಥಾನದ ಹತ್ತಿರವಿರುವ ಮನೆಗಳಿಗೆ ದಾರಿ ಹೇಳುವವರು ಮೊದಲು ದೇವಸ್ಥಾನಕ್ಕೆ ಹೋಗುವ ದಾರಿಯನ್ನು ಹೇಳಿ ಅನಂತರ ಆ ಮನೆಗಳಲ್ಲೊಂದಕ್ಕೆ ಹೋಗುವ ದಾರಿ ಯಾವುದೆಂದು ಹೇಳುವ ಹಾಗೆ ಎನ್ನಬಹುದು.

ಹಿಂದಿ, ಮರಾಠಿ, ಬಂಗಾಲಿ, ಒಡಿಯಾ ಮೊದಲಾದ ಭಾರತದ ಹಲವು ಆಧುನಿಕ ಭಾಷೆಗಳು "ಇಂಡೋ ಆರ್ಯನ್" ಎಂಬ ಭಾಷಾ ಕುಟುಂಬಕ್ಕೆ ಸೇರುತ್ತವೆ. ಅವು ಪ್ರಾಕೃತ, ಅಪಭ್ರಂಶ ಮೊದಲಾದವುಗಳಲ್ಲಿ ಕಾಲದಿಂದ ಕಾಲಕ್ಕೆ ಬೇರೆ ಬೇರೆ ರೀತಿಯ ಬದಲಾವಣೆಗಳಾದುದರಿಂದಾಗಿ ರೂಪುಗೊಂಡ ಭಾಷೆಗಳು. ಹಾಗಾಗಿ, ಅವುಗಳ ವ್ಯಾಕರಣವನ್ನು ತಿಳಿಯುವಲ್ಲೂ ಸಂಸ್ಕೃತದ ವ್ಯಾಕರಣ ಸಹಾಯಕ್ಕೆ ಬರಲು ಸಾಧ್ಯವಿದೆ. ಆದರೆ ಅವು ಸಂಸ್ಕೃತಕ್ಕಿಂತ ಸಾಕಷ್ಟು ಭಿನ್ನವಾಗಿವೆಯಾದ ಕಾರಣ ವ್ಯಾಕರಣದ ಮೂಲಕ ತಿಳಿಸಿ ಹೇಳುವುದು ಅಷ್ಟೊಂದು ಸಮರ್ಪಕವಾಗಲಾರದು. ಇದು ದೇವಸ್ಥಾನಕ್ಕಿಂತ ಸಾಕಷ್ಟು ದೂರ ಇರುವ (ಆದರೂ ಅದೇ ದಿಕ್ಕಿನಲ್ಲಿರುವ) ಮನೆಗಳಿಗೆ ದಾರಿ ಹೇಳುವಂತೆ. ದಾರಿ ತಪ್ಪಿದರೂ ದೇವಸ್ಥಾನಕ್ಕೆ ಹೋಗಿ ಅಲ್ಲಿಂದ ಆ ಮನೆಗಳಿಗೆ ಹೋಗಬಹುದು, ಆದರೆ ನಿಜಕ್ಕೂ ನೇರವಾಗಿ, ದೇವಸ್ಥಾನಕ್ಕೆ ಹೋಗದೆ ಆ ಮನೆಗಳಿಗೆ ಹೋಗುವುದೇ ಅನುಕೂಲ.

ಕನ್ನಡ, ತಮಿಳು, ಮಲೆಯಾಳ, ತೆಲುಗು ಮೊದಲಾದ ದ್ರಾವಿಡ ಭಾಷಾ ಕುಟುಂಬಕ್ಕೆ ಸೇರಿರುವ ಭಾಷೆಗಳು ಸಂಸ್ಕೃತಕ್ಕಿಂತ ತೀರ ಭಿನ್ನವಾಗಿರುವ ಭಾಷೆಗಳು. ಅವುಗಳ ವ್ಯಾಕರಣಗಳೂ ಸಂಸ್ಕೃತಕ್ಕಿಂತ ತೀರ ಭಿನ್ನವಾದವುಗಳು. ಸಂಸ್ಕೃತಕ್ಕೂ ಅವಕ್ಕೂ ನಡುವಿರುವ ಸಂಬಂಧ ದೇವಸ್ಥಾನಕ್ಕೂ ಮತ್ತು ಊರಿನ ಬೇರೆಯೇ ಒಂದು ದಿಕ್ಕಿನಲ್ಲಿರುವ ಮನೆಗಳಿಗೂ ನಡುವಿರುವ ಸಂಬಂಧದ ಹಾಗೆ ಎನ್ನಬಹುದು. ಆದುದರಿಂದ ಅವುಗಳ ವ್ಯಾಕರಣವನ್ನು ಸಂಸ್ಕೃತ ವ್ಯಾಕರಣಕ್ಕೆ ಸಂಬಂಧಿಸಲು ಹೋಗದೇ ಇರುವುದೇ ಉತ್ತಮ[೧]. ಡಾ. ಡಿ. ಎನ್. ಶಂಕರ ಭಟ್ಟರವರು ದಾರಿ ತೋರುವ ಬಗೆಯಲ್ಲಿ ಕನ್ನಡ ವ್ಯಾಕರಣ, ಶಬ್ದರಚನೆ, ವಾಕ್ಯ ರಚನೆಯನ್ನು ಸಂಸ್ಕೃತ ವ್ಯಾಕರಣ ನಿಯಮಗಳ ಮೂಲಕ ವಿವರಿಸುವ ವಿಧಾನವನ್ನು ಪ್ರಶ್ನಿಸಲಾಗುತ್ತದೆ.

ಸಂಸ್ಕೃತದ ಗುಡಿಗೂ ಕನ್ನಡದ ಮನೆಗೂ ಸಂಬಂಧವೇ ಇಲ್ಲವೆನ್ನುವಂತಿಲ್ಲ. ಕನ್ನಡಕ್ಕೆ ಸಂಸ್ಕೃತದ ಶಬ್ದಗಳು ಬಂದು ಸೇರುವಿಕೆಯಲ್ಲಿ ಸಂಬಂಧವಿದೆ. ಆದರೆ ಶಬ್ದ ಪದ ವಾಕ್ಯರಚನೆ ಮುಂತಾದವುಗಳ ನಿಯಮದ ವಿಚಾರದಲ್ಲಿ ಸಂಬಂಧವಿಲ್ಲ. ಆದ್ದರಿಂದ ಕನ್ನಡಕ್ಕೆ ಕನ್ನಡದ್ದೇ ಆದ ವ್ಯಾಕರಣವಿದೆ ಮತ್ತು ಅದನ್ನು ಅರಿತು ಕಟ್ಟಿಕೊಳ್ಳಬೇಕಿದೆ ಎನ್ನುವುದು ಇಲ್ಲಿನ ಛಲ. 'ಕನ್ನಡತ್ವ'ವನ್ನು ಕಂಡುಕೊಳ್ಳುವ ಈ ಹಠವನ್ನು ಇನ್ನೂ ಅನೇಕ ಕ್ಷೇತ್ರಗಳಿಗೆ ಅನ್ವಯಿಸಬಹುದಾಗಿದೆ. ಉದಾಹರಣೆಗೆ : ಕನ್ನಡದ್ದೇ ಸಾಹಿತ್ಯ ಮೀಮಾಂಸೆ, ಹಾಗೇನೆ ಯಾವುದೇ ಆದ ಜೀವಂತ ಭಾಷೆಯ ಕ್ಷೇತ್ರಕ್ಕೆ, ಅಧ್ಯಯನಕ್ಕೆ ಇಲ್ಲವೇ ಭಾಷಾ ಪರಂಪರೆಗೆ ಅಧ್ಯಯನದ ಮಾದರಿಗಳು, ತಾತ್ವಿಕತೆಯ ಒಳನೋಟಗಳು, ಪ್ರೇರಣೆಗಳು ಎಲ್ಲಿಂದ ಬಂದರೂ ಸರಿ, ಅವು ಸ್ಥಳೀಯ ಅನುಭವಲೋಕ ಹಾಗೂ ವರ್ತಮಾನದ ತುರ್ತುಗಳ ಮೂಲಕ ಮರು ಹುಟ್ಟು ಪಡೆಯಬೇಕು. ಈ ಮರು ಹುಟ್ಟಿನ ಜತೆಯಲ್ಲಿ ಭಾಷಾಧ್ಯಯನದ ಹೊಸ ತತ್ವವೂ ಹುಟ್ಟಿಬಿಡುತ್ತದೆ. ತಿಂದ ಬಗೆ ಬಗೆಯ ಆಹಾರ ಶಕ್ತಿಯಾಗಿ ದೇಹದ ಅಂಗಾಂಗಗಳಲ್ಲಿ ಚೈತನ್ಯವಾಗಿ ಸೇರಿಕೊಳ್ಳುವಂತೆ ಹರಡಿಹೋಗುತ್ತದೆ. ಹಾಗೆ ಅಂತರ್ಗತವಾದ ಭಾಷಾಧ್ಯಯನದ ನೆಲೆಗಳನ್ನು ಮೂರ್ತರೂಪದಲ್ಲಿ ಮತ್ತೆ ಮತ್ತೆ ಕಟ್ಟಿಕೊಳ್ಳುವ ಕೆಲಸ ಆಗಬೇಕು. ಕನ್ನಡದ ಮಟ್ಟಿಗೆ ಈ ಕೆಲಸ ವ್ಯಾಕರಣ, ಸೇರಿದಂತೆ ಶೈಕ್ಷಣಿಕವಾಗಿ ಭಾಷಾಧ್ಯಯನದ ನೆಪದಲ್ಲಿ ಇವತ್ತು ಕಲಿಯುತ್ತಿರುವ, ಕಲಿಸುತ್ತಿರುವ ಮೂಲಭೂತ ನೋಟವೇ ಬದಲಾಗಬೇಕಾಗಿದೆ.

ಸ್ವಾತಂತ್ರ್ಯಾನಂತರ ಶಿಕ್ಷಣ ಸಾರ್ವತ್ರಿಕವಾಗಿ ಎಲ್ಲರಿಗೂ ಲಭಿಸುತ್ತಿದೆ. ಹಾಗೆ ದೊರಕುತ್ತಿರುವ ಶೈಕ್ಷಣಿಕ ಪಠ್ಯದಲ್ಲಿ ಮತ್ತು ಈಗಾಗಲೆ ನಡೆದ ಬಹುಪಾಲು ಭಾಷಾಧ್ಯಯನ ಮಾದರಿಯು 'ಭಾರತೀಯ' ಹೆಸರಿನಲ್ಲಿ ಸಂಸ್ಕೃತದ ಹಾಗೂ ಮುಂದುವರೆದು ಪಾಶ್ಚಾತ್ಯ ಕನ್ನಡಕದ ಮೂಲಕ ನೋಡುತ್ತಿರುವ ಕನ್ನಡ ಭಾಷೆಯಾಗಿದೆ. ಕನ್ನಡದ ಪ್ರಾಚೀನ ಕ್ಲಾಸಿಕಲ್ ಭಾಷೆಯ ಅವಸ್ಥೆಯಲ್ಲಿ ಸಂಸ್ಕೃತದ ಹಾಗೂ ಆಧುನಿಕ ಅಥವಾ ಹೊಸಗನ್ನಡ ಸನ್ನಿವೇಶದ ಅವಸ್ಥೆಗೆ ಪಾಶ್ಚಿಮಾತ್ಯ ಭಾಷಾಧ್ಯಯನದ ಸಂಬಂಧಗಳನ್ನು ತಳ್ಳಿಹಾಕುವಂತಿಲ್ಲ. ಇದು ಭಾಷಾಧ್ಯಯನ ಕ್ಷೇತ್ರವೂ ನಡೆಸಿದ ಅನುಸಂಧಾನಗಳು. ಸಂಸ್ಕೃತ ನೇರವಾಗಿ ಕನ್ನಡದ ಮೇಲೆ ಪ್ರಭಾವ ಬೀರಿರುವಂತೆಯೇ; ಕನ್ನಡದ ಬಹುಪಾಲು ವ್ಯಾಕರಣ ಕೃತಿಗಳು, ಕನ್ನಡ ಹೊಸ ದಾರಿಗಾಗಿ ಮಿಸುಕಾಡಿದರೂ ಸಹ ಅದು ಒಂದು ತನ್ನ ಅಸ್ತಿತ್ವದ ಸಂಘರ್ಷ. ಹಾಗೆಯೇ ಪಾಶ್ಚಾತ್ಯ ರಾಷ್ಟ್ರಗಳ ಬಹುಪಾಲು ವ್ಯಾಕರಣ ಕೃತಿಗಳು, ಭಾಷಾಧ್ಯಯನದ ಮಾದರಿಗಳು ಕನ್ನಡದ್ದೇ ಆದ ತನ್ನತನದ ಹುಡುಕಾಟದ ಸಂಘರ್ಷ

ಅನುಸಂಧಾನವೂ ಇದೆ. ಪಾಣಿನಿ, ಯಾಸ್ಕ, ಕಾತ್ಯಾಯನ, ಸಂಸ್ಕೃತ ವ್ಯಾಕರಣದ ಪ್ರಮುಖ ಮಾದರಿಗಳು ಮತ್ತು ಅವರ ಪ್ರಭಾವ ಹಾಗೆಯೇ ತನ್ನಲ್ಲಿ ಮುಂದುವರೆಸಿರುವುದು. ಆ ಸಂಸ್ಕೃತ ಮಾದರಿಯು ಕನ್ನಡದ ಪ್ರಮುಖ ವ್ಯಾಕರಣ ಅಥವಾ ಭಾಷಾಧ್ಯಯನದ ಕೃತಿಗಳಾದ ಕವಿರಾಜಮಾರ್ಗ, ಕರ್ನಾಟಕ ಭಾಷಾಭೂಷಣ, ಶಬ್ದಸ್ಮೃತಿ, ಶಬ್ದಮಣಿದರ್ಪಣ, ಶಬ್ದಾನುಶಾಸನ ಇವು ನೇರವಾಗಿ ಸಂಸ್ಕೃತದೊಂದಿಗೆ ಅನುಸಂಧಾನ ನಡೆಸಿದೆ. ವಿಲಿಯಂ ಕಾರಿ, ಜಾನ್ ಮೆಕೆರೆಲ್, ಥಾಮಸ್ ಹಡ್ಸನ್, ರೆವ್ಹೆರೆಂಡ್ ಡಾ. ಎಫ್. ಕಿಟಲ್, ರೆವ್ಹೆರೆಂಡ್ ಡಾ. ಕಾಲ್ಡ್‌ವೆಲ್ ಮುಂತಾದವರು ಪಾಶ್ಚಾತ್ಯ ವಿದ್ವಾಂಸರು ಸ್ವತಹ ಕನ್ನಡ ಭಾಷಾಧ್ಯಯನಕ್ಕೆ ತೊಡಗಿದ್ದು. ಅದೇ ಸಮಯದಲ್ಲಿ ಇವರಿಂದ ಪ್ರೇರಿತರಾಗಿ ಮುಂದುವರೆದ ನೆಲೆ. ಪಂಡಿತ ವೆಂಕಟ ರಂಗೋಕಟ್ಟಿ, ಪ್ರೊ. ಮ. ಪ್ರ. ಪೂಜಾರ, ಪ್ರೊ. ಬಿ. ಎಂ. ಶ್ರೀ. ಪ್ರೊ. ತೀ. ನಂ. ಶ್ರೀ. ಪ್ರೊ. ಬಿ. ಮಲ್ಲಪ್ಪ, ಪ್ರೊ. ಎ. ಎನ್. ನರಸಿಂಹಯ್ಯ, ಡಾ. ಆರ್. ನರಸಿಂಹಾಚಾರ್ಯ, ಡಾ. ಜಿ. ಎಸ್. ಗಾಯಿ ಮುಂತಾದವರು. ಮುಂದುವರೆದು ಪಾಶ್ಚಾತ್ಯದ ಇನ್ನಷ್ಟು ಪ್ರಭಾವಕ್ಕೆ ಒಳಗಾದರು. ಡಾ. ಎಂ. ಚಿದಾನಂದ ಮೂರ್ತಿ, ಡಾ. ಹಂಪನಾಗರಾಜಯ್ಯ, ಡಾ. ಕೆ. ಕುಶಾಲಪ್ಪ ಗೌಡ, ಡಾ. ಜಿ. ಎಸ್. ಕುಳ್ಳಿ, ಡಾ. ಎಚ್ ಎಸ್. ಬಿಳಿಗಿರಿ ಮುಂತಾದವರು. ಆದರೆ ಸಂಸ್ಕೃತ ಅಥವಾ ಪಾಶ್ಚಾತ್ಯ ಪ್ರಣೀತ ಭಾಷಾಧ್ಯಯನ ಕನ್ನಡದ್ದೇ ಆದ ವ್ಯಾಕರಣಕ್ಕೂ ತುಂಬಾ ವ್ಯತ್ಯಾಸ ಇದೆ. ಹಿಂದೆಂದಿಗಿಂತಲೂ ಇಂದು ಹೆಚ್ಚು ಸ್ಪಷ್ಟವಾಗುತ್ತಿದೆ. ಆದರೂ ನಮ್ಮ ಭಾಷಾಧ್ಯಯನದಲ್ಲಿ ಈ ಸಂಸ್ಕೃತ ಮತ್ತು ಪಾಶ್ಚಾತ್ಯ ಪ್ರಣೀತವನ್ನೇ ಮುಂದುವರೆಸಿದ್ದೇವೆ. ಇದರ ಪರಿಣಾಮ ಮತ್ತು ಪ್ರಯೋಜನ ನಮ್ಮ ಭಾಷೆಯ ಮೇಲೆ ಉಂಟಾಗಿರುವ ಸ್ವರೂಪವೆಂತಹದ್ದು? 'ಭಾರತೀಯ' ಎಂಬ ಹೆಸರಿನಲ್ಲಿ ಕಲಿಯುತ್ತಿರುವ ಕನ್ನಡ ವ್ಯಾಕರಣದ ಭಾಗಗಳಾದ, ವರ್ಣಮಾಲೆ, ಮಹಾಪ್ರಾಣ, ಋ, ಸಂಧಿಗಳು ಮುಂತಾದವು ಸಂಸ್ಕೃತದ ಪರಿಕಲ್ಪನೆಗಳು ಕನ್ನಡ ವ್ಯಾಕರಣದ ಅಥವಾ ಭಾಷೆಯನ್ನು ಅರ್ಥಮಾಡಿಕೊಳ್ಳಲು ಯಾವ ರೀತಿ ಸಹಾಯಕವಾಗಿವೆ?

ದಿನ ನಿತ್ಯದ ಕನ್ನಡಿಗರ ಆಡುಭಾಷೆ ಮತ್ತು ಅಕ್ಷರ ಬಲ್ಲವರ ಅಥವಾ ಬರಹದ ಭಾಷೆಯ ನಡುವಿನ ಅಂತರವನ್ನು ಹೋಗಲಾಡಿಸಲು ನಮ್ಮ ವ್ಯಾಕರಣ ಅಥವಾ ಭಾಷಾಧ್ಯಯನ ಮಾದರಿ ಪ್ರಯತ್ನಿಸಿದೆಯೇ? ಇಂತಹ ಪ್ರಶ್ನೆಗಳನ್ನು ಕೇಳಿಕೊಂಡರೆ ನಾವು ಕಲಿಯುತ್ತಿರುವ ವ್ಯಾಕರಣ ನಮ್ಮ ಭಾಷಾ ಕ್ಷೇತ್ರಕ್ಕೂ ನಮ್ಮ ನುಡಿಗೂ ಇರುವ ವೈರುಧ್ಯಗಳು ಗೊತ್ತಾಗುತ್ತವೆ.

೧. ಯಾವುದೇ ಅಧ್ಯಯನ ಮಾದರಿಗಳು ಅಥವಾ ತತ್ವಗಳು ನಿರ್ದಿಷ್ಟ ದೇಶ ಕಾಲದಲ್ಲಿ ಹುಟ್ಟಿದರೂ ಇನ್ನೊಂದು ಕಾಲದೇಶ ಸಂದರ್ಭದಲ್ಲಿ ಕೂಡ ಕ್ರೀಯಾಶೀಲವಾಗುವ ಗುಣ ಪಡೆದಿರುತ್ತವೆ. ತತ್ವಗಳಿಗೆ ನಿರ್ದಿಷ್ಟ ಭಾಷೆ ದೇಶ ಕಾಲಗಳ ಗಡಿಗಳಿಲ್ಲ. ಪಾಣಿನಿ ಅಥವಾ ಸಸೂರ್, ನೋಮ್ ಚಾಮ್‌ಸ್ಕಿಯ ಚಿಂತನೆ ಕನ್ನಡಕ್ಕೆ ಉಪಯೋಗಕ್ಕೆ ಬರಬಹುದು. ಆದರೆ ನಮ್ಮ 'ಕನ್ನಡದ್ದೇ' ಭಾಷಾಧ್ಯಯನದಲ್ಲಿ ಸಂಗಾತಿಯಾಗಿ ಬಳಕೆಯಾಗುತ್ತಿದೆಯೇ ಇಲ್ಲವೆ ಎಂಬುದರ ಪರಿಶೀಲನೆಯ ಅಗತ್ಯವಿದೆ. ಯಾವುದೇ ಪ್ರಮುಖ ಚಿಂತನೆಗಳು ಜಾಗತಿಕ ಅಥವಾ ಭಾರತೀಯ ಎನ್ನಲಾಗುವ ತತ್ವಗಳು ತಂತಮ್ಮ ಚಾರಿತ್ರಿಕ ಸಂದರ್ಭದ ಸಮಸ್ತ ಮುದ್ರೆಗಳ ಜತೆಗೇ ಹುಟ್ಟಿರುತ್ತದೆ. ಅದಕ್ಕೆ ತಮ್ಮದೇ ಆದ ಭಾಷೆಯ ಒಂದು ಬುನಾದಿ ಇರುತ್ತದೆ. ಹೀಗಾಗಿ ಅವು ಮತ್ತೊಂದು ಭಾಷೆಗೆ ಸಂಪೂರ್ಣವಾಗಿ ಅನ್ವಯ ಆಗುತ್ತವೆ ಎಂದು ಹೇಳಲಾಗದು. ಅವು ಆಯಾ ಭಾಷೆಯ ಅಂತರ್ ಸಂಬಂಧದ ನಿಯಮಗಳ ಮರು ವ್ಯಾಖ್ಯಾನಕ್ಕೆ ಒಳಗು ಮಾಡಿದಾಗ ನೆರವಿಗೆ ಬರಬಹುದು. ಆದರೆ ಅದೇ ಮಾದರಿಯಲ್ಲಿ ನಡೆಯಲಾಗದು ಅಥವಾ ನಡೆಯಲೂಬಾರದು. ಇದಕ್ಕೆ ಪ್ರಶ್ನೆ ರೂಪದಲ್ಲಿ ಯೋಚನೆಯನ್ನು ಹೇಳುವುದಾದರೆ. ಸಾವಿರಾರು ವರ್ಷಗಳ ಪರಂಪರೆಯುಳ್ಳ ಕನ್ನಡ ಭಾಷೆ ಮತ್ತು ಅಧ್ಯಯನವು ತನ್ನದೇ ಆದ ಅಧ್ಯಯನದ ತತ್ವವನ್ನು ಹುಟ್ಟಿಸಿದೆಯೇ? ಹುಟ್ಟಿಸಿದ್ದರೆ ಅದು ಯಾವುದು? ಈ ವಿಷಯದಲ್ಲಿ ಕನ್ನಡದ ಸ್ಥಿತಿ 'ಸಮುದ್ರದ ನಂಟಸ್ಥನ, ಉಪ್ಪಿಗೆ ಬಡತನ' ಎಂಬಂತಿದೆ. ಸಮೃದ್ಧ ಸಾಹಿತ್ಯ ಮತ್ತ ಜನಬಳಕೆಯ ಭಾಷೆಯಾದ ಕನ್ನಡವು, ಭಾರತೀಯ ಕೆಲವೇ ಕೆಲವು ಪ್ರಮುಖ ಭಾಷೆಗಳಲ್ಲಿ ಒಂದು. ದೀರ್ಘ ಮತ್ತು ವ್ಯಾಪಕ ಶ್ರೀಮಂತ ಚರಿತ್ರೆಯನ್ನು ಹೊಂದಿರುವುದಾಗಿದೆ. ಆದರೆ ಹಾದಿಯುದ್ದಕ್ಕೂ ಕನ್ನಡಕ್ಕೆ ಪುಷ್ಟಿದಾಯಕವಲ್ಲದ ಚಿಂತನೆಗಳು ಅದೂ ಎರವಲು ಪಡೆದ ಕಂದಮ್ಮಗಳೊಂದಿಗೆ ಹೆಣಗುತ್ತ ಬಂದಿದೆ.

ನಮ್ಮ ಭಾಷಾಧ್ಯಯನ, ವ್ಯಾಕರಣಕ್ಕೆ ಭಾಷೆಯ ಒಳಗಿನಿಂದಲೇ ಕಂಡುಕೊಳ್ಳದೆ ಚೂರುಪಾರು ಎಳೆಗಳಿಂದಲೇ ಮುನ್ನಡೆದದ್ದು ಒಂದು ಮುಖ್ಯ ಕೊರತೆ. ನಮ್ಮ ದೊಡ್ಡ ದೊಡ್ಡ ಚಿಂತಕರು ವೈಯಾಕರಣಿಗಳೂ ಆದ ಶ್ರೀವಿಜಯ, ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಮುಂತಾದ ವ್ಯಾಕರಣದ ಗೋಪುರ ಅಥವಾ ದೇವಾಲಯಗಳನ್ನು ದಾಟಿ; ಡಾ. ಕೆ. ವಿ. ನಾರಾಯಣ, ಡಾ. ಡಿ. ಎನ್. ಶಂಕರ ಭಟ್, ಡಾ. ಎಚ್. ಎಸ್. ಬಿಳಿಗಿರಿ, ಡಾ. ಎಸ್. ಎನ್. ಶ್ರೀಧರ ಮತ್ತು ಕನ್ನಡ

ವಿಶ್ವವಿದ್ಯಾಲಯದ ಕನ್ನಡ ಭಾಷಾಧ್ಯಯನ ವಿಭಾಗದ ಚಿಂತನೆಗಳನ್ನು ಕಂಡುಕೊಳ್ಳಬೇಕಿದೆ.

೨. ಯಾವುದೇ ಒಂದು ಭಾಷೆಯ ವ್ಯಾಕರಣವನ್ನು ಸಿದ್ಧಗೊಂಡ ತತ್ವ ಅಥವಾ ಸೂತ್ರಗಳ ಅನುಗುಣವಾಗಿ ಕಂಡುಕೊಳ್ಳುವುದು ಸೂಕ್ತ ಕ್ರಮವೇನು ಅಲ್ಲ. ನಾವು ಯಾವ ಬಣ್ಣದ ಕನ್ನಡಕ ಧರಿಸುತ್ತೇವೋ ಆ ಬಣ್ಣದಲ್ಲಿ ಜಗತ್ತು ಕಾಣುವುದು. ನಿಜಕ್ಕೂ ಜಗತ್ತು ಕನ್ನಡಕದ ಕಣ್ಣುಗಳ ಬಣ್ಣದ್ದೇ ಆಗಿರುವುದಿಲ್ಲ. ಹೀಗಾಗಿ ಭಾರತೀಯ ಅಥವಾ ಜಾಗತಿಕ ಅಥವಾ ಪರಂಪರೆಯುದ್ದಕ್ಕೂ ಕನ್ನಡ ಭಾಷೆ ಅವಲಂಬಿತ ಮಾದರಿಯೇ ಪ್ರಧಾನವಾಗಿದ್ದುದನ್ನು ಬಿಟ್ಟು ಹೊಸ ಮಾದರಿಯನ್ನು ಕಂಡುಕೊಳ್ಳಬೇಕಿದೆ. ಇಂತಹ ಪ್ರಯತ್ನವನ್ನು ಡಾ. ಡಿ. ಎನ್. ಶಂಕರ ಭಟ್, ಡಾ. ಕೆ. ವಿ. ನಾರಾಯಣ ಮುಂತಾದವರು ಸಿದ್ಧಮಾದರಿಗಳನ್ನು ತ್ಯಜಿಸಿ, ಇದುವರೆಗೆ ನಡೆದ ಹಾದಿಗಳನ್ನು ತೊರೆದು ಕಾಡಿನ ಕಿರುದಾರಿಗಳ ಮೂಲಕ ಅಥವಾ ಈವರೆಗಿನ ದಾರಿಗೆ ಎದುರು ನಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ಈ ಎದುರು ಎನ್ನುವುದು ಇದುವರೆಗಿನ ಚಲನೆಗೆ ಹಠಕ್ಕೆ ಬಿದ್ದು ನಡೆಯುತ್ತಿರುವ ಬಗೆಯದ್ದಲ್ಲ. ಅಂದರೆ ಮೈನ್‌ಸ್ಟ್ರೀಮ್‌ಗಿಂತ ಪ್ರಮುಖವಾಗಿ ಸಮಾಜದ ಅಂಚಿನಲ್ಲಿ ಬದುಕುವವರ ನುಡಿಯ ಮೂಲಕ ವ್ಯಾಕರಣದ ಅಂಶಗಳನ್ನು ಕಂಡುಕೊಳ್ಳುವುದು. ಬರವಣಿಗೆಯ ಒಂದು ಮಾದರಿಯನ್ನು ಗಮನದಲ್ಲಿಟ್ಟುಕೊಂಡು ಕಾಣುವ ವ್ಯಾಕರಣಕ್ಕಿಂತಲೂ, ಸಮಾಜದ ಹಲವು ನೆಲೆಗಳಿಂದ ಕಂಡುಕೊಳ್ಳುವುದು.

೩. 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಅಥವಾ 'ಕನ್ನಡಕ್ಕೆ ಬೇಕು ಕನ್ನಡದ್ದೇ ಭಾಷಾಧ್ಯಯನದ ಮಾದರಿ' ಎನ್ನುವುದು ಆತ್ಯಂತಿಕ ಬೇಡಿಕೆಯಾಗಿ ಕಾಣಬಹುದು. ಕನ್ನಡ ಭಾಷೆ ಅಥವಾ ವ್ಯಾಕರಣದ ಚಿಂತನೆಗೆ ಒಂದು ಸ್ವತಂತ್ರವಾದ ತಾತ್ವಿಕ ರೂಪವಿದ್ದು, ಅದು ಮಾತ್ರ ಕನ್ನಡ ಭಾಷಾಧ್ಯಯನಕ್ಕೆ ಸಾಕು ಎಂಬ ಸಂಕುಚಿತ ಅರ್ಥವನ್ನದು ಕೊಡಬಹುದು. ಯಾವುದೇ ಆತ್ಯಂತಿಕ ನಿಲುವು ಮೂಲಭೂತವಾದಿ ಆಗುತ್ತದೆ. ಕನ್ನಡ ಭಾಷಾ ಜಗತ್ತು ಜಗತ್ತಿನ ಸಾಹಿತ್ಯ ಅಥವಾ ಜಗತ್ತಿನ ಭಾಷೆಗಳಿಂದ ಬೇರ್ಪಡಿಸಿಕೊಂಡ ದ್ವೀಪವಲ್ಲ. ಆದರೆ ಒಂದು ಭಾಷೆ ತನ್ನದಲ್ಲದ ವರ್ಣಮಾಲೆ, ವ್ಯಾಕರಣ, ಭಾಷಾ ಚಿಂತನೆಯ ಮಾದರಿಗಳನ್ನು ಹೇರಿಕೊಂಡ ಸ್ಥಿತಿಯಲ್ಲಿದ್ದಾಗ, ಇಂತಹ ಆತ್ಯಂತಿಕ ಧೋರಣೆ ತಳೆಯುವುದು ಚಾರಿತ್ರಿಕ ಅಗತ್ಯವಾಗಬಹುದು; ಅಸಮಾನ ಸಂಬಂಧಗಳನ್ನು ಹರಿದುಕೊಳ್ಳಲು ಬಲವಾದ ಕೊಡುವಿಕೆಯೇ ಬೇಕಾಗಬಹುದು. ಕನ್ನಡ ಭಾಷೆಯು ತನ್ನ

ಚರಿತ್ರೆಯುದ್ದಕ್ಕೂ ಸಂಸ್ಕೃತ – ಇಂಗ್ಲೀಶ್‌ಗಳಿಂದ ಶಕ್ತಿ ಪಡೆದಿರುವಂತೆ, ಹೇರಿಕೆಯನ್ನೂ ಅನುಭವಿಸಿದೆ. ಈ ಪ್ರಕ್ರಿಯೆ ಇನ್ನೂ ನಿಂತಿಲ್ಲ. ಸಂಸ್ಕೃತ ಅಥವಾ ಪಾಶ್ಚಾತ್ಯ ಭಾಷೆ, ವ್ಯಾಕರಣ, ಚಿಂತನೆಗಳ ತತ್ವಗಳ ಜತೆ ಕನ್ನಡವು ಮಾಡಿದ ಅನುಸಂಧಾನದಲ್ಲಿ ಯಾವತ್ತೂ ಸಂಕರದಂತೆ ಸಂಘರ್ಷಗಳೂ ಇವೆ. ಯಾವುದೇ ಜೀವಂತ ಭಾಷೆಯು ತನ್ನತನದ ಸಾಧನೆ ಮಾಡಿರುವುದು, ಬೇಡಿಕೊಂಡು ಬದುಕಿದಾಗ ಅಲ್ಲ. ಯಾರ ಸಹವಾಸವೂ ಬೇಡವೆಂದು ಸೆಟೆದು ನಿಂತಾಗಲೂ ಅಲ್ಲ. ಕನ್ನಡ ಭಾಷೆ ವ್ಯಾಕರಣ ಕುರಿತ ಚಿಂತನೆ ದ್ವೀಪ ಪರಿಕಲ್ಪನೆ ಖಂಡಿತವಾಗಿಯೂ ಅಲ್ಲ. ಇದು ಹಲವಾರು ಭಾಷಾ ಚಿಂತನೆ, ವ್ಯಾಕರಣ ಮಾದರಿಗಳಿಂದಲೂ ಬೆಳಕನ್ನು ಪಡೆದುಕೊಂಡು ಬಂದಿದೆ. ಪಾಶ್ಚಾತ್ಯ ಆಧುನಿಕ ಚಿಂತನೆಯ ಫಲಿತವಾಗಿ ನಮ್ಮಲ್ಲಿ ಶಬ್ದಮಣಿದರ್ಪಣ, ಕರ್ನಾಟಕ ಭಾಷಾಭೂಷಣ, ಮುಂತಾದ ಕೃತಿಗಳ ಮಾದರಿಯಿಂದ ಮುಂದೆ ಬಂದು ಯೋಚಿಸಿದ ಡಾ. ಎಚ್. ಎಸ್. ಬಿಳಿಗಿರಿ, ಡಾ. ಎಸ್. ಎನ್. ಶ್ರೀಧರ್, ಡಾ. ಡಿ. ಎನ್. ಶಂಕರ ಭಟ್ ಮುಂತಾದವರು ಸಂಸ್ಕೃತ ಮತ್ತು ಪಾಶ್ಚಾತ್ಯದೊಂದಿಗಿನ ನಡೆಸಿದ ಕೊಡುಕೊಳೆಯಲ್ಲಿ ಸಂಘರ್ಷಗಳಿವೆ. ಇದೆಲ್ಲವನ್ನು ಡಾ. ಡಿ. ಎನ್. ಶಂಕರ ಭಟ್‌ರವರು ಹೇಳಿದ ರೂಪದಲ್ಲಿ ಹೇಳುವುದಾದರೆ, ಇದು ಗುಡಿಯ ಹಂಗನ್ನು ಬಿಟ್ಟು ನೇರವಾಗಿ ತಮ್ಮ ಮನೆಗೆ ಹೋಗುವ ಯತ್ನ.

೪. ಜಗತ್ತಿನ ಯಾವುದೇ ಭಾಷೆಯ ವ್ಯಾಕರಣ, ಭಾಷಾಧ್ಯಯನ ಮಾದರಿಯ ಅಥವಾ ಚಿಂತನೆ ಇರಲಿ ಅದು ನಮ್ಮ ಭಾಷೆಯನ್ನು ಅರ್ಥಪೂರ್ಣವಾಗಿ ಅರಿಯಲು ಹಾಗೂ ಭಾಷೆಯನ್ನು ಕುರಿತು ಅರಿಮೆಯನ್ನು ಬೆಳೆಸಲು 'ಸಂಗಾತಿ' ಆಗಿರಬಹುದು. ರಾಬರ್ಟ್ ಕಾಲ್ಡ್‌ವೆಲ್‌ನ ತೌಲನಿಕ ಭಾಷಾಧ್ಯಯನ ಅಲ್ಲದೆ ವರ್ಣನಾತ್ಮಕ ಅಧ್ಯಯನ, ವಾಕ್ಯ ವಿಜ್ಞಾನ, ಸಮಾಜೋಭಾಷಿಕ ಅಧ್ಯಯನ, ಶೈಲಿವಿಜ್ಞಾನ ಮುಂತಾದವು. ಇವೆಲ್ಲವೂ ಇವತ್ತು ಕನ್ನಡ ಭಾಷಾ ಅರಿಮೆಯ ಸಂಗಾತಿಗಳಾಗಿ ಕಾರ್ಯ ನಿರ್ವಹಿಸಿವೆ. ಕನ್ನಡ ಭಾಷಾ ಚಿಂತನೆಯಲ್ಲಿ ಬೆರೆತು ಹೊಸ ಹುಟ್ಟುಗಳಿಗೂ ಕಾರಣ ವಾಗಿವೆ.

೫. ಕೆಲವು ವ್ಯಾಕರಣ ಮಾದರಿಗಳು ಮತ್ತು ಭಾಷಾಧ್ಯಯನ ಮಾದರಿಗಳು ಸಂಗಾತಿಯಾಗದೆ, ಧಣಿಯಂತೆ ವರ್ತಿಸುತ್ತವೆ. ಯಾವುದೇ ಭಾಷೆಗೆ ಈ ಯಜಮಾನಿಕೆಯ ಗುಣ ಜನ್ಮಸಿದ್ಧವಾಗಿ ಬಂದಿರುವುದಿಲ್ಲ. ಅವನ್ನಾಡುವ ಚಿಂತಿಸುವ ಸಮುದಾಯಗಳು ರಾಜಕೀಯ ಅಧಿಕಾರ ಪಡೆದಾಗ ಬರುತ್ತದೆ. ಆದರೆ ಈ ಧಣಿತನವು ಬೇರೆಯವರಿಗೆ ಕೊಡಲು ಹಾತೊರೆಯುತ್ತದೆಯೇ

ಹೊರತು ಪಡೆಯುವದಕ್ಕಲ್ಲ ಅಥವಾ ಕೊಡು – ಕೊಳ್ಳುವ ಸಾಮರಸ್ಯವೇ ಇರುವುದಿಲ್ಲ. ಸಂಸ್ಕೃತ ಮತ್ತು ಪಶ್ಚಿಮದ ಭಾಷಾ ಅರಿಮೆಯ ಮಾದರಿಗಳು ಈ ಧಣಿಯ ಗುಣವನ್ನು ದೇಶೀ ಭಾಷೆಗಳ ಸಂದರ್ಭದಲ್ಲಿ ಪ್ರದರ್ಶಿಸಿವೆ. ಕೆಲವೊಮ್ಮೆ ದೇಶೀಭಾಷೆಗಳು ಅವನ್ನು ತಮ್ಮ ಒಳ ಅಗತ್ಯಕ್ಕೆ ತಕ್ಕಂತೆ ಮಾತ್ರವಲ್ಲ, ಅವುಗಳ ಪ್ರಭಾವಳಿಯ ಕಾರಣದಿಂದ ಸಹ ಸ್ವೀಕರಿಸತೊಡಗುತ್ತವೆ. ವರ್ಣಮಾಲೆಯಲ್ಲಿ ಋ, ಮಹಾಪ್ರಾಣಗಳು, ಷ, ಮುಂತಾದ ವರ್ಣಗಳು ಅಗತ್ಯಕ್ಕಿಂತ ಹೆಚ್ಚಾಗಿ ಪ್ರಭಾವದ ನಿಮಿತ್ತವಾಗಿ ಉಳಿಸಿಕೊಂಡು ಹೆಚ್ಚುವರಿಯಾಗಿ ಸಾಕಲಾಗುತ್ತಿದೆ. ಸಂಧಿಗಳ ವಿಚಾರದಲ್ಲಿ ಸಂಸ್ಕೃತದ ಸಂಧಿಗಳ ಅಧ್ಯಯನದಿಂದ ಕನ್ನಡ ಸಂಧಿಗಳನ್ನು ಕಂಡುಕೊಂಡು ಅರ್ಥಮಾಡಿಕೊಳ್ಳಲು ಸಾಧ್ಯವಾಗಿರಬಹುದು, ಹಾಗಂತ ಅಗತ್ಯವಿಲ್ಲದಿದ್ದರೂ ಸಂಸ್ಕೃತ ಸಂಧಿಗಳನ್ನು ಓದಲೇಬೇಕೆಂದು ಕನ್ನಡ ವ್ಯಾಕರಣದ ಸಂಧಿ ಪ್ರಕರಣದಲ್ಲಿ ಕಟ್ಟುನಿಟ್ಟಿನಿಂದ ಉಳಿಸುವ ಅಗತ್ಯವಿದೆಯೇ. ಈ ಯತ್ನವು ಕನ್ನಡ ಭಾಷಾ ಅರಿಮೆಯು 'ಅನ್ಯ' ತತ್ವಗಳ ಮೂಲಕವೇ ನೋಡುವ ಮಾದರಿ ಆಗಿಬಿಟ್ಟರೆ ಸಮಸ್ಯೆ. ಈಗ ಸಂಸ್ಕೃತದ ತೆರೆ ಅಥವಾ ಪೊರೆ ಕಳಚಿ ಕನ್ನಡದ್ದೇ ಆದ ತಾತ್ವಿಕ ನೋಟಗಳನ್ನು, ದೃಷ್ಟಿಗಳನ್ನು ತಳೆಯಬೇಕಿದೆ. 'ಮಳೆ ನಿಂತರೂ ಮರದ ಹನಿ ನಿಲ್ಲದು' ಎನ್ನುವ ಸಿಕ್ಕುಗಳನ್ನು ಬಿಡಿಸಿಕೊಳ್ಳಬೇಕಿದೆ. ಇಂಥ ಸನ್ನಿವೇಶದಲ್ಲಿ ಕನ್ನಡವು ತನ್ನತನವನ್ನು ಕಂಡುಕೊಳ್ಳುವುದು ಅನಿವಾರ್ಯವಾಗುತ್ತದೆ. ಸಂಗಾತಿಯಾಗದೆ ಧಣಿಯಾಗುವ ಯಾವ ಭಾಷೆಯ ಮಾದರಿಗಳಿಗೇ ಆಗಲಿ ಪ್ರತಿರೋಧವನ್ನು ತೋರಲೇಬೇಕು.

ಮುಂದಿನ ಅಧ್ಯಾಯಕ್ಕೆ ಹೋಗುವ ಮುನ್ನ ಇಲ್ಲಿಯೇ ಎರಡು ಅಂಶಗಳನ್ನು ಸಂಕ್ಷಿಪ್ತವಾಗಿ ಸ್ಪಷ್ಟಪಡಿಸಲು ಯತ್ನಿಸುವೆ.

**ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ :**

ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳು ಭಾರತದ ಅತ್ಯಂತ ಪ್ರಾಚೀನ ಭಾಷೆಗಳು ಹಾಗೂ ಭಾರತದಾದ್ಯಂತ ಪರಿಚಿತವಾದವುಗಳು. ಆದರೆ ಇವತ್ತು ಈ ಎರಡು ಭಾಷೆಗಳು ಯಾವುದೇ ಒಂದು ಪ್ರಾಂತೀಯ ಭಾಷೆಗಳಾಗಿ ಇಲ್ಲ. ಕನ್ನಡ ಭಾಷೆಯ ಮೊದಲ ಚಿಂತನಕಾರರಾದ ಶ್ರೀವಿಜಯ, ನಾಗವರ್ಮ ಅನಂತರ ಬಂದ ಕನ್ನಡ ಲಾಕ್ಷಣಿಕರು ತಮ್ಮ ಕನ್ನಡ ಲಕ್ಷಣ ಗ್ರಂಥಗಳಲ್ಲಿ ಸಂಸ್ಕೃತ ಭಾಷೆಯ ಜೊತೆಯಲ್ಲಿ ಪ್ರಾಕೃತ ಭಾಷೆಯನ್ನೂ ಉಲ್ಲೇಖಿಸಿದ್ದಾರೆ. ಹಾಗೆಯೇ ವರರುಚಿ, ಹೇಮಚಂದ್ರ ಮುಂತಾದ ಪ್ರಾಕೃತ ಭಾಷೆಯ ವೈಯಾಕರಣರು ತಮ್ಮ ವ್ಯಾಕರಣ ಗ್ರಂಥದಲ್ಲಿ

ಸಂಸ್ಕೃತದ ಹಾಗೆ ಪ್ರಾಕೃತ ಭಾಷೆಯೂ ಅಖಿಲ ಭಾರತೀಯ ಭಾಷೆ ಎಂಬುದನ್ನು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ. ಎಂದರೆ ಕನ್ನಡ ಲಕ್ಷಣ ಗ್ರಂಥಗಳಿಂದ ಪ್ರಾಕೃತ ವ್ಯಾಕರಣಗಳ ಮೇಲೆ, ಪ್ರಾಕೃತ ವ್ಯಾಕರಣಗಳಿಂದ ಕನ್ನಡ ಲಕ್ಷಣ ಗ್ರಂಥಗಳ ಮೇಲೆ ಸಾಕಷ್ಟು ಪ್ರಭಾವ ಅಥವಾ ಅನ್ಯೋನ್ಯತೆ ಇತ್ತು ಎಂಬುದು. ಶ್ರೀವಿಜಯನು ತನ್ನ ಕವಿರಾಜಮಾರ್ಗ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ.

ಸಕ್ಕದಮುಂ ಪಾಗದಮುಮ!
ದಕ್ಕುಂ ಬಗೆದಂತೆ ಸಮರಿ ಪೇಳ್ಗುನ್ನಂ!!
ಸಿಕ್ಕುವನೊಳವಪ್ಪುದರಿಂ!
ತಕ್ಕಂತವರವರ ಲಕ್ಷ್ಯಮಂ ಲಕ್ಷಣಮಂ !!೪೧!!

ಅರಿದಾದಂ ಕನ್ನಡದೊ
ಳ್ತರಿಕೊರೆಗೊಂಡರಿಯೆ ಪೇಳ್ವೆನೆಂಬುದಿದಾರ್ಗಂ
ಪರಮಾಚಾರ್ಯರವೊಲ್ಸ
ಯ್ತಿದಲರಿಯರ್ಕನ್ನಡಕ್ಕೆ ನಾಡವರೋಜರ್ !!೪೨!!

ಈ ಪದ್ಯದ ಅರ್ಥವೆಂದರೆ, ಸಂಸ್ಕೃತ, ಪ್ರಾಕೃತಗಳು ನಿಶ್ಚಿತವಾಗಿ ಗೂಢವಾಗಿರುವುದರಿಂದ ಅವು ಕನ್ನಡದಲ್ಲಿ ಹೀಗೆ ಅರ್ಥವಾಗುವುವು ಎಂಬುದನ್ನು ನಿಷ್ಕರ್ಷವಾಗಿ ಹೇಳುವುದಾದರೆ, ಮೊದಲು ಯತಾರ್ಥವಾಗಿ ಅವುಗಳ ಲಕ್ಷ್ಯವನ್ನು ಲಕ್ಷಣವನ್ನೂ ಚೆನ್ನಾಗಿ ತಿಳಿದು, ಸೂಕ್ಷ್ಮವಾಗಿ ವಿಮರ್ಶಿಸಿ, ತಿಳಿಯುವ ಹಾಗೆ ಹೇಳುವೆನು ಎಂಬುದು. ಇದು ಯಾರಿಗೆ ಸಾಧ್ಯ? ಎಂದರೆ ಕನ್ನಡಕ್ಕೆ ಆ ನಾಡಿನವರೇ ಸಮರ್ಥರು, ಅವರೇ ಯೋಗ್ಯರಾದ ಲಾಕ್ಷಣಿಕರು, ಅವರು ಉದ್ಧಾಮ ಲಕ್ಷಣಾಚಾರ್ಯರಂತೆ ಹೇಳದೆ ಇರಲಾರು.

ಮುಂದುವರೆದು ನಾಗವರ್ಮನು, ಹೀಗೆನ್ನುತ್ತಾನೆ. "ಸಂಸ್ಕೃತಂ ಪ್ರಾಕೃತಂ ಅಪಭ್ರಂಶಂ ಪೈಶಾಚಿಕಂ ಎಂಬ ಮೂರುವರೆ ಭಾಷೆಗಳೊಳ್ ಪಟ್ಟುವ ದ್ರವಿಡಾಂಧ್ರ ಕರ್ಣಾಟಾದಿ... ಭಾಷಾ ಜಾತಿಗಳಕ್ಕುಂ" ಆದರೆ ತಮಿಳು, ತೆಲುಗು, ಕನ್ನಡ ಮುಂತಾದ ದ್ರಾವಿಡ ಭಾಷೆಗಳು ಸಂಸ್ಕೃತ ಪ್ರಾಕೃತಗಳಿಂದ ಹುಟ್ಟಿರುತ್ತವೆಂದು ಈತನು ಹೇಳಿರುವುದು ಸೂಕ್ತವಾದದ್ದೇನು ಅಲ್ಲದಿದ್ದರೂ, ಅವುಗಳಿಂದಲೇ ಜನಿಸಿ ಮುಂದುವರೆದು ಬಂದಿರಬೇಕೆಂದು ಭ್ರಮೆ ಹುಟ್ಟಿಸುವಷ್ಟು ಸಂಸ್ಕೃತ ಪ್ರಾಕೃತ ಶಬ್ದ ಪ್ರಯೋಗಗಳು ಈ ದ್ರಾವಿಡ ಭಾಷೆಗಳಲ್ಲಿ ಹೆಚ್ಚಾಗಿ ಸೇರಿರುತ್ತವೆಂಬುದು ಮಾತ್ರ ಕನ್ನಡದ ವಿಚಾರದಲ್ಲಂತು ಸತ್ಯವೇ ಆಗಿದೆ. ಸಂಸ್ಕೃತ ಮತ್ತು ಪ್ರಾಕೃತ ಭಾಷೆಗಳಿಗೆ

ಅಖಿಲ ಭಾರತದಾದ್ಯಂತ ವ್ಯಾಪಕವಾದ ಅಂದರೆ ರಾಷ್ಟ್ರೀಯತೆ ಇತ್ತು. ಆದರೆ ಉಳಿದ ಭಾಷೆಗಳು ಯಾವುದಾದರು ಒಂದು ಪ್ರಾಂತೀಯತೆಯನ್ನು ಹೊಂದಿ ಬದುಕಿರುವವುಗಳಾಗಿವೆ. ಪ್ರಾಂತೀಯವೆಂಬುದು ಅಖಿಲ ಭಾರತೀಯ ಭಾಷೆಯಿಂದ ಹುಟ್ಟಿ ಬಂದಿರುತ್ತದೆಂಬ ತಿಳುವಳಿಕೆ ಹಿಂದಿನಿಂದಲೂ ಇದೆ. ನಮ್ಮ ನಾಡ ಗೀತೆಯಲ್ಲೂ ರಾಷ್ಟ್ರೀಯ ಪ್ರಜ್ಞೆಯಾಗಿ ಇಂತಹದ್ದೇ ಒಂದು ಹೋಲಿಕೆ ಇದೆ. ಭಾರತ ಮಾತೆಯ ಕೂಸು ಅಥವಾ ಕರು, ಕರ್ನಾಟಕ ಎಂದು.

**ಗದ್ಯ-ಪದ್ಯ :**

ಬರವಣಿಗೆಯ ಭಾಷೆಯನ್ನು ಸಾಮಾನ್ಯವಾಗಿ ಎರಡು ವಿಧವಾಗಿ ನೋಡುವುದು ಇದೆ. ಒಂದು ಪದ್ಯ, ಎರಡನೆಯದು ಗದ್ಯ. ಇವತ್ತು ಬರಹದ ಹತ್ತಾರು ವಿಧಗಳು ಇದ್ದರೂ ಅವನ್ನು ಸಾಮಾನ್ಯವಾಗಿ ಗದ್ಯ, ಪದ್ಯದ ಒಳಗೇ ನೋಡುವುದು ಇದೆ. ಬರಹ ಇವತ್ತಿನ ಯಂತ್ರಗಳ ಅಥವಾ ವಿಜ್ಞಾನದ ಕ್ರಾಂತಿಯಿಂದಾಗಿ ಮುದ್ರಣವೆಂಬುದು ಕಷ್ಟದ ವಿಚಾರವೇನು ಅಲ್ಲ. ಇವತ್ತು ಬರಹಕ್ಕೆ ಕಾಗದ, ಪೆನ್ನು, ಇಂಕು ಯಾವುದೂ ಇಲ್ಲದೆ ನಡೆಯುವ ಒಂದು ಕ್ರಾಂತಿಯೇ ಆಗಿ ಬೆಳೆದು ನಿಂತಿದೆ. ಅದೇನೆ ಇರಲಿ ಪ್ರಾಚೀನ ಅಥವಾ ಕನ್ನಡ ಸಾಹಿತ್ಯ, ಭಾಷೆಯ ಸನ್ನಿವೇಶದಲ್ಲಿ ಪದ್ಯ ಮಾತ್ರ ಇರುವುದನ್ನು ಕಾಣುತ್ತೇವೆ. ಪ್ರಾಚೀನ ಕಾಲದ ಪಂಪ, ರನ್ನ, ಪೊನ್ನ, ಜನ್ನ ನಾಗಚಂದ್ರ ಮುಂತಾದವರನ್ನು ಹಾಗೂ ಶಾಸನಗಳನ್ನೂ ಗಮನಿಸಿದರೆ ಈ ಮಾತು ಸ್ಪಷ್ಟ. ಹಾಗೇನೆ ಪ್ರಾಚೀನ ಕಾಲದಲ್ಲಿ ಕನ್ನಡ ವೈಯಾಕರಣಿಗಳಾದ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕ ಮುಂತಾದವರ ಬರಹಗಳನ್ನು ಕಾಣಬಹುದಾಗಿದೆ. ಶಬ್ದಸ್ಮೃತಿ, ಭಾಷಾಭೂಷಣ, ಶಬ್ದಮಣಿದರ್ಪಣ, ಶಬ್ದಾನುಶಾಸನ ಮುಂತಾದ ಗ್ರಂಥಗಳಲ್ಲಿ ಕನ್ನಡ ಭಾಷೆಯನ್ನು ಕುರಿತ ಅರಿಮೆಯ ಕಾರ್ಯವನ್ನು ನಡೆಸಿದ್ದಾರೆ. ಆದರೆ ಇವರೆಲ್ಲರು ಪದ್ಯದ ಭಾಷೆಯನ್ನು ಕುರಿತು ನಿಯಮಗಳನ್ನು, ವ್ಯಾಕರಣಾಂಶಗಳ ಅಂಗಾಂಗಗಳನ್ನು ರೂಪಿಸಿರುವುದು ಕಾಣಬರುತ್ತದೆ. ಗದ್ಯದ ಕುರಿತು ವಿವೇಚನೆ ನಡೆಸಿರುವುದು ಕಾಣಬರುವುದಿಲ್ಲ. ಯಾಕೆಂದರೆ ಪ್ರಾಚೀನ ಕಾಲದಲ್ಲಿ ಭಾಷಾ ವೈವಿಧ್ಯತೆ ಎಂದರೆ ಅದು ಪದ್ಯದ ಬಗೆಯೇ ಆಗಿತ್ತು. ಶಾಸ್ತ್ರ, ಕಾವ್ಯ, ಪಾಕಶಾಸ್ತ್ರ, ಛಂದಶಾಸ್ತ್ರ, ಶಾಸನ ವ್ಯಾಕರಣ ಮುಂತಾದ ಯಾವುದೇ ಬಗೆಯ ಬರಹವಾಗಲಿ ಅದು ಪದ್ಯ ರೂಪದಲ್ಲಿ ಹೇಳುವುದಾಗಿತ್ತು. ಕಾರಣವೇನೆಂದರೆ ಪ್ರಾಚೀನ ಕಾಲದಲ್ಲಿ ಈಗಿನಂತೆ ಕಾಗದ, ಮುದ್ರಣ, ತಂತ್ರಜ್ಞಾನ ಮುಂತಾದವು ಅಕ್ಷರಲೋಕವನ್ನು ಪ್ರವೇಶಿಸದೇ ಇರುವುದು. ಯಾವುದೇ ವಿಷಯವಾಗಿರಲಿ ಅದು ಬಾಯಿಯಲ್ಲಿ ಉಳಿಯಬೇಕಿತ್ತು, ನೆನಪಿಗೆ ನಿಲ್ಲುವ ಛಂದಸ್ಸು ಲಯಗಾರಿಕೆಯ ಪದ್ಯದ ಬಗೆಯಿಂದ ಸಾಧ್ಯ. ಹಾಗಾಗಿ ಅಕ್ಷರ ಬಲ್ಲ

ಕೆಲವರೇ ಆದರೂ ಬಾಯಿ ಪಾಠಕ್ಕೆ ಹೆಚ್ಚಿನ ಪ್ರಾಶಸ್ತ್ಯ ಇದ್ದದ್ದು ಕೂಡ ಪದ್ಯದ ಬಗೆಯೇ ನಿರೀಕ್ಷೆಯಾಗಿತ್ತು.

ನಿಜಕ್ಕೂ ಗದ್ಯದಲ್ಲಿ ಬರಹ ಇರಲಿಲ್ಲವೇ? ಎಂದು ಪ್ರಶ್ನಿಸಿಕೊಂಡಾಗ ನಮ್ಮೆದುರು ಕೆಲವಾದರು ಗದ್ಯ ಕೃತಿಗಳಿರುವುದು ಸ್ಪಷ್ಟ. ವಡ್ಡಾರಾಧನೆ, ಚಾವುಂಡರಾಯ ಪುರಾಣ ಗದ್ಯ ಕೃತಿಗಳಿವೆ. ಈ ಬಗೆಯ ಗದ್ಯ ಬರಹವನ್ನು ನಮ್ಮ ವೈಯಾಕರಣಿಗಳು ಗಮನಿಸಿದಂತಿಲ್ಲ. ಅಥವಾ ಇವೂ ಸಹ ಕಾವ್ಯದ ನೆಲೆಯ ಕಡೆಯೇ ಹೆಚ್ಚು ವಾಲುತ್ತಿರುವುದೂ ಕಾರಣ ಇರಬಹುದು. ಚಂಪೂಕಾವ್ಯ ಪ್ರಕಾರದಲ್ಲೂ ಗದ್ಯವಿದೆ. ಆದರೆ ಈ ಎಲ್ಲಾ ಗದ್ಯಗಳು ಕಾವ್ಯದ ಶಕ್ತಿಯನ್ನು ಹೊಂದಿದ್ದವು. ಅಲ್ಲದೆ ಬರಹವೆಂದರೆ ಕಾವ್ಯವೇ ಆಗಿತ್ತು. ಇಂತೆಲ್ಲ ಕಾರಣಗಳಿಂದಾಗಿ ವ್ಯಾಕರಣದ ಆಯ್ಕೆಯ ಪ್ರಶ್ನೆಯೇ ಉದ್ಭವಿಸಿರಲಿಲ್ಲ. ವೈಯಾಕರಣರು ಈ ಪದ್ಯ ಕಾವ್ಯ ಬರಹವನ್ನು ಲಕ್ಷ್ಯವಾಗಿಟ್ಟುಕೊಂಡು ತಮ್ಮ ತಮ್ಮ ಭಾಷೆಗೆ ವ್ಯಾಕರಣವನ್ನು ರಚಿಸಿದರು. ಆದ್ದರಿಂದ ಗದ್ಯದ ವಿವೇಚನೆ ಇರುವುದಿಲ್ಲ. ಕನ್ನಡದ ಅತ್ಯಂತ ಪ್ರಸಿದ್ಧ ವ್ಯಾಕರಣವಾದ ಕೇಶಿರಾಜನ ಶಬ್ದಮಣಿದರ್ಪಣವೂ ಈ ಮೇಲಿನ ಎಲ್ಲಾ ಅಂಶಗಳಿಂದ ಹೊರತಾಗಿಯೇನು ಇಲ್ಲ.

ಗಜಗನ ಗುಣನಂದಿಯ ಮನ!
ಸಿಜನಸಗನ ಚಂದ್ರಭಟ್ಟ ಗುಣವರ್ಮ ಶ್ರೀ!
ವಿಜಯರ ಹೊನ್ನನ ಹಂಪನ!
ಸುಜನೋತ್ತಂಸನ ಸುಮಾರ್ಗಮಿದರೊಳೆ ಲಕ್ಷ್ಯಂ !!೫!!

ಗಜಗ ಗುಣನಂದಿ ಮನಸಿಜ ಅಸಗ ಚಂದ್ರಭಟ್ಟ ಗುಣವರ್ಮ ಶ್ರೀವಿಜಯ ಹೊನ್ನ ಹಂಪ ಸುಜನೋತ್ತಂಸ ಮುಂತಾದ ಕವೀಶ್ವರರ ಗ್ರಂಥಗಳ ಪ್ರಯೋಗಗಳನ್ನು ಈ ಶಬ್ದಮಣಿದರ್ಪಣದಲ್ಲಿ ಲಕ್ಷ್ಯವಾಗಿಟ್ಟುಕೊಂಡಿದ್ದೇನೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಅಂದರೆ ಪದ್ಯ ಭಾಷೆಯನ್ನು ಕುರಿತು ಈ ವ್ಯಾಕರಣವನ್ನು ರಚಿಸಿದ್ದಾನೆಂಬುದು ವ್ಯಕ್ತವಾಗುತ್ತದೆ.

ಗದ್ಯ ಮತ್ತು ಪದ್ಯದ ಸನ್ನಿವೇಶದಲ್ಲಿ ವ್ಯಾಕರಣಾಂಶಗಳು ಭಿನ್ನವಾಗಿರುತ್ತವೆಯೇ? ಸಂಧಿ ಸಮಾಸ ಮುಂತಾದ ಅಂಶಗಳ ಸನ್ನಿವೇಶದಲ್ಲಿ ವ್ಯಾತ್ಯಾಸವೇನು ಕಂಡು ಬಾರದಿದ್ದರೂ ವಾಕ್ಯರಚನೆ ಮತ್ತು ವಿಭಕ್ತಿ ಪ್ರತ್ಯಯಗಳ ವಿಚಾರದಲ್ಲಿ ಖಂಡಿತವಾಗಿಯೂ ವ್ಯತ್ಯಾಸ ಇದೆ. ಅತ್ಯಂತ ಸರಳವಾಗಿ ಕೇಳಿಕೊಳ್ಳುವುದಾರೆ, ಬರಹಕ್ಕೂ ಆಡು ಭಾಷೆಗೂ ಸಾಕಷ್ಟು ವ್ಯತ್ಯಾಸವಿರುವುದು

ನಿಜತಾನೆ? ಹಾಗೆಯೇ ಆಯಾ ಪ್ರದೇಶಗಳ ಭಾಷೆಯನ್ನು ಕಣ್ಮುಂದೆ ತೆಗೆದುಕೊಂಡಾಗ ಈ ಮಾತು ಇನ್ನೂ ಸ್ಪಷ್ಟವಾದೀತು. ಧಾರವಾಡ ಕನ್ನಡ, ಮಂಗಳೂರು ಕನ್ನಡ, ಮೈಸೂರು ಕನ್ನಡ, ಕಲ್ಬುರ್ಗಿ ಕನ್ನಡ ಇತ್ಯಾದಿ. ಈ ಬಗೆಯ ಭಾಷಾ ಭಿನ್ನತೆಗಳ ನೆಲೆಯಿಂದ ವಿವೇಚಿಸಿದ್ದಾಗಿ ಹಳಗನ್ನಡದಿಂದ ಚಲಿಸಿ ಬಂದ ನಮ್ಮ ಕನ್ನಡ ವ್ಯಾಕರಣವು ರಚಿತ ಕೃತಿಗಳು ತನ್ನ ವ್ಯಾಪ್ತಿಗೆ ತೆಗೆದುಕೊಂಡಿಲ್ಲ.

## ಅಧ್ಯಾಯ – ೫.೧

## ಕನ್ನಡ ವ್ಯಾಕರಣ ಮಾದರಿಯ ಅಧ್ಯಯನ

ವ್ಯಾಕರಣ ಎಂದರೇನು? ಎಂಬ ಪ್ರಶ್ನೆಗೆ ಸರ್ವ ಸಮ್ಮತವಾದ ಒಂದು ಉತ್ತರ ಇಲ್ಲ. ಹಲವು ಬಗೆಗಳಲ್ಲಿ ಅರ್ಥೈಸಿಕೊಳ್ಳುವ ಪ್ರಯತ್ನಗಳು ಸಾಕಷ್ಟು ನಡೆದಿವೆ. "ಭಾಷಾ ರಚನೆಯ ಚೌಕಟ್ಟು, ಭಾಷೆಯ ಅಸ್ಥಿಪಂಜರ ಎಂಬ ಪರೋಕ್ಷವಾಗಿ ವ್ಯಾಕರಣವನ್ನು ಪರಿಚಯಿಸುವುದು ಸಾಮಾನ್ಯ ಅಭ್ಯಾಸ[೨]" ಶಬ್ದಗಳು ಭಾಷೆಯಲ್ಲಿ ನಾನಾ ಬಗೆಯಲ್ಲಿ ಬಳಕೆಯಲ್ಲಿರುತ್ತವೆ. ಇಂತಹ ಶಬ್ದಗಳ ಪ್ರಯೋಗವನ್ನು ಅಧ್ಯಯನ ಮಾಡುವುದನ್ನು ಒಂದು ಅರ್ಥದಲ್ಲಿ ವ್ಯಾಕರಣ ಎನ್ನುವರು. ಗ್ರಾಟ್ಟನ್ ಮತ್ತು ಗುರ್ರೆ ಅವರ ಪ್ರಕಾರ : "ಒಂದು ಭಾಷೆಯ ವ್ಯಾಕರಣವೆಂದರೆ ಪಾಂಡಿತ್ಯ ಪ್ರವೀಣರು ಆಡುಗರ ಮೇಲೆ ಹೇರುವಂಥ ನಿಯಮಗಳ ಯಾದಿಯಲ್ಲ. ಅದು ಭಾಷೆಯ ಆಡು ನುಡಿ ಮತ್ತು ಬರಹವನ್ನು ಪ್ರತಿನಿಧಿಸುವ ವೈಜ್ಞಾನಿಕ ದಾಖಲೆ." ಸಂರಚನಾವಾದಿಗಳ ಪ್ರಕಾರ 'ವ್ಯಾಕರಣ ಭಾಷೆಯ ರಚನಾತ್ಮಕ ಅಂಶಗಳ ಪರಸ್ಪರ ಸಂಬಂಧವನ್ನು, ಪರಿಮಿತಿಯನ್ನು ತಿಳಿಸುವ ವರ್ಗೀಕೃತ ಪರಿಶೋಧಕ ಪಟ್ಟಿ; ವಾಕ್ಯಗಳಲ್ಲಿರುವ ಘಟಕಾಂಶಗಳ ನಿಕಟ ಮತ್ತು ಅಂತಿಮ ಸಂಘಟನೆಯ ಶೋಧ; ಒಟ್ಟಾರೆ, ಧ್ವನಿಮಾಗಳ, ಆಕೃತಿಮಾಗಳ, ಪದಗಳ, ಪದವರ್ಗಗಗಳ, ಪದಪುಂಜಗಳ ಹಾಗೂ ವಾಕ್ಯಾಂಶಗಳ ಘಟಕಗಳ ಸಮಾಮ್ನಾಯ' ಇದನ್ನೇ ನೆಲ್ಸನ್ ಫ್ರಾನ್ಸಿಸ್ ( ಸ್ಟ್ರಕ್ಚರ್ ಆಫ್ ಅಮೇರಿಕನ್ ಇಂಗ್ಲೀಶ್ ) ಅವರು ಇನ್ನೂ ಸರಳವಾಗಿ ಹೀಗೆ ಅಭಿಪ್ರಾಯಿಸಿದ್ದಾರೆ. 'ಭಾಷೆಯ ರಚನೆಯ ವಿವಿಧ ಸ್ತರಗಳನ್ನು ಪ್ರತಿನಿಧಿಸುವಂಥ ಪದಪುಂಜಗಳಾಗಿ, ವಾಕ್ಯಗಳಾಗಿ ಪದಗಳು ಜೋಡಣೆಗೊಳ್ಳುವ ವಿವಿಧ ಬಗೆಗಳನ್ನು ಅಧ್ಯಯನ

ಮಾಡುವುದೇ ವ್ಯಾಕರಣ[೩]." ಹೀಗೆ ಭಿನ್ನವಾಗಿ ನೋಡಲು ಪ್ರಯತ್ನಿಸಿದ್ದು ಅಥವಾ ಭಿನ್ನಮಾರ್ಗದ ಮೂಲಕ ನಡೆಯುತ್ತಿರುವುದು ಅದೇ ಮನೆಗೆ ಆಗಿದೆ. ಅಂದರೆ ಭಾಷೆಯ ನಾಡಿ ಮಿಡಿತವನ್ನು ತಿಳಿಸುವ ಅಂಶಗಳ, ನಿಯಮಗಳ ನೆಲೆಯೇ ಆಗಿರುವುದಾಗಿದೆ.

ಇಂಥ ವ್ಯಾಕರಣಾಧ್ಯಯನದ ಪ್ರಯತ್ನ ಕನ್ನಡದ ಸನ್ನಿವೇಶದಲ್ಲಿ ಇವತ್ತು ನಿನ್ನೆಯ ಪ್ರಯತ್ನವೇನು ಅಲ್ಲ. ಸುಮಾರು ಒಂದುವರೆ ಸಾವಿರ ವರ್ಷಗಳಷ್ಟು ಹಿಂದಿನಿಂದಲೂ ಕಾಣಬಹುದಾಗಿದೆ. ಈವರೆಗೆ ಕನ್ನಡ ವ್ಯಾಕರಣವನ್ನು ಕುರಿತು ಕನ್ನಡವೂ ಸೇರಿದಂತೆ ವಿವಿಧ ಭಾಷೆಗಳಲ್ಲಿ ನೂರಕ್ಕೂ ಹೆಚ್ಚು ಕೃತಿಗಳು ರಚಿಸಲ್ಪಟ್ಟಿವೆ. ಕನ್ನಡ ಇಂಗ್ಲೀಶ್ ಸಂಸ್ಕೃತ ಮುಂತಾದ ಭಾಷೆಗಳಲ್ಲಿ ಕನ್ನಡ ವ್ಯಾಕರಣವನ್ನು ಕುರಿತು ಕೃತಿಗಳು ಪ್ರಕಟವಾಗಿವೆ.

ಕನ್ನಡ ಭಾಷೆಯು ಕಾಲದಿಂದ ಕಾಲಕ್ಕೆ ಸ್ಪಂದಿಸುತ್ತ ಬದಲಾಗುತ್ತ ಬೆಳೆಯುತ್ತ ಬಂದಿದೆ. ಕಾಲ ಕಾಲಕ್ಕೆ ಉಂಟಾದ ಪರಿವರ್ತನೆಗಳನ್ನು ಗಮನಿಸಿ ಅಧ್ಯಯನದ ಅನುಕೂಲಕ್ಕಾಗಿ ಈಗಾಗಲೆ ಹಲವು ವಿದ್ವಾಂಸರು ಕೆಲವು ಒಪ್ಪಿತ ವಿಭಜನೆಗಳನ್ನು ರೂಪಿಸಿಕೊಂಡಿದ್ದಾರೆ.

೧. **ಹೊಸಗನ್ನಡ** : ಇವತ್ತು ನಾವು ಮಾತನಾಡುತ್ತಿರುವ ಭಾಷೆ ಹೊಸಗನ್ನಡವೆಂತಲೂ, ಇದಕ್ಕೆ ನಿದರ್ಶನವಾಗಿ ಕುವೆಂಪು, ಬೇಂದ್ರೆ, ಮಾಸ್ತಿ ಸೇರಿದಂತೆ ಈಗ ಬರೆಯುತ್ತಿರುವ ಮತ್ತು ಬಳಸುತ್ತಿರುವ ಕನ್ನಡ ಭಾಷೆ.

೧. ಸಂಸ್ಕೃತ ವರ್ಣಮಾಲೆಯೇ ಕನ್ನಡಕ್ಕೂ ಬಳಕೆಯಾಗುತ್ತದೆ.

೨. ಕ್ಷಳ ಮತ್ತು ರಳ ಗಳು ಕಣ್ಮರೆಯಾಗುತ್ತಿವೆ.

೩. ಸಾಮಾಜಿಕ ಮತ್ತು ಭೌಗೋಳಿಕ ಉಪಭಾಷೆಗಳು ಸ್ಪಷ್ಟವಾಗುತ್ತವೆ.

೪. ಸಂಸ್ಕೃತ ಮಾತ್ರವಲ್ಲದೆ ಇತರ ಭಾಷೆಗಳಾದ ಪೋರ್ಚ್‌ಗೀಸ್, ಇಂಗ್ಲೀಶ್, ಅರೇಬಿಕ್, ಪರ್ಷಿಯನ್ ಮುಂತಾದ ಭಾಷೆಗಳಿಂದಲೂ ಬಂದ ಎರವಲು ಪದಗಳು ಬಳಕೆಯಲ್ಲಿವೆ.

೫. ಪದ ಸಂಯೋಜನಾತ್ಮಕವಾಗಿದ್ದ ನಿಷೇಧ ಕ್ರಿಯಾಪದರಚನೆ. ವಾಕ್ಯ ಸಂಯೋಜನಾತ್ಮಕವಾಗುತ್ತದೆ. ಕೊಡೆನು>ನಾನು ಕೊಡಲಿಲ್ಲ, ಕೊಡುವುದಿಲ್ಲ ಇತ್ಯಾದಿ. ಪೂರ್ಣ ಕ್ರಿಯಾಪದಕ್ಕೆ ಇಲ್ಲ ಎಂಬ ನಿಷೇಧ ರೂಪ ಸೇರಿ

ಭೂತಕಾಲ ನಿಷೇಧ ರೂಪದ ರಚನೆಯಾಗುವ ಬದಲು, ಕ್ರಿಯಾ ಧಾತುವಿಗೆ ಸತಿಸಪ್ತಮಿಯ ರೂಪ ಮತ್ತು 'ಇಲ್ಲ' ಸೇರುವುದರಿಂದ ಆಗುತ್ತದೆ. ಉದಾ: ಕೊಟ್ಟೆನಿಲ್ಲ>ಕೊಡಲಿಲ್ಲ, ಬಂದೆನಿಲ್ಲ>ಬರಲಿಲ್ಲ ಇತ್ಯಾದಿ.

೬. ಸಂಖ್ಯಾ ಸರ್ವನಾಮ ರೂಪದಲ್ಲಿ ಮೂರರ ನಂತರದ ಸಂಖ್ಯೆಯ ಉದಾ: ನಾಲ್ವರ್, ಐವರ್, ಎಂಬಲ್ಲಿ 'ಮಂದಿ' ಇಲ್ಲವೆ 'ಜನ' ಎಂಬ ಪದ ಪ್ರಯೋಗವಾಗುತ್ತದೆ. ಮೂರು ಜನ ಗಂಡಸರು, ನಾಲ್ಕು ಮಂದಿ ಗಂಡಸರು ಇತ್ಯಾದಿ.

೨. **ನಡುಗನ್ನಡ** : ಇದನ್ನು ಹೊಸಗನ್ನಡದ ಪೂರ್ವ ಅಂದರೆ ಹತ್ತೊಂಬತ್ತನೆಯ ಶತಮಾನದ ಹಿಂದಿನದು. ಮತ್ತು ಹನ್ನೊಂದನೆಯ ಶತಮಾನದ ಅನಂತರದ ಭಾಷೆಯನ್ನು ನಡುಗನ್ನಡವೆಂದು ಕಾಣಲಾಗುತ್ತಿದೆ. ಕುಮಾರವ್ಯಾಸ, ರಾಘವಾಂಕ, ಹರಿಹರ ಮುಂತಾದವರ ಬಳಕೆಯ ಭಾಷೆಯನ್ನು ನಿದರ್ಶನವಾಗಿ ಕಾಣಲಾಗುತ್ತದೆ.

೧. ಹಳಗನ್ನಡ ಸನ್ನಿವೇಶದಲ್ಲಿ ಹೇಳಿದ ಅಂಶಗಳು ಹೆಚ್ಚು ದೃಢವಾಗಿ ಕಂಡುಬರುತ್ತವೆ.

೨. ದೀರ್ಘ ಸಮಾಸ ಪದಗಳು ಕಡಿಮೆಯಾಗುತ್ತವೆ.

೩. ಸಂಸ್ಕೃತ ಪದಗಳ ಬದಲು ಅಪಭ್ರಂಶ ಪದಗಳು ಹೆಚ್ಚು ಬಳಕೆಯಾಗುತ್ತವೆ.

೪. ವ್ಯಂಜನಾಂತ್ಯವಾಗುತ್ತಿದ್ದ ಪದಗಳು ಸ್ವರಾಂತ್ಯವಾಗುತ್ತವೆ. ಉದಾ: ಕಣ್>ಕಣ್ಣು, ತಿನ್>ತಿನ್ನು, ಬಾನ್>ಬಾನು, ಕಾಯ್>ಕಾಯಿ, ಊರ್>ಊರು, ಕಾಲ್>ಕಾಲು, ಆಳ್>ಆಳು.

೫. ಸಂಯುಕ್ತಾಕ್ಷರಗಳು ಹೆಚ್ಚು ಹೆಚ್ಚಾಗಿ ವಿರಳವಾಗುತ್ತವೆ. ಉದಾ: ಅರ್ಗ್ಗೆ>ಯಾರಿಗೆ.

೬. ಅಂ>ಅ ಎಂದು ನಾಮಪದದಲ್ಲೂ ಕ್ರಿಯಾಪದದಲ್ಲಿಯೂ ಆಗುತ್ತದೆ. ಉದಾ: ರಾಮಂ>ರಾಮ, ಬಂದಂ>ಬಂದ.

೩. **ಹಳಗನ್ನಡ** : ಪಂಪ ಮತ್ತು ಪಂಪನ ಅನಂತರದ ಯುಗವನ್ನು ಅಂದರೆ ವಚನಕಾರರು ಬರುವವರೆಗಿನ ಕಾಲವನ್ನು ಹಳೆಗನ್ನಡ ಯುಗವೆಂದು ಕರೆಯಲಾಗುತ್ತದೆ.

೧. ಆಖ್ಯಾತ ಪ್ರತ್ಯಯಗಳ ದೀರ್ಘ ಸ್ವರ ಹ್ರಸ್ವವಾಗಿದೆ. ಉದಾ: ವಂದಾನ್>ವಂದನ್>ಬಂದನ್;ಮುಡಿಪ್ಪಿದಾರ್>ಮುಡಿಪ್ಪಿದರ್ ಇತ್ಯಾದಿ.

೨. ಆಖ್ಯಾತ ಪ್ರತ್ಯಯದ ಓನ್, ಒನ್, ಎಂಬಿತ್ಯಾದಿ ರೂಪಗಳಲ್ಲಿ ಒ>ಅ ಆಗಿದೆ. ಉದಾ: ಅಳಿದೋನ್>ಅಳಿದನ್ ಇತ್ಯಾದಿ.

೩. ಹ್ರಸ್ವ ಸ್ವರಗಳ ನಡುವಣ – ಪ್ಪ>ಹ್ ಎಂದು ಪರಿವರ್ತನೆಯಾಗುವುದು. ಉದಾ: ಅಪ್ಪನ್>ಅಹನ್

೪. ಕ್ಷಳ, ಕುಳ, ಳಗಳ ನಡುವಣ ಅಂತರ ಇಲ್ಲವಾಗುತ್ತದೆ. ಉದಾ: ಇಳಿ(ಕ್ಷಳ)>ಇಳಿ.

೫. ದೀರ್ಘ ಸ್ವರಾನಂತರ, ಇಲ್ಲವೇ ಎರಡು ಹ್ರಸ್ವ ವರ್ಣಗಳ ನಂತರ ಅನುನಾಸಿಕ ಲೋಪವಾಗುತ್ತದೆ. ಉದಾ: ಊರಿಂಗೆ>ಊರಿಗೆ; ಪೇರಿಂಗೆ>ಪೇರಿಗೆ.

೬. ಪದಾದಿಯ ವ>ಬ ಆಗುತ್ತದೆ. ಉದಾ: ವರ್>ಬರ್

೭. ಸ್ವರಗಳ ಮಧ್ಯದ ಮ>ವ ಆಗುತ್ತದೆ. ಉದಾ: ನಾಮ್+ಉ>–ನಾವು.

೮. ದ್ವಿತ್ವವಾಗಿ ಬರೆಯುತ್ತಿದ್ದ ಸಂಯುಕ್ತಾಕ್ಷರದಲ್ಲಿ ಹ್ರಸ್ವಬರುತ್ತದೆ. ಉದಾ: ಊರ್ಗೆ>ಊರ್ಗೆ.

೯. ಆತನ್, ಆಕೆ ಎಂಬ ಗೌರವಾರ್ಥಕ ಏಕವಚನದ ರೂಪ ತೋರಿಬರುತ್ತದೆ.

೪. **ಪೂರ್ವದ ಹಳಗನ್ನಡ** : ಶಾಸನಗಳ ಕಾಲವಾಗಿದೆ. ಈ ಅವಧಿಯಲ್ಲಿ ಯಾವುದೇ

ಗ್ರಂಥಗಳು ರಚನೆಯಾದದ್ದು ಲಭ್ಯವಿಲ್ಲ. ಆದರೆ ಶಾಸನಗಳ ಮೂಲಕವೇ ಆ ಕಾಲದ ಭಾಷೆಯ ಸ್ವರೂಪವನ್ನು ತಿಳಿಯಲಾಗುತ್ತದೆ.

೧. ಆಖ್ಯಾತ ಪ್ರತ್ಯಯಗಳ ಸ್ವರ ದೀರ್ಘವಾಗಿದೆ: ಆನ್, ಆರ್, ಓನ್, ಓಳ್, ಓರ್, ಉದಾ: ಏರಿದಾರ್, ಮುಡಿಪ್ಪಿದಾರ್, ಅರಿದೋನ್ ಇತ್ಯಾದಿ.

೨. ದ್ವಿತೀಯ ವಿಭಕ್ತಿ ಪ್ರತ್ಯಯ ಸ್ವರ ದೀರ್ಘವಾಗಿದೆ: ಅನ್ ಉದಾ: ಸ್ವರ್ಗಾಗ್ರಮಾನ್

೩. ಷಷ್ಠಿಯ ಪ್ರತ್ಯಯ ದೀರ್ಘವಾಗಿದೆ: ಆ ಉದಾ : ಏಳನೆಯಾ ನರಕದಾ ಪುಳು ಅಕ್ಕುಂ

೪. ಪೂರ್ಣ ಕ್ರಿಯಾ ರೂಪದಲ್ಲಿ ಕಾಲ, ಲಿಂಗ, ವಚನ, ವಿವಕ್ಷೆಯಿಲ್ಲದೆ ರೂಪಗಳು ಹೆಚ್ಚಿವೆ – ಕುಂ, ಇಲ್ಲವೆ – ಗುಂ ಎಂಬ ಪ್ರತ್ಯಯಗಳು ಕ್ರಿಯಾ ಧಾತುವಿನೊಡನೆ ಸೇರಿಬರುತ್ತವೆ. ಉದಾ : ಇರ್ಕ್ಕುಂ, ಅಕ್ಕುಂ, ಬಗೆಗಂ ಇತ್ಯಾದಿ

೫. ಉತ್ತಮ ಪುರುಷ ಬಹುವಚನದಲ್ಲಿ ಅಭಿವ್ಯಾಪಕ ಮತ್ತು ವ್ಯಾವರ್ತಕ ರೂಪಗಳು ಕಂಡುಬರುತ್ತವೆ.

ಉದಾ: ಅಂ, ಎಮ್ಮ, ಎಮಗೆ...(ವ್ಯಾವರ್ತಕ)

ನಾಂ, ನಮ್ಮ, ನಮಗೆ... (ಅಭಿವ್ಯಾಪಕ) ಇತ್ಯಾದಿ.

ಈ ಭೂಮಿಯ ಮೇಲೆ ಬದುಕುವ ಪ್ರಾಣಿ ಸಂಕುಲದಲ್ಲೇ ಮನುಷ್ಯ ಭಿನ್ನನೆನಿಸಿರುವುದು, ಬುದ್ಧಿಜೀವಿಯಾಗಿರುವುದು ಆತ ಕಂಡುಕೊಂಡ ಭಾಷೆಯ ನಿಮಿತ್ತವೇ ಎಂಬುದು ಈಗಾಗಲೆ ಗೊತ್ತಿರುವ ಸಂಗತಿಯೇ. ನಮ್ಮ ಅಭಿಪ್ರಾಯಗಳನ್ನು ಮಾತಿನ ಮೂಲಕ ವ್ಯಕ್ತಪಡಿಸುತ್ತೇವೆ. ಮಾತಿಗೆ ಮೂಲಾಧಾರ ಭಾಷೆಯೇ ಆಗಿದೆ. ಪದಗಳು ಭಾಷೆಯ ನೆಲೆಯಾಗಿದೆ. ಪದಗಳನ್ನು ಉತ್ಪತ್ತಿಮಾಡುವುದು ಉಸಿರನ್ನು ಶ್ವಾಸಕೋಶಗಳಿಂದ ಹೊರಬಿಡುವಾಗ ನಾವು ಗಂಟಲು ನಾಲಿಗೆ ಹಲ್ಲು ಮೂಗು ತುಟಿ ಮುಂತಾದ ಅಂಗಗಳನ್ನು ಬಳಸಿ ಧ್ವನಿಗಳನ್ನು ಉಂಟುಮಾಡುತ್ತೇವೆ. ಹೀಗೆ ಉತ್ಪತ್ತಿಯಾಗುವ ಧ್ವನಿಗಳನ್ನು ಸ್ಥೂಲವಾಗಿ ಎರಡು ಬಗೆಗಳಾಗಿ ವರ್ಗೀಕರಿಸುತ್ತೇವೆ.

೧. ಸ್ವರಗಳು ೨. ವ್ಯಂಜನಗಳು

ಆದರೆ ಧ್ವನ್ಯಾತ್ಮಕ ಮತ್ತು ಆಕೃತಿಮಾತ್ಮಕ ಸಂಯೋಜನೆಗಳಿಂದ ಪದಗಳು ರೂಪಗೊಳ್ಳುತ್ತವೆ. ಈ ಪದಗಳು ವರ್ತಿಸುವ ನೆಲೆಗಳನ್ನು ಅರ್ಥಮಾಡಿಕೊಳ್ಳುವುದು ವ್ಯಾಕರಣ ಅಥವಾ ಶಬ್ದಶಾಸ್ತ್ರ. ಹೀಗೆ ವ್ಯಾಕರಣದ ಹುಟ್ಟಿಗೆ ಮಾರ್ಗ ಸೂಚಿಯನ್ನು ಗ್ರಹಿಸಬಹುದಾಗಿದೆ.

ಆಧುನಿಕ ಭಾಷಾವಿಜ್ಞಾನಿಗಳು ವ್ಯಾಕರಣವನ್ನು ನಾನಾ ವಿಂಗಡಣೆಯಾಗಿ ಸೂತ್ರೀಕರಿಸುತ್ತಾರೆ. ನಡುಗನ್ನಡ, ಹಳಗನ್ನಡ ಅಥವಾ ಇನ್ನೂ ಹಿಂದೆ ವ್ಯಾಕರಣದ ಹಲವು ಅಧ್ಯಯನದ ಅನ್ಯಜ್ಞಾನದ ಮಾರ್ಗ ಅಥವಾ ಪರಿಕರಗಳು, ತಂತ್ರಜ್ಞಾನ ಭಾಷೆಯ ಮಾದರಿಗಳು ಮುಂತಾದವುಗಳ ಮಿತಿಯಿಂದಾಗಿ ನಡೆದ ದಾರಿಯಲ್ಲೇ ನಡೆಯುವ ವಿಧೇಯತೆ ಕಾಣಬಹುದಾಗಿದೆ. ಆ ವಿಧೇಯತೆ ಎನ್ನುವುದು ನಡೆಯುವವನನ್ನು ಮಾತ್ರವಲ್ಲ ಭಾಷೆಯನ್ನೂ ನಿಯಂತ್ರಿಸುತ್ತಿತ್ತು. ಆದರೆ

ಕಾಲಾಂತರದಲ್ಲಿ ಭಾಷೆಯನ್ನು ಮಾಧ್ಯಮವಾಗಿಸಿಕೊಂಡಿರುವ ಬರಹ ಹಲವು ಹತ್ತು ಮಾದರಿಗಳು ಪ್ರಯೋಗಗಳು ಹಾಗೂ ಅಧ್ಯಯನಕ್ಕೆ ಬೇಕಾದ ಸಲಕರಣೆಗಳು ತಂತ್ರಜ್ಞಾನ ಇವತ್ತು ಮುಂದುವರೆದಿದೆ. ಆದ್ದರಿಂದ ಭಾಷಾಧ್ಯಯನ ಕ್ಷೇತ್ರವು ಇವತ್ತು ಹತ್ತು ಹಲವು ಬಾಗಿಲುಗಳನ್ನು ತೆಗೆದು ಹೊಸ ಗಾಳಿ ಬೆಳಕಿನ ದರ್ಶನವನ್ನು ಪಡೆಯಲು ಸಾಧ್ಯವಾಗಿದೆ. ಯಾವುದೇ ಭಾಷೆಯಾಗಲಿ ಕೆಲವು ನಿಯಮಗಳಿಗೆ ಒಳಪಡುತ್ತದೆ. ಇಂತಹ ನಿಯಮಗಳು ಎಲ್ಲಾ ಭಾಷೆಗಳಲ್ಲಿ ಕಾರ್ಯಶೀಲವಾಗಿರುತ್ತವೆ. ಯಾವುದೇ ಭಾಷೆಯನ್ನಾಡುವ ಜನರಿಗೆ ನಿಯಮಗಳ ಬಗ್ಗೆ ಅರಿವಿಲ್ಲದಿದ್ದರೂ ಅವರು ವ್ಯಾಕರಣ ಬದ್ದವಾಗಿಯೇ ಮಾತನಾಡುತ್ತಾರೆ. ಇದಕ್ಕೆ ನಿದರ್ಶನಾತ್ಮಕವಾಗಿ ನೋಡುವುದಾದರೆ ಶಿಕ್ಷಣ ಅಥವಾ ಅಕ್ಷರವೆನ್ನುವುದು ಕನ್ನಡಿಗರ ಸಾರ್ವತ್ರಿಕ ಕಲಿಕೆಯಾದದ್ದು ಇಪ್ಪತ್ತನೆಯ ಶತಮಾನದಲ್ಲಿ. ಇದಕ್ಕೂ ಮೊದಲು ಈ ನಾಡಿನ ಅಸಂಖ್ಯಾತ ಕನ್ನಡಿಗರು ಕನ್ನಡವನ್ನು ಮಾತನಾಡುತ್ತಿದ್ದರು. ಹಾಗೆಯೇ ಇವತ್ತೂ ಅಸಂಖ್ಯ ಜನ ಕನ್ನಡಿಗರು ಅಕ್ಷರದಿಂದ ದೂರವೇ ಇದ್ದಾರೆ. ಇವರೆಲ್ಲ ಬಳಸುವ ಭಾಷೆ ವ್ಯಾಕರಣಾತ್ಮಕವಾಗಿಯೇ ಇದೆ.

ಈ ವ್ಯಾಕರಣ ಬದ್ದತೆ ಉಂಟಾಗುವುದು ಅನುಕರಣದಿಂದ. ಒಂದು ಭಾಷೆಯನ್ನಾಡುವ ಜನರಲ್ಲಿ ಸಂವಹನವನ್ನುಂಟುಮಾಡಬಲ್ಲ ನಿಯಮಗಳ ಒಟ್ಟಂದವನ್ನೇ ವ್ಯಾಕರಣ ಎನ್ನುವರು. ವಿದ್ವಾಂಸರ ಪ್ರಕಾರ ಅಥವಾ ಇದುವರೆಗೆ ಬಂದ ವ್ಯಾಕರಣದ ಸ್ವರೂಪವನ್ನಾಧರಿಸಿ ಕನ್ನಡ ವ್ಯಾಕರಣ ಪರಂಪರೆಯನ್ನು ಮೂರು ವರ್ಗಗಳನ್ನಾಗಿ ವಿಂಗಡಿಸಬಹುದಾಗಿದೆ.

೧. ಸಂಸ್ಕೃತ ಸಂಪ್ರದಾಯದಲ್ಲಿ ಬರೆಯಲಾದ ವ್ಯಾಕರಣಗಳು: ರಾಷ್ಟ್ರಕೂಟರ ದೊರೆ ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀವಿಜಯನ ಕವಿರಾಜ ಮಾರ್ಗ, ನಾಗವರ್ಮನ ಶಬ್ದ ಸ್ಮೃತಿ, ಮತ್ತು ಆತನದೇ ಆದ ಕರ್ನಾಟಕ ಭಾಷಾಭೂಷಣ, ಕೇಶಿರಾಜನ ಶಬ್ದಮಣಿದರ್ಪಣ, ಭಟ್ಟಾಕಳಂಕನ ಶಬ್ದಾನುಶಾಸನ.

೨. ಯುರೋಪಿಯನ್ ಮಾದರಿಯಲ್ಲಿ ರಚಿಸಲ್ಪಟ್ಟ ವ್ಯಾಕರಣಗಳು : ಹತ್ತೊಂಬತ್ತನೆಯ ಶತಮಾನದಿಂದ ಕ್ರಿಶ್ಚಿಯನ್ ಮಿಶಿನರಿಗಳು ಯುರೋಪಿಯನ್ ಮಾದರಿಯಲ್ಲಿ ಇಂಗ್ಲೀಶ್‌ನಲ್ಲಿ ಬರೆದ ಹೊಸಗನ್ನಡ ವ್ಯಾಕರಣಗಳು. ವಿಲಿಯಂ ಕ್ಯಾರಿಯವರ 'ದ ಗ್ರಾಮರ್ ಆಫ್ ಕನ್ನಡ ಲಾಂಗ್ವೇಜ್, ಜಾನ್ ಮೆಕೆರೆಲ್‌ನ ಕರ್ನಾಟಕ ವ್ಯಾಕರಣ, ಥಾಮಸ್ ಹಡ್ಸನ್‌ನ ಎನ್ ಎಲಿಮೆಂಟರೀ ಗ್ರಾಮರ್ ಆಫ್ ಕರ್ನಾಟಕ ಆರ್ ಕೆನರೀಸ್', ರೆವೆರೆಂಡ್ ಕಿಟಲ್ ಬರೆದ ಕ್ಯಾನರೀಸ್ ಗ್ರಾಮರ್ ಮುಂತಾದವು.

೩. ಅಮೆರಿಕದ ಭಾಷಾವಿಜ್ಞಾನದ ಮಾದರಿಯನ್ನು ಅನುಸರಿಸಿ ಬರೆದ ವ್ಯಾಕರಣಗಳು. ಎಸ್. ಎನ್. ಶ್ರೀಧರ್ ಅವರ ಮಾಡರ್ನ್ ಕನ್ನಡ ಗ್ರಾಮರ್, ಆರ್. ಸಿ. ಹಿರೇಮಠ ಅವರ ಸ್ಟ್ರಕ್ಚರ್ ಆಫ್ ಕನ್ನಡ, ಶಿಫ್‌ಮನ್ ಅವರ ರೆಫೆರೆನ್ಸ್ ಗ್ರಾಮರ್ ಆಫ್ ಸ್ಪೋಕನ್ ಕನ್ನಡ ಮುಂತಾದವು.

ಇಲ್ಲಿ ಕಂಡುಬರುವ ವಿಶೇಷವೆಂದರೆ ಈ ಎಲ್ಲಾ ಆಧುನಿಕ ವ್ಯಾಕರಣಗಳಲ್ಲಿ ಸಂಸ್ಕೃತ ಲ್ಯಾಟಿನ್ ಇಂಗ್ಲೀಶ್ ಮಾದರಿಗಳನ್ನು ಅನುಸರಿಸಿ ಬರೆದ ಕನ್ನಡ ವ್ಯಾಕರಣಗಳಾಗಿವೆ. ಆದರೆ ಕನ್ನಡ ವ್ಯಾಕರಣ ಪರಂಪರೆಯೊಂದು ಇದೆ ಎಂದು ಯಾರೂ ಪ್ರಯತ್ನಿಸಿಲ್ಲ. ಇದು ಒಂದು ಮುಖ್ಯ ನ್ಯೂನ್ಯತೆ. ಸಂಸ್ಕೃತ ಲ್ಯಾಟಿನ್ ಮತ್ತು ಇಂಗ್ಲೀಶ್ ಈ ಮೂರು ಬೇರೆ ಬೇರೆ ಭಾಷೆಗಳು. ಆದರೂ ಅವು ಒಂದೇ ಭಾಷಾ ಕುಟುಂಬಕ್ಕೆ ಸೇರಿದವು. ಅದೆಂದರೆ ಇಂಡೋ ಯುರೋಪಿಯನ್ ಕುಟುಂಬ. ಈ ಭಾಷೆಗಳಿಗೆ ಭಿನ್ನ ಭಿನ್ನವಾದ ವ್ಯಾಕರಣ ಪರಂಪರೆಗಳಿವೆ. ಆದರೆ ಕನ್ನಡ ಭಾಷೆಯು ಆ ಭಾಷಾ ಕುಟುಂಬಕ್ಕೆ ಸೇರಿದುದಲ್ಲ. ತನ್ನದೇ ಆದ ಪ್ರತ್ಯೇಕ ವೈಶಿಷ್ಟತೆಯನ್ನು ಹೊಂದಿರುವ ದ್ರಾವಿಡ ವರ್ಗಕ್ಕೆ ಸೇರಿದೆ. ಈ ಕುರಿತು ರಾಬರ್ಟ್ ಕಾಲ್ಡ್‌ವೆಲ್‌ನಿಂದ ಡಿ. ಎನ್. ಶಂಕರಭಟ್‌ರವರೆಗೆ ಸಾಕಷ್ಟು ವಿದ್ವಾಂಸರು ನಿಖರವಾಗಿ ಗುರುತಿಸಿದ್ದಾರೆ. ಹತ್ತೊಂಬತ್ತನೆಯ ಶತಮಾನದ ವೇಳೆಗೆ ಬೇರೆ ಬೇರೆ ಭಾಷೆಗಳ ವ್ಯಾಕರಣ ಪರಂಪರೆಗಳು ಭಿನ್ನವಾಗಿರುತ್ತವೆ ಎಂಬ ತಿಳಿವು ಮೂಡಿತು. ಆದರೆ ನಮಗೆ ದೊರಕುವ ಅತ್ಯಂತ ಪ್ರಾಚೀನ ಕನ್ನಡ ವ್ಯಾಕರಣವೆಂದರೆ ರಾಷ್ಟ್ರಕೂಟ ದೊರೆಯಾದ ನೃಪತುಂಗನ ಆಸ್ಥಾನದಲ್ಲಿದ್ದ ಶ್ರೀವಿಜಯನ ಕವಿರಾಜಮಾರ್ಗ. ಇದರ ಕಾಲ ಕ್ರಿ. ಶ. ಎಂಟುನೂರ ಹದಿನಾಲ್ಕರಿಂದ ಎಂಟುನೂರ ಎಪ್ಪತ್ತೇಳು. ಶ್ರೀವಿಜಯನ ಕವಿರಾಜ ಮಾರ್ಗದಿಂದ ಈವರೆಗಿನ ಕೆಲವು ವ್ಯಾಕರಣಗಳ ಮುಖ್ಯ ಅಂಶಗಳನ್ನು ಗಮನಿಸುತ್ತ ಕನ್ನಡ ವ್ಯಾಕರಣ ಪರಂಪರೆಯ ನೆಲೆಗಳನ್ನು ಪರಿಚಯ ಮಾಡಿಕೊಳ್ಳಲಾಗುವುದು. ಮೊದಲನೆಯದಾಗಿ ಕವಿರಾಜಮಾರ್ಗದ ಲಕ್ಷಣಗಳನ್ನು ಈ ರೀತಿಯಲ್ಲಿ ಪಟ್ಟಿಮಾಡಬಹುದು.

೧. **ಸಮಸಂಸ್ಕೃತ** : ಮೊದಲನೆಯದಾಗಿ ಸಮಸಂಸ್ಕೃತವೆಂಬ ಮುಖ್ಯ ಪರಿಕಲ್ಪನೆಯನ್ನು ತೆಗೆದುಕೊಳ್ಳೋಣ. ಸಮಸಂಸ್ಕೃತ ಎಂದರೇನು? ಇದು ಶಬ್ದಕ್ಕೆ ಸಂಬಂಧಿಸಿದ್ದು. ಒಂದು ಸಂಸ್ಕೃತ ಮತ್ತೊಂದು ಸಮಸಂಸ್ಕೃತ. ಸಂಸ್ಕೃತವೆಂದರೆ, ಸಂಸ್ಕೃತ ಪ್ರತ್ಯಯವನ್ನೊಳಗೊಂಡ ಸಂಸ್ಕೃತ ಶಬ್ದ. ಆದರೆ ಸಮಸಂಸ್ಕೃತವೆಂದರೆ ಕನ್ನಡ ಪ್ರತ್ಯಯಗಳಿಂದ ಕೂಡಿದ ಸಂಸ್ಕೃತ ಶಬ್ದಗಳೆಂದು ಕಾಣುತ್ತೇವೆ. ಕನ್ನಡ ಸಂಸ್ಕೃತ ಶಬ್ದಗಳನ್ನು ಸೇರಿಸಿ ಸಂಧಿ ಮಾಡಬಾರದು. ಅಥವಾ ಅವುಗಳನ್ನು ಸೇರಿಸಿ

ಸಮಾಸಗಳನ್ನೂ ಮಾಡಬಾರದು ಎಂದು ವೈಯಾಕರಣಿಗಳು ಹೇಳುತ್ತಾರೆ. ಇಂತಹ ಸಮಾಸಗಳನ್ನು ಒಪ್ಪದೆ. ಅವುಗಳನ್ನು ಅರಿಸಮಾಸವೆಂದು ಕರೆಯುತ್ತಾರೆ.

ಈ ವಾದವನ್ನು ನೋಡಿ. ಅಂದರೆ ಸಂಸ್ಕೃತ ಶಬ್ದಗಳನ್ನು ಕನ್ನಡದಲ್ಲಿ ಬಳಸಬಾರದು. ಹಾಗೇನಾದರೂ ಅವುಗಳನ್ನು ಬಳಸಿದರೆ ಅಂತಹವು ಕನ್ನಡದ ಪರಿಸರದಲ್ಲಿಯೂ ಸಂಸ್ಕೃತ ಶಬ್ದಗಳಾಗಿಯೇ ಮುಂದುವರಿಯುತ್ತವೆ. ಆದರೆ ಸಮಸಂಸ್ಕೃತ ಶಬ್ದಗಳಿಗೆ ಬಂದರೆ ಸಂಸ್ಕೃತ ಶಬ್ದಗಳಿಗೆ ಕನ್ನಡ ಪ್ರತ್ಯಯಗಳನ್ನು ಸೇರಿಸಿ ಅವುಗಳನ್ನು ಸಮಸಂಸ್ಕೃತಗಳನ್ನಾಗಿ ಮಾಡಿಕೊಳ್ಳಬಹುದು. ಆದರೆ ಸಂಸ್ಕೃತ ಮತ್ತು ಕನ್ನಡ ಶಬ್ದಗಳನ್ನು ಸೇರಿಸಿ ಸಮಾಸಗಳನ್ನು ಮಾಡಬಾರದು. ಹೀಗೆ ಮಾಡಿದರೆ ಅವುಗಳು ಅರಿಸಮಾಸಗಳಾಗುತ್ತವೆ. ಆದರೆ ಕನ್ನಡ ಭಾಷೆಯನ್ನು ಅದರ ಮೇಲೆ ಆಗಿರುವ ಸಂಸ್ಕೃತದ ಪ್ರಭಾವವನ್ನು ಗಮನಿಸಿದರೆ ಅರಿಸಮಾಸವನ್ನು ಮಾಡಬಾರದು ಎಂದು ಹೇಳುವುದು ಅಸಾಧ್ಯವಾಗುತ್ತದೆ. ಹಾಗೆಯೇ ವೈಯಾಕರಣಿಗಳು ಶೃತಿದುಷ್ಟ, ಅರ್ಥದುಷ್ಟ, ಶೃತಿ ಕಷ್ಟ ಮುಂತಾದ ಪರಿಕಲ್ಪನೆಗಳನ್ನು ಹೇಳುತ್ತಾರೆ.

ಕೆಲವು ಸಂಧಿ ಅಥವಾ ಸಮಾಸಗಳನ್ನು ಮಾಡಿದರೆ ಅವು ಅರ್ಥವಾಗುದು ಕಷ್ಟ ಅಥವಾ ಅವನ್ನು ಕೇಳಲು ಕಷ್ಟ. ಶೃತಿದೃಷ್ಟ ಎಂದರೆ, ಅವನ ಪ್ರಕಾರ ಸಂಧಿಗಳನ್ನು ಮಾಡಿದಾಗ ಅವುಗಳಿಂದ ಹೀನ ಅರ್ಥ ಹೊರಡುವುದು ಇಂತಹವುಗಳನ್ನು ಮಾಡಬಾರದು. ಸಂಧಿ ಪದಗಳನ್ನು ವಿಭಜಿಸಿದಾಗ ಅವು ಸರಿಯಾದ ಅರ್ಥವನ್ನು ನೀಡಬೇಕು. ಅವುಗಳಿಂದ ಅಪಾರ್ಥ ಕಾಣಬಾರದು. ಆಗ ಅದನ್ನು ಅಪಾರ್ಥಮಾಡಿಕೊಳ್ಳದೆ ಎಲ್ಲರೂ ಸರಿಯಾದ ಅರ್ಥವನ್ನು ಮಾಡಿಕೊಂಡು ಸ್ವೀಕರಿಸುವುದು.

'ಪಳೆಗನ್ನಡಮಂ ಪೊಲಗೆಡಿಸಿ ನುಡಿವರ್' ಹಳಗನ್ನಡವನ್ನು ಕೆಡಿಸುತ್ತಾರೆ ಎನ್ನುವಾಗ ಅವನು ಹಳೆಗನ್ನಡ ಅವಸ್ಥೆಯನ್ನು ದಾಟಿದ್ದಾನೆ ಎಂದಂತಾಯಿತು. ಕವಿರಾಜ ಮಾರ್ಗದ ಹೊತ್ತಿಗೆ ಹಳೆಗನ್ನಡದ ಹಂತ ಒಂದು ಆಗಿ ಹೋಗಿತ್ತು. ಆ ಹಳೆಗನ್ನಡವನ್ನು ಮಾತಾಡಿ ಜನಪದರು ಕೆಡಿಸುತ್ತಿದ್ದಾರೆ ಎಂಬ ಮಾತನ್ನು ಗಮನಿಸಬಹುದು. ಕವಿರಾಜಮಾರ್ಗದ ಪ್ರತಿ ಅಧ್ಯಾಯದಲೂ ಸಂಸ್ಕೃತದ ಪ್ರಭಾವವನ್ನು ಕಾಣಬಹುದು. ಶ್ರೀವಿಜಯನು ದಂಡಿಯ ಕಾವ್ಯಾದರ್ಶವನ್ನು ಅನುಸರಿಸಿ ರಚಿತವಾದದ್ದು. ಮೊದಲನೆಯ ಅಧ್ಯಾಯದಲ್ಲಿ ದೋಷಗಳನ್ನು ಕುರಿತು ವಿವರಿಸಲಾಗಿದೆ.

೧. ಸಮಸಂಸ್ಕೃತ = ಕನ್ನಡದ ಪ್ರತ್ಯಯಗಳನ್ನು ಸೇರಿಸಿದ ಸಂಸ್ಕೃತದ ಶಬ್ಧಗಳು. ಉದಾ; ನರಪತಿತನಯ.

೨. ಸಂಸ್ಕೃತಾವ್ಯಯ = ಅವ್ಯಯ ಸಹಿತವಾದ ಸಂಸ್ಕೃತ ಶಬ್ಧಗಳು. ಉದಾ : ಪುನ – ಪುನರ್.

೩. ಅರಿಸಮಾಸ ದೋಷ = ಸಂಸ್ಕೃತ ಮತ್ತು ಕನ್ನಡ ಶಬ್ದಗಳು ಕೂಡಿ ಆದದ್ದು. ಉದಾ : ಅರಸುಕುಮಾರ, ಮುಖದಾವರೆ

೪. ಶೃತಿದುಷ್ಟ, ಶೃತಿಕಷ್ಟ = ಅಸಮರ್ಪಕ ಸಂಧಿ ಮತ್ತು ಕೇಳಲು ಕಷ್ಟಕರವಾದುದು.

೫. ಯತಿವಿಲಂಘನ = ಕಾವ್ಯವನ್ನು ಓದುವಾಗ ಯತಿ ಸ್ಥಾನವನ್ನು ಕಡೆಗಣಿಸುವುದು.

೬. ವಿಸಂಧಿ ದೋಷ = ಪುನರುಕ್ತ ಶಬ್ದಗಳ ಸಂಧಿ ಉದಾ : ಜನಪತಿಗೊಸಗೆಯಮ್

೭. ವಿರೂಪ ಸಂಧಿ = ಪುನರಾವರ್ತಿತ ಶಬ್ದಗಳನ್ನು ಸೇರಿಸಿ ಸಂಧಿ ಮಾಡುವುದು. ಉದಾ : ಅರಮರಸಮ್, ಅರಮರಮನೆಯೊಳಗೆ

೮. ನೇಯಾರ್ಥ ದೋಷ = ಅಧ್ಯಾಹಾರವನ್ನು ತುಂಬುವುದು. ಉದಾ : ಆಕಾಶದಲ್ಲಿ ಎಲ್ಲೆಲ್ಲೂ ಕೆಂಬಣ್ಣ ಹರಡಿದೆ.

೯. ಕಾರಕಾದಿ ದೋಷ = ವಿಭಕ್ತಿಗೆ ಸಂಬಂಧಿಸಿದ ದೋಷಗಳು. ಉದಾ : ನರಪತಿ ಬಂದಂ ಭೂಪತಿಗೆ

೧೦. ವಚನ ದೋಷ = ವಚನಗಳಲ್ಲಿ ಸಾನುರೂಪತೆ ಇಲ್ಲದಿರುವುದು. ಉದಾ : ಆನೆಗಳ್ ಈ ಪ್ರದೇಶದೊಳ್ನಂದುದು.

೧೧. ಸಮುಚ್ಚಯ ದೋಷ = ಕೂಡಿಸುವುದರಲ್ಲಿನ ದೋಷಗಳು. ಉದಾ : ನರಪತಿಯು ನೃಪಾಂಗನೆಯರು ನೆರೆದು ಆಡಿಪೋದರ್.

೧೨. ವಿಶಾಂಕ ದೋಷ = ಅರ್ಥಸಂದಿಗ್ದತೆಯ ರಚನೆ. ಉದಾ : ದಿವಿಜನೋ ಫಣಿನಾಯಕನೋ ಮನೋಭವನಿಯಮ್ ಕರಮೊಪ್ಪಿದನೆಂಬುದಮ್.

ಎರಡನೆಯ ಅಧ್ಯಾಯದಲ್ಲಿ ಈ ಅಂಶಗಳ ಕುರಿತ ವಿವೇಚನೆಯಿದೆ.

೧. ಶಬ್ದಾನುರೂಪ್ಯ = ಸರಿಯಾದ ಸಮಾಸ ರಚನೆ. ಉದಾ : ಹಾಲುಜೇನು.

೨. ಲಘ್ವಾಕ್ಷರದ ಮುಂದಣ ಸಂಯುಕ್ತಾಕ್ಷರದ ದೋಷ, ಹ್ರಸ್ವ ಸ್ವರಗಳ ಬಳಿಕ ದ್ವಿತ್ವಗಳ ಪುನರುಕ್ತಿ. ಉದಾ: ಬರಿಸಿಕ್ಷಿತಿಪತಿಯಮ್ ಸೈತಿರಿಸಿ.

೩. ಕ್ರಿಯಾ ವಿಶೇಷಣ ಪ್ರಯೋಗ ದೋಷ = ಕ್ರಿಯಾ ವಿಶೇಷಣಗಳ ಅಸಮರ್ಪಕ ಪ್ರಯೋಗ. ಉದಾ : ವಿನೋದದಿಂದುರುಮುದದಿಮ್.

೪. ನಿಪಾತ ಪ್ರಯೋಗ ದೋಷ = ಅವ್ಯಯಗಳ ಅಸಮರ್ಪಕ. ಪ್ರಯೋಗ ಉದಾ : ಚಪಲಾಧ್ವಜನೋಕ್ತಿ.

೫. ದ್ವಿತೀಯ ಷಷ್ಠಿ ದೀರ್ಘ = ದ್ವಿತೀಯ ಮತ್ತು ಷಷ್ಠಿ ವಿಭಕ್ತಿ ಪ್ರತ್ಯಯಗಳಲ್ಲಿ ಅನವಶ್ಯಕ ದೀರ್ಘತೆ. ಉದಾ : ಕೀರ್ತಿಧ್ವಜನಾನ್, ನೃಪನಂದನನಾ

೬. ಸಂಬೋಧನಾ ದೀರ್ಘ = ಸಂಬೋಧನಾ ವಿಭಕ್ತಿಯಲ್ಲಿ ಅನಾವಶ್ಯಕವಾಗಿ ದೀರ್ಘತೆಯನ್ನು ಬಳಸುವುದು. ಉದಾ : ಪರೋಪಕಾರೀ.

೭. ಪುನರುಕ್ತಿ = ಅನಾವಶ್ಯಕವಾಗಿ ಪುನರುಕ್ತಿಯ ಬಳಕೆ. ಉದಾ : ಪರಿಪರಿ.

೮. ಬಹು ವಿಶೇಷಣ ಪ್ರಯೋಗ = ಅನಾವಶ್ಯಕವಾಗಿ ವಿಶೇಷಣಗಳನ್ನು ಬಳಸುವುದು. ಉದಾ : ಗಂಭೀರ ಚಿತ್ತರ್, ವಿವೇಕಿಗಳ್, ನಾಡವರ್ಗಳ್

೯. ದಕ್ಷಿಣೋತ್ತರ ಮಾರ್ಗಗಳು = ಉತ್ತರ ದಕ್ಷಿಣ ಮಾರ್ಗಗಳು. ಉದಾ : ಮಧುರ –ಮಾಧುರ್ಯಂ.

೧೦. ವಿಶೇಷಣ ವಿಶೇಷ್ಯ ಪದ ಸಮಾಸ ವಿಚಾರ = ವಿಶೇಷಣಗಳ ಬಳಕೆಯ ವಿಚಾರ. ಉದಾ : ಭಾಸುರತರ ರಘುಕುಲ ಲಲಾಮ ಲಕ್ಷ್ಮಣನೋಳ್.

ಶಬ್ದಾನು ರೂಪ್ಯ ಮತ್ತು ದಕ್ಷಿಣೋತ್ತರ ಮಾರ್ಗಗಳನ್ನು ಹೊರತು ಪಡಿಸಿದರೆ, ಮಿಕ್ಕ ವಿಚಾರಗಳನ್ನು ಕೇಶಿರಾಜ ತನ್ನ ಶಬ್ದಮಣಿದರ್ಪಣದಲ್ಲಿ ಸಾಕಷ್ಟು ವಿವರವಾಗಿ ಚರ್ಚಿಸಿದ್ದಾನೆ. ಕವಿರಾಜ ಮಾರ್ಗವು ವ್ಯಾಕರಣಕಷ್ಟೇ ಸೀಮಿತವಾದ ಕೃತಿಯಲ್ಲ. ಅದು ಅಲಂಕಾರ ಶಾಸ್ತ್ರವನ್ನು ಕುರಿತದ್ದು ಆದರೆ ಅದರೊಡನೆ ಈ ಕೃತಿಯೂ ಕೆಲವು ವ್ಯಾಕರಣಾಂಶಗಳ ಬಗ್ಗೆಯೂ ವಿವೇಚಿಸುತ್ತದೆ ಎಂಬುದು ಈ ಮೇಲಿನ ಅಂಶಗಳೇ ಸ್ಪಷ್ಟ.

ಕವಿರಾಜಮಾರ್ಗದ ನಂತರ ಸುಮಾರು ಮುನ್ನೂರು ವರ್ಷಗಳವರೆಗೂ ಯಾವುದೇ ಕನ್ನಡ ವ್ಯಾಕರಣವೂ ರಚಿತವಾಗಲಿಲ್ಲ. ಕನ್ನಡ ನಾಡನ್ನು ಆಳಲ್ಪಟ್ಟ ಮತ್ತೊಂದು ಪ್ರಮುಖ ರಾಜವಂಶವಾದ ಹೊಯ್ಸಳ ದೊರೆ ನರಸಿಂಹನ ಕಾಲದಲ್ಲಿ

ನಾಗವರ್ಮ ಎಂಬ ಮತ್ತೊಬ್ಬ ವೈಯಾಕರಣಿಯೂ ಕ್ರಿ.ಶ. ೧೧೬೨ರಲ್ಲಿ ಎರಡು ಕನ್ನಡ ವ್ಯಾಕರಣಗಳನ್ನು ಸಂಸ್ಕೃತದಲ್ಲಿ ರಚಿಸಿದ. ಅವುಗಳೆಂದರೆ, ಕಾವ್ಯಾವಲೋಕನ ಮತ್ತು ಕರ್ನಾಟಕ ಭಾಷಾಭೂಷಣ. ಇವನೇ ಕನ್ನಡದ ಮೊದಲ ವೈಯಾಕರಣಿ ಎಂದು ಪರಿಗಣಿಸಲಾಗುತ್ತದೆ. ಶಬ್ದಸ್ಮೃತಿಯು ಕಾವ್ಯಾವಲೋಕನದ ಒಂದು ಭಾಗವಾಗಿದ್ದು ಅದರಲ್ಲಿ ಕನ್ನಡ ಭಾಷೆಯ ಕ್ರಮ ಬದ್ಧ ವಿಶ್ಲೇಷಣೆ ಮಾಡುತ್ತಾನೆ. ನಾಗವರ್ಮನ ವೈಶಿಷ್ಟ್ಯವೆಂದರೆ ಹಳೆಗನ್ನಡ ಕಾವ್ಯಗಳಿಂದ ಲಕ್ಷ್ಯಪದ್ಯಗಳನ್ನು ಕೊಡುವುದು.

ನಾಗವರ್ಮನು ಶಬ್ದಸ್ಮೃತಿಯಲ್ಲಿ ಈ ಕೆಳಗಿನ ಅಂಶಗಳನ್ನು ಕುರಿತು ವಿವೇಚಿಸುತ್ತಾನೆ.

೧. ಸಂಜ್ಞಾ ಪ್ರಕರಣಂ : ನಾಮಪದಗಳು

೨. ಸಂಧಿ ಪ್ರಕರಣಂ : ಧ್ವನಿ ನಿಯಮಗಳು

೩. ಸಮಾಸ ಪ್ರಕರಣಂ : ಸಮಾಸಗಳ ನಿಯಮಗಳು

೪. ನಾಮ ಪ್ರಕರಣಂ : ನಾಮ ಪದಗಳು

೫. ತದ್ಧಿತ ಪ್ರಕರಣಂ : ಸಾಧಿತ ನಾಮ ರೂಪಗಳು

೬. ಆಖ್ಯಾತ ಪ್ರಕರಣಂ : ಸಾಧಿತ ಕ್ರಿಯಾ ರೂಪಗಳು

ನಾಗವರ್ಮನ ಮತ್ತೊಂದು ಕೃತಿಯಾದ ಕರ್ನಾಟಕ ಭಾಷಾಭೂಷಣದಲ್ಲಿ ಸೂತ್ರಗಳು ವೃತ್ತಿಗಳು ಮತ್ತು ಪ್ರಯೋಗಗಳು ಅಂದರೆ ಉದಾಹರಣೆಗಳು ಇವೆ. ಈ ಕೃತಿಯೂ ವಿವರವಾಗಿ ವಿವೇಚಿಸುತ್ತದೆ.

ಇಲ್ಲಿ ಅವನು ಹಳೆಯ ಕಾವ್ಯಗಳಿಂದ ಹೆಚ್ಚು ಉದಾಹರಣೆಗಳನ್ನು ಕೊಡುವುದಿಲ್ಲ. ತನ್ನ ವಿವೇಚನೆಗೆ ಅನುಗುಣವಾಗಿ ಅವನೇ ಪ್ರಯೋಗಗಳನ್ನು ಸೃಷ್ಟಿಸುತ್ತಾನೆ. ವಿದ್ವಾಂಸರ ಪ್ರಕಾರ ಈ ಗ್ರಂಥ ಮಲೆಯಾಳಂನ ಮೊದಲ ವ್ಯಾಕರಣ ಗ್ರಂಥವಾದ ಕೃಷ್ಣಲೀಲಾ ಶುಕನ ಲೀಲಾತಿಲಕಂನ ಮೇಲೆ ಪ್ರಭಾವ ಬೀರಿದ ಕನ್ನಡ ವ್ಯಾಕರಣ ಕೃತಿಯಾಗಿದೆ.

ಕೇಶಿರಾಜನ ಶಬ್ದಮಣಿದರ್ಪಣವು ಇಂದಿಗೂ ಕನ್ನಡವನ್ನು ಅಭ್ಯಸಿಸಲು ಅಧಿಕೃತವೂ ಸೋಪಜ್ಞವೂ ಆದ ಕೃತಿಯು ಆಗಿದೆ. ಕೇಶಿರಾಜನ ಕಾಲ ಕ್ರಿ.ಶ. ೧೨೬೦. ಅವನು ವಿದ್ವತ್ ಹಿನ್ನೆಲೆಯ ಕುಟುಂಬಕ್ಕೆ ಸೇರಿದ್ದಾನೆ. ಅವನ ತಂದೆ ಚಿದಾನಂದ ಮಲ್ಲಿಕಾರ್ಜುನ ಒಬ್ಬ ಮಹಾನ್ ವಿದ್ವಾಂಸ ಹಾಗೂ ಕನ್ನಡದ ಮೊದಲ ಸಂಕಲನ ಗ್ರಂಥವಾದ ಸೂಕ್ತಿಸುಧಾರ್ಣವದ ಕರ್ತೃ. ಅವನು ಕನ್ನಡದ ಮತ್ತೊಬ್ಬ ಪ್ರಸಿದ್ಧ

ಕವಿಯಾದ ಜನ್ನನ ಭಾವ ಮೈದುನ. ಅವನು ಬದುಕಿದ್ದುದು ಹೊಯ್ಸಳ ದೊರೆ ಇಮ್ಮಡಿ ನರಸಿಂಹನ ಕಾಲದಲ್ಲಿದ್ದ.

ಕೇಶಿರಾಜನು ತನ್ನ ಕೃತಿಯನ್ನು ಆರಂಭಿಸುವುದು ಅಥವಾ ವ್ಯಾಕರಣ ವಿಷಯವನ್ನು ಪ್ರವೇಶಿಸುವುದು ಧ್ವನಿಯ ಹುಟ್ಟಿನ ಬಗ್ಗೆ ಚಿತ್ರಿಸುವುದರ ಮೂಲಕ.

ಅನುಕೂಲ ಪವನನಿಂ ಜೀ
ವನಿಷ್ಟದಿಂ ನಾಭಿಮೂಲದೋಳ್ ಕಹಳೆಯ ಪಾಂ
ಗಿನವೊಲ್ ಶಬ್ದದ್ರವ್ಯಂ
ಆನಿಯಿಸುಗುಂ ಶ್ವೇತಮದರ ಕಾರ್ಯಂ ಶಬ್ದಂ!

**(ಶಬ್ದಮಣಿದರ್ಪಣ ಸೂತ್ರ – ೯)**

ಈ ಸೂತ್ರದಲ್ಲಿ ಕೇಶಿರಾಜನು ಧ್ವನಿಯ ಮೂಲವನ್ನು ತಿಳಿಸಿದ್ದಾನೆ. ಅಲ್ಲದೆ ಕೇಶಿರಾಜನು ಜೈನನೇ ಅಲ್ಲವೆ ಎಂಬ ಚರ್ಚೆಗೂ ಈ ಸೂತ್ರ ಗ್ರಾಸವಾಗಿದ್ದುದು ಇದೆ. ಶಬ್ದೋತ್ಪತ್ತಿಯನ್ನು ಕುರಿತಾದ ಈ ಸೂತ್ರದಲ್ಲಿ ಕೆಲವು ಮುಖ್ಯ ವಿಚಾರಗಳಿವೆ. ಅನುಕೂಲ ಪವನ, ಜೀವನ ಇಷ್ಟ, ನಾಭಿಮೂಲ, ಕಹಳೆಯ ಪಾಂಗು, ಶಬ್ದದ್ರವ್ಯ, ಶ್ವೇತ – ಇಲ್ಲಿಯ ಪ್ರಮುಖ ಅಂಶಗಳಾಗಿವೆ.

ನಮ್ಮ ಭಾವನೆಗಳನ್ನು ವ್ಯಕ್ತಪಡಿಸುವಾಗ ಮಾತು ಹೊರ ಬರುವುದು. ಇದನ್ನೇ 'ಜೀವನಿಷ್ಟದಿಂ' ಎಂಬುದು ಸೂಚಿಸುತ್ತದೆ. ಮಾತು ಎಂದರೆ ಅರ್ಥವತ್ತಾದ ಧ್ವನಿ ಎಂದು. ಧ್ವನಿಯ ಹುಟ್ಟಿಗೆ ಸಹಾಯಕ್ಕೆ ಬರುವುದು ಅನುಕೂಲ ಪವನ. ಇದು ಹುಟ್ಟುವುದು ನಾಭಿ ಮೂಲದಲ್ಲಿ ( ಶ್ವಾಸಕೋಶದಿಂದ ಹೊರಡುವ ಗಾಳಿ ಅಥವಾ ಉಸಿರು ) ನಾಭಿ ಮೂಲದಲ್ಲಿ ಕಹಳೆಯ ರೀತಿಯಲ್ಲಿ ಹುಟ್ಟಿದ 'ಶಬ್ದ' ದ್ರವ್ಯವಾಗಿದೆ. ಈ ದ್ರವ್ಯವೇ ಮೂಲಧನ, ಅಕ್ಷಯ ನಿಧಿ. "ಕಹಳೆಯ ಪಾಂಗಿನವೋಲ್" ಎಂಬ ಅಲಂಕಾರ ಬಳಸಿರುವುದು ಕೇಶಿರಾಜನ ಕವಿತ್ವಕ್ಕೆ ಸಾಕ್ಷಿಯಾಗಿದೆ. ಆದರೆ ಶಬ್ದಕ್ಕೆ ಬಿಳಿಯ ಬಣ್ಣವುಳ್ಳದ್ದು ಎಂದು ಹೇಳಿದ್ದಾನೆ. ಸರಸ್ವತಿ ಮತ್ತು ಜೈನ ಧರ್ಮವನ್ನು ಸೂಚಿಸುವುದೆಂದು ವಿದ್ವಾಂಸರು ಈಗಾಗಲೆ ಚರ್ಚಿಸಿದ್ದಾರೆ.

ಅನಂತರ ಧ್ವನಿ, ಅಕ್ಷರ, ನಾಮಪದ, ಸಂಧಿ ಮುಂತಾದ ವಿಷಯಗಳ ಬಗ್ಗೆ ವಿವೇಚಿಸುತ್ತಾರೆ. ವ್ಯಾಕರಣದ ಪ್ರಾಮುಖ್ಯತೆ ಮತ್ತು ಉಪಯುಕ್ತತೆಯ ಬಗ್ಗೆ ಹೇಳುತ್ತಾನೆ ಆ ಕುರಿತು ಸೂತ್ರ ಹತ್ತರಲ್ಲಿ ಕಾಣಬಹುದು.

ವ್ಯಾಕರಣದಿಂದೆ ಪದಮಾ

ವ್ಯಾಕರಣದ ಪದದಿನರ್ಥಮರ್ಥದೆ ತತ್ವಾ
ಲೋಕಂ ತತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮಿದೆ ಬುಧರ್ಗೆ ಫಲಂ!

(ಶಬ್ದಮಣಿದರ್ಪಣ ಸೂತ್ರ-೧೦)

ಈ ಸೂತ್ರದಲ್ಲಿ ಕೇಶಿರಾಜನು ವ್ಯಾಕರಣ ಅಥವಾ ಶಬ್ದಶಾಸ್ತ್ರದ ಮಹತ್ವವನ್ನು ಕುರಿತು ವಿವರಿಸುತ್ತಾನೆ. ವ್ಯಾಕರಣವೆಂದರೆ ಈಗಾಗಲೇ ಸ್ಪಷ್ಟಪಡಿಸಿರುವಂತೆ ಭಾಷೆಯ ರಚನೆಗೆ ಸಂಬಂಧಿಸಿದ ನಿಯಮಗಳನ್ನು ತಿಳಿಸುವ ಶಾಸ್ತ್ರ. ಅಂತಹ ವ್ಯಾಕರಣದಿಂದಲೇ ಒಂದು ಪದದ ಶುದ್ಧರೂಪವು ಸಿದ್ಧಿಸುವುದು. ಅಂತಹ ಶುದ್ಧರೂಪದ ಪದದಿಂದಲೇ ಸರಿಯಾದ ಅರ್ಥ ಸರಿಯಾಗಿ ಹೊಳೆಯುವುದು. ಅಂತಹ ಸರಿಯಾದ ಅರ್ಥದಿಂದಲೇ ಯಾವುದು ಏನೆಂಬ ತತ್ವ ತಿಳಿಯುವುದು. ತತ್ವವೆಂದರೆ ಯಾವುದೇ ವಿಷಯದ ಬಗೆಗಿನ ಪೂರ್ಣಜ್ಞಾನ. ಇಂತಹ ತಿಳುವಳಿಕೆಯಿಂದ ಮುಕ್ತಿ ದೊರೆಯುತ್ತದೆ. ಈ ಕಾರಣದಿಂದ ವಿದ್ವಾಂಸರು ವ್ಯಾಕರಣವನ್ನು ಸ್ವೀಕರಿಸುತ್ತಾರೆಂದು ಹೇಳುತ್ತಾನೆ.

ಕೇಶಿರಾಜನು ತನ್ನ ವ್ಯಾಕರಣ ಕೃತಿಯಲ್ಲಿ ವಿವೇಚನೆಗೊಂಡ ಅಂಶಗಳನ್ನು ಸೂತ್ರದಲ್ಲಿ ಹೇಳುತ್ತಾನೆ.

ಕ್ರಮದಿಂದೆ ಸಂಧಿ ನಾಮಂ
ಸಮಸಮಾ ತದ್ಧಿತಂ ಪೊದಲ್ದಾಖ್ಯಾತಂ
ಸಮುದಿತಂ ಧಾತುವಪಭ್ರಂ
ಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್!

(ಶಬ್ದಮಣಿದರ್ಪಣ ಸೂತ್ರ-೮)

ಈ ಗ್ರಂಥದಲ್ಲಿ ಒಟ್ಟು ಎಂಟು ಅಧ್ಯಾಯಗಳಿವೆ.

೧. ಸಂಧಿ. ೨. ನಾಮ

೩. ಸಮಾಸ ೪. ತದ್ಧಿತ

೫. ಆಖ್ಯಾತ ೬. ಧಾತು

೭. ಅಪಭ್ರಂಶ ೮. ಅವ್ಯಯ

ಕೇಶಿರಾಜನು ಕನ್ನಡ ವರ್ಣಮಾಲೆಯಲ್ಲಿ ನಲವತ್ತೇಳು ವರ್ಣಗಳಿವೆ ಎಂದು ಹೇಳುತ್ತಾನೆ. ಅವನ ಪ್ರಕಾರ ಶುದ್ಧ ಕನ್ನಡದಲ್ಲಿ ದೇಶೀ ಪದಗಳು (ಉದಾ: ಕಣ್ಗಳ್) ತದ್ಭವಗಳು ಸೇರುತ್ತವೆ. ಸಂಸ್ಕೃತದಿಂದ ಎರವಲು ಪಡೆದ ಶಬ್ದಗಳು (ಉದಾ: ಸ್ಮಶಾನ) ಕನ್ನಡವು ಸಂಸ್ಕೃತದಿಂದ ಎರವಲು ಪಡೆಯುವುದರಿಂದ ಕನ್ನಡದಲ್ಲಿ ಇಲ್ಲದ ಆದರೆ ಸಂಸ್ಕೃತದಲ್ಲಿರುವ ಅನೇಕ ವರ್ಣಗಳನ್ನು ಸ್ವೀಕರಿಸುತ್ತದೆ. ಅವುಗಳೆಂದರೆ.

ಋ – ಋಷಿ ಎಂಬಲ್ಲಿನಂತೆ

ಶ್ – ಶಕುನ ಎಂಬಲ್ಲಿರುವಂತೆ

ಷ್ – ಆಷಾಡ ಎಂಬಲ್ಲಿರುವಂತೆ

: – ಅಂತ:ಕರಣ ಎಂಬಲ್ಲಿರುವಂತೆ

ಕೇಶಿರಾಜನು ಕನ್ನಡದ ಕೆಲವು ವಿಶಿಷ್ಟಗಳನ್ನು ಪಟ್ಟಿಮಾಡುತ್ತಾನೆ.

ಗಮಕ ಸಮಾಸದಿಂ ರಳಕುಳಕ್ಷಳದಿಂ ಶ್ರುತಿಸಹ್ಯ ಸಂಧಿಯಿಂ
ಸಮುಚಿತಮಾಗಿ ಬರ್ಪ ಸತಿಸಪ್ತಮಿಯಿಂ ಸಮಸಂಸ್ಕೃತೋಕ್ತಿಯಿಂ
ವಮಹಪ ಭೇದದಿಂ ವಿರಹಿತಾವ್ಯಯ ಸಂಸ್ಕೃತಲಿಂಗದಿಂ ಪದೋ
ತ್ತಮ ಶಿಥಿಲತ್ವದಿಂ ಯತಿವಿಲಂಘನದಿಂದರಿದಲ್ತೆ ಕನ್ನಡಂ!!

(ಶಬ್ದಮಣಿದರ್ಪಣ ಸೂತ್ರ–೩೪೨)

೧. ಗಮಕ ಸಮಾಸ,

೨. ರಳಕುಳಕ್ಷಳ

೩. ಶ್ರುತಿಸಹ್ಯ ಸಂಧಿ,

೪. ಸಮುಚಿತಮಾಗಿಬರ್ಪ ಸತಿಸಪ್ತಮಿ,

೫. ಸಮಸಂಸ್ಕೃತ,

೬. ವ,ಮ,ಹ,ಪ ಭೇದ,

೭. ವಿರಹಿತಾವ್ಯಯ ಸಂಸ್ಕೃತಲಿಂಗ,

೮. ಪದೋತ್ತಮ ಶಿಥಿಲತ್ವ (ಶಿಥಿಲದ್ವಿತ್ವ),

೯. ಯತಿವಿಲಂಘನ.

ಇವು ಕೇಶಿರಾಜನು ಹೇಳುವ ಕನ್ನಡದ ವಿಶಿಷ್ಟಗಳು. ಆದರೆ ಈ ಸೂತ್ರವನ್ನು ಕೇಶಿರಾಜನೇ ಬರೆದನೋ ಅಥವಾ ಅದು ಪ್ರಕ್ಷಿಪ್ತವೋ ಎಂಬುದು ಖಚಿತವಿಲ್ಲ. ಈ ಪದ್ಯಕ್ಕೆ ವೃತ್ತಿ ಇಲ್ಲ. ಇಲ್ಲಿ ಹೇಳುವ ಒಂಬತ್ತು ಲಕ್ಷಣಗಳಲ್ಲಿ ಎಂಟಕ್ಕೆ ಮಾತ್ರ ಶಬ್ದಮಣಿದರ್ಪಣದಲ್ಲಿ ವಿವರಣೆ ಇದೆ.

೧. **ಗಮಕ ಸಮಾಸ – ಉದಾ : ಬಿಳಿಯ ಕೊಡೆ**

ಗಮಕ ಸಮಾಸದ ಬಗ್ಗೆ ನಾಗವರ್ಮನು ಶಬ್ದಸ್ಮೃತಿಯಲ್ಲಾಗಲಿ ಅಥವಾ ಕರ್ನಾಟಕ ಭಾಷಾಭೂಷಣದಲ್ಲಾಗಲಿ ಏನೂ ಹೇಳುವುದಿಲ್ಲ. ಇದು ಇತರೆ ಯಾವುದೇ ದ್ರಾವಿಡ ಭಾಷೆಗಳಲ್ಲಿ ಕಾಣಬರುವುದಿಲ್ಲ. ಕೇಶಿರಾಜನು ಮಾತ್ರ ಇದನ್ನು ಉಲ್ಲೇಖಿಸುತ್ತಾನೆ. ಶಬ್ದಾನುಶಾಸನದ ಕತೃವಾದ ಭಟ್ಟಾಕಳಂಕನು ಇದರ ಹೆಸರನ್ನು ಹೇಳದಿದ್ದರೂ ಅದರ ಲಕ್ಷಣವನ್ನು ವಿವರಿಸುತ್ತಾನೆ.

ಗಮಕ ಸಮಾಸದ ಲಕ್ಷಣವೆಂದರೆ, ಅದರ ಪೂರ್ಣಪದದಲ್ಲಿ ಸರ್ವನಾಮ, ವಿಶೇಷಣ ಅಥವಾ ದೀರ್ಘನಾಮ ಪದವು ಬಂದರೆ, ಉತ್ತರ ಪದದಲ್ಲಿ ಕಾರಕವು ಇರುವುದು. ಉದಾ: ಆವ ಮಾತು, ಆವ ಕಾರ್ಯ.

೨. **ರಳಕ್ಷಳ – ರಳ – ಳ** ಎಂಬುದು ಧ್ವನಿ ರೂಪದಲ್ಲಾಗಲಿ ಬರಹ ರೂಪದಲ್ಲಾಗಲಿ ಹೊಸಗನ್ನಡದಲ್ಲಿ ಇಲ್ಲ. ಹಳಗನ್ನಡದಲ್ಲಿ ಲಿಪಿ ರೂಪದಲ್ಲಿ ಬಳಕೆಗೆ ಇದೆ. ಆದರೆ ಹದಿಮೂರನೆ ಶತಮಾನದ ಹೊತ್ತಿಗೆ ಕಣ್ಮರೆಯಾಯಿತು. ಕ್ರಮೇಣ ಅದರ ಸ್ಥಾನದಲ್ಲಿ ಕೆಲವು ಸನ್ನಿವೇಶದಲ್ಲಿ ಳ ಬಂದಿದ್ದು ಮತ್ತೆ ಕೆಲವು ಸನ್ನಿವೇಶದಲ್ಲಿ ರ ಬಂದಿತು. ಇದಕ್ಕೆ ಕಾರಣ ಉಚ್ಚಾರಣೆಯಿಂದ ತಪ್ಪಿಹೋದದ್ದು. ಈ ವಾದವನ್ನು ಸಮರ್ಥಿಸುವಂತೆ ಹದಿಮೂರನೆಯ ಶತಮಾನದ ಕವಿಯಾದ ಹರಿಹರನು ತನ್ನ ಚಂಪೂ ಕೃತಿಯಾದ ಗಿರಿಜಾಕಲ್ಯಾಣ ಮಹಾ ಪ್ರಬಂಧಂ ರಳಗಳು ಳ ಎಂಬ ರೂಪದಲ್ಲಿ ಇರುವವೆಂದು ಸ್ಪಷ್ಟಪಡಿಸುತ್ತಾನೆ. ಹೀಗಾಗಿ ಇವುಗಳ ಉಚ್ಚಾರಣಾ ಭೇದವನ್ನು ಸ್ಪಷ್ಟಪಡಿಸುವುದು ಅಸಾಧ್ಯ ಎನ್ನುತ್ತಾನೆ. ಆದ್ದರಿಂದ ಪ್ರಾಸಸ್ಥಾನದಲ್ಲಿ ಅವುಗಳನ್ನು ಒಂದೇ ಎಂದು ಭಾವಿಸುತ್ತಾನೆ. ವಿದ್ವಾಂಸರು ಇದಕ್ಕೆ ಆಕ್ಷೇಪಿಸದೇ ಇದನ್ನು ಒಪ್ಪಿಕೊಳ್ಳಬೇಕೆಂದು ಹೇಳುತ್ತಾನೆ. ಹೀಗೆ ಹೇಳಿ ಆತನು ಪ್ರಾಸ ನಿಯಮವನ್ನು ಧಿಕ್ಕರಿಸುತ್ತಾನೆ. ಇಂತಹ ಉಲ್ಲಂಘನೆಗಳನ್ನು ಗಮನಿಸಿಯೆ ಕೇಶಿರಾಜನು ಇದರಿಂದ ಭಾಷೆಯ ಶುದ್ಧತೆಗೆ ಭಂಗವುಂಟಾಗುವುದೆಂದು ಭಾವಿಸಿರಬೇಕು. ಆದ್ದರಿಂದಲೇ ಅವನು ಈ ಮೂರು ಅಕ್ಷರಗಳ ಪ್ರಾಮುಖ್ಯವನ್ನು ಕುರಿತು ಹದಿನಾಲ್ಕು ಸೂತ್ರಗಳಲ್ಲಿ ದೀರ್ಘವಾಗಿ ವಿವರಿಸುವ ಶ್ರಮವನ್ನು ತೆಗೆದುಕೊಳ್ಳುತ್ತಾನೆ. (ಅಂತರ್–ರ್–ನಾಲಿಗೆ ಮೇಲೆ ಹೋಗುವುದು) ಕೇಶಿರಾಜನ ಪ್ರಕಾರ ಈ ವರ್ಣಗಳ ಉಚ್ಚಾರಣೆ ಮುಖ್ಯವೇ ವಿನಹ ಅವುಗಳ ಪ್ರಾಸಸ್ಥಾನವಲ್ಲ.

೩. **ಶ್ರುತಿ ಸಹ್ಯ ಸಂಧಿ** : ಕೇಳಲು ಕಷ್ಟಕರವೆನ್ನಿಸುವ ಬಗ್ಗೆ. ಸಂಧಿ ಮಾಡುವಾಗ ಅಶ್ಲೀಲ ಅರ್ಥವಾಗಲೀ, ಹೀನಾರ್ಥವಾಗಲೀ ಹೊರಡಬಾರದು, ಉದಾ : ಬಲಿತ +

ಉಣ್ಣಿ = ಬಲಿತುಣ್ಣಿ. ಇಲ್ಲಿ ಸ್ವರವನ್ನು ಬಿಟ್ಟು ಸಂಧಿಯನ್ನು ಮಾಡಬಾರದು ಎಂದು ಅವನು ಸೂಚಿಸುತ್ತಾನೆ. ಮತ್ತೊಂದು ಉದಾ :- ಹೇ + ಲತಾ ಕೋಮಲಾಂಗಿ = ಹೇಲತಾ ಕೋಮಲಾಂಗಿ. ಈ ರೀತಿ ಕೇಶಿರಾಜನು ಕನ್ನಡ ಭಾಷೆಯ ವೈಶಿಷ್ಟ್ಯವನ್ನು ವಿವರಿಸುತ್ತಾನೆ. ಈ ಗ್ರಂಥವು ಕನ್ನಡದ ಶ್ರೇಷ್ಠ ವರ್ಣನಾತ್ಮಕ ವ್ಯಾಕರಣವಾಗಿದೆ.

ಕೇಶಿರಾಜನ ನಂತರ ಕನ್ನಡದ ಮತ್ತೊಬ್ಬ ವೈಯಾಕರಣಿ ಎಂದರೆ ಭಟ್ಟಾಕಳಂಕ. ಅವನು ಕ್ರಿ. ಶ. ೧೬೦೪ ರಲ್ಲಿ ಸಂಸ್ಕೃತದಲ್ಲಿ ಕರ್ನಾಟಕ ಶಬ್ದಾನುಶಾಸನ ಎಂಬ ಕನ್ನಡ ವ್ಯಾಕರಣವನ್ನು ರಚಿಸಿದ್ದಾನೆ. ಕನ್ನಡದ ಬಗ್ಗೆ ರಚಿತವಾದ ಶ್ರೇಷ್ಠ ವ್ಯಾಕರಣಗಳಲ್ಲಿ ಶಬ್ದಾನುಶಾಸನವು ಒಂದು ಆಗಿದೆ. ದುರದೃಷ್ಟವಶಾತ್ ಇದು ಸಂಸ್ಕೃತದಲ್ಲಿದೆ. ಇದು ಸಂಸ್ಕೃತದ ವ್ಯಾಕರಣ ಮಾದರಿಯನ್ನೇ ಅನುಸರಿಸಿದೆ. ಸೂತ್ರಗಳಿಗೆ ಭಟ್ಟಾಕಳಂಕನೇ ಅರ್ಥವನ್ನು ವಿವರಿಸಿ ಅದನ್ನು ಭಾಷಾಮಂಜರಿ ಎಂಬ ಹೆಸರಿನಿಂದ ಕರೆದಿದ್ದಾನೆ. ಜತೆಗೆ ಮಂಜರಿ ಮಕರಂದ ಎಂಬ ಹೆಸರಿನಿಂದ ಅದಕ್ಕೊಂದು ವ್ಯಾಖ್ಯಾನವನ್ನು ಬರೆದಿದ್ದಾನೆ ಅವನು ಹೊಸಗನ್ನಡದ ಹೊಸ್ತಿಲಲ್ಲಿ ನಿಂತಿದ್ದರೂ ಉದಾಹರಣೆಗಳಿಗೆ ಹಳೆಗನ್ನಡದ ಪ್ರಯೋಗಗಳನ್ನೇ ಆರಿಸಿಕೊಂಡಿದ್ದಾನೆ. ಸಾಂಪ್ರದಾಯಿಕ ವೈಯಾಕರಣಿಗಳೆಲ್ಲ ಹಳಗನ್ನಡವನ್ನು ಲಕ್ಷದಲ್ಲಿಟ್ಟುಕೊಂಡು ವ್ಯಾಕರಣಗಳನ್ನು ರಚಿಸಿದರು.

ಭಾಷೆ ಎಂಬುದು ಹರಿಯುವ ನದಿ ಇದ್ದಂತೆ. ಕಾಲಾನುಕ್ರಮದಲ್ಲಿ ಬದಲಾವಣೆಗೊಳಗಾಗುವಂತಹದ್ದು. ನಾಗವರ್ಮ (ಕ್ರಿ. ಶ. ೧೧೬೨) ಕೇಶಿರಾಜ (ಕ್ರಿ. ಶ. ೧೨೬೮), ಮತ್ತು ಭಟ್ಟಾಕಳಂಕ (ಕ್ರಿ. ಶ. ೧೬೦೪) ವಿವಿಧ ಕಾಲಘಟ್ಟಗಳಲ್ಲಿ ಈ ಹರಿಯುವ ನದಿಗೆ ಒಡ್ಡುಗಳನ್ನು ಕಟ್ಟಲು ಪ್ರಯತ್ನಿಸಿದರು. ಡ್ಯಾಮ್‌ಗಳನ್ನು ನಿರ್ಮಿಸಿ ಕಾಲುವೆಗಳ ಮೂಲಕ ನೀರನ್ನು ಹರಿಸುವಂತೆ ಭಾಷೆಗೆ ನಿಯಮಗಳನ್ನು ವ್ಯಾಕರಣದ ಮೂಲಕ ಪ್ರಯತ್ನಿಸಿದ್ದಾರೆ. ಅದೇನೇ ಇರಲಿ ಅವರಾರೂ ಕೂಡ ಸಂಸ್ಕೃತದ ಮಾದರಿಯನ್ನು ಮೀರಲಿಲ್ಲ.

ಕೇಶಿರಾಜನು ಕನ್ನಡ ಭಾಷೆಗೆ ಸಮಂಜಸವಾದ ಕೆಲವು ನಿಯಮಗಳನ್ನು ರಚಿಸಲು ಸ್ವಲ್ಪಮಟ್ಟಿಗೆ ಪ್ರಯತ್ನಿಸಿದರೂ ಕನ್ನಡಕ್ಕೆ ತನ್ನದೇ ಆದ ಒಂದು ವ್ಯಾಕರಣ ಪರಂಪರೆಯನ್ನು ನಿರ್ಮಿಸಲು ಸಾಧ್ಯವಾಗಲಿಲ್ಲ. ಈಗ ದೊರಕುವ ಕನ್ನಡ ವ್ಯಾಕರಣಗಳೆಲ್ಲ ಸಂಸ್ಕೃತ, ಲ್ಯಾಟಿನ್ ಮತ್ತು ಇಂಗ್ಲೀಶ್ ವ್ಯಾಕರಣಗಳನ್ನೇ ಮಾದರಿಯಾಗಿಟ್ಟುಕೊಂಡಂತಹವುಗಳೇ ಆಗಿವೆ. ಈ ಭಾಷೆಗಳ ನಿಯಮಗಳನ್ನು ಕನ್ನಡಕ್ಕೆ ಅನ್ವಯಿಸಲು ಸಾಧ್ಯವಾಗುವುದಿಲ್ಲ. ಸಂಧಿನಿಯಮಗಳು ವಿವಿಧ ಭಾಷೆಗಳಲ್ಲಿ

ಒಂದೇ ಬಗೆಯಾಗಿಲ್ಲ. ಅಕಾರಾಂತವಾದ ಕನ್ನಡ ಪದಕ್ಕೆ ಅಕಾರಾದಿಯಾದ ಪದವೊಂದು ಪರವಾದರೆ ಅವುಗಳಲ್ಲಿ ಒಂದು ಸ್ವರ ಲೋಪವಾಗುತ್ತದೆ.

ಉದಾ : ನನ್ನ+ಅವ್ವ=ನನ್ನವ್ವ, ಬಂದ+ಅಲ್ಲಿ=ಬಂದಲ್ಲಿ

ಆದರೆ ಸಂಸ್ಕೃತದಲ್ಲಿ ಅಕಾರಾಂತವಾದ ಪದದ ಮುಂದೆ ಅಕರಾದಿಯಾದ ಪದ ಬಂದರೆ ಒಂದು ಅಕಾರ ಲೋಪವಾಗುವುದರ ಬದಲು ಆ ಸ್ವರವು ದೀರ್ಘವಾಗುತ್ತದೆ.

ಉದಾ : ಪದ+ಅರ್ಥ=ಪದಾರ್ಥ

ಮುಖ್ಯ+ಅಧಿಕಾರಿ=ಮುಖ್ಯಾಧಿಕಾರಿ

ಕನ್ನಡದಲ್ಲಿ ಉ ಆದನಂತರ ಅಕಾರ ಬಂದರೆ, ಉ ಲೋಪವಾಗುತ್ತದೆ.

ಉದಾ : ಬೆನ್ನು+ಅಟ್ಟು=ಬೆನ್ನಟ್ಟು

ಕಪ್ಪು+ಅಲ್ಲ=ಕಪ್ಪಲ್ಲ

ಸಂಸ್ಕೃತದಲ್ಲಾದರೋ ಉ ಬದಲು ವ್ ಬರುತ್ತದೆ.

ಉದಾ : ಮನು+ಅಂತರ=ಮನ್ವಂತರ

ಇಂತಹ ಹಲವಾರು ವ್ಯತ್ಯಾಸಗಳು ಕನ್ನಡ ಮತ್ತು ಸಂಸ್ಕೃತದ ನಡುವೆ ಇವೆ. ವಿಶೇಷಣಗಳ ವಿಷಯಕ್ಕೆ ಬಂದರೆ, ಸಂಸ್ಕೃತದಲ್ಲಿ ವಿಶೇಷಣವನ್ನು ನಾಮಪದದ ಹಿಂದಾಗಲಿ ಅನಂತರವಾಗಲಿ ಬಳಸಬಹುದು. ಆದರೆ ಕನ್ನಡದಲ್ಲಿ ವಿಶೇಷಣವು ನಾಮಪದದ ಹಿಂದೆ ಮಾತ್ರ ಬರುತ್ತದೆ.

ನಾಮಪದದ ನಂತರ ಬಂದರೆ ಅದು ಒಂದು ವಾಕ್ಯವೇ ಆಗಿಬಿಡುತ್ತದೆ.

ಉದಾ : ಸಂಸ್ಕೃತದಲ್ಲಿ – ಕೃಷ: ಸರ್ಪ:

ಸರ್ಪ: ಕೃಷ್ಣ:

ಈ ಎರಡು ಸಂದರ್ಭದಲ್ಲಿ ಅರ್ಥವು ಒಂದೇ. ಕನ್ನಡದಲ್ಲಾದರೆ :

ಕಪ್ಪು ಹಾವು – ಒಂದು ಪದ ಸಮುಚ್ಚಯ

### ಹಾವು ಕಪ್ಪು – ಇದು ಒಂದು ವಾಕ್ಯ

ಇದುವರೆಗೆ ಹೇಳಿದ್ದು ಹಳೆಯ ವಯಾಕರಣಿಗಳ ಮನೋಭಾವಕ್ಕೆ ಸಂಬಂಧಿಸಿದ್ದು. ಸಂಸ್ಕೃತ ನಿಯಮಗಳು ಕನ್ನಡಕ್ಕೆ ಅನ್ವಯಿಸದಿದ್ದರೂ ಅವರು ಅವುಗಳನ್ನು ಬಲವಂತದಿಂದ ಅನ್ವಯಿಸಿದರು. ಆದರೆ ಯುರೋಪಿಯನ್ನರ ಆಗಮನದ ನಂತರ ಕನ್ನಡವು ಬೇರೊಂದು ಹಾದಿಯನ್ನು ಹಿಡಿಯಿತು.

ಕರ್ನಾಟಕಕ್ಕೆ ಆಗಮಿಸಿದ ಮಿಷನರಿಗಳೆಲ್ಲರೂ ಕನ್ನಡವನ್ನು ಸುಲಭವಾಗಿ ಕಲಿಯಬೇಕಾದ ವ್ಯಾಕರಣಗಳನ್ನು ರಚಿಸಿದ್ದಾರೆ. ಅಂತಹ ಪ್ರಮುಖ ವ್ಯಾಕರಣಕಾರರಲ್ಲಿ ಕೆಲವರೆಂದರೆ ಕಿಟಲ್, ಬಿ. ಎಲ್. ರೈಸ್, ಕಾಲ್ಡ್‌ವೆಲ್, ವಿಲಿಯಂ ಕ್ಯಾರಿ, ಕಾಲಿಂ ಮೆಕೆನ್ಸಿ, ಹರ್ಮನ್ ಮೊಗ್ಲಿಂಗ್, ಜಿ. ಗ್ಲಾರ್ ಇವರು ರಚಿಸಿದ ವ್ಯಾಕರಣಗಳು ಇಂಗ್ಲೀಷ್ ವ್ಯಾಕರಣಗಳನ್ನು ಪ್ರತಿಬಿಂಬಿಸುತ್ತವೆ.

ಕೆಲವು ಯುರೋಪಿಯನ್ ಭಾಷೆಗಳು ಕರ್ತೃಪದ, ನೇರ ಕರ್ತೃಪದ ಮತ್ತು ಪರೋಕ್ಷ ಕರ್ತೃ ಪದ ಎಂಬ ನಿಯಮವನ್ನು ಹೋಲುವಂತಹದ್ದು. ಕನ್ನಡದ ವಿಭಕ್ತಿ ಪ್ರತ್ಯಯಗಳು ಅವು ಸೂಚಿಸುವ ಅರ್ಥಾನುಸಾರಿಯಾಗಿರುತ್ತವೆ. ಒಂದು ನಾಮಪದವನ್ನು ದ್ವಿತೀಯ ವಿಭಕ್ತಿ ಪ್ರತ್ಯಯದೊಂದಿಗೆ ಬಳಸಬೇಕಾದರೆ ಅದು ಕ್ರಿಯಾಪದವು ಸೂಚಿಸುವ ಕ್ರಿಯೆಯ ಪರಿಣಾಮವನ್ನು ಪಡೆದಿರಬೇಕು. ಹಾಗೆಯೇ ನಾಮಪದದ ಮೇಲೆ ಸಪ್ತಮಿ ವಿಭಕ್ತಿಯ ಪ್ರತ್ಯಯವನ್ನು ಸೇರಿಸಿದಾಗ ಅದು ಸ್ಥಳವನ್ನು ಸೂಚಿಸುವಂತಿರಬೇಕು. ಇವು ಕನ್ನಡಕ್ಕೆ ಅನ್ವಯಿಸುವ ನಿಯಮಗಳು.

ಆದರೆ ಇಂತಹ ನಿಯಮಗಳು ಇಂಗ್ಲೀಷಿನಲ್ಲಿ ಇಲ್ಲ.

ಉದಾಹರಣೆಗೆ :

ಹುಡುಗ ಮುದುಕನನ್ನು ದೂಕಿದ

ಮುದುಕನನ್ನು ಹುಡುಗ ದೂಡಿದ

ಈ ಎರಡೂ ವಾಕ್ಯಗಳಲ್ಲಿನ ವ್ಯತ್ಯಾಸವೆಂದರೆ, ಮೊದಲನೆಯ ವಾಕ್ಯದಲ್ಲಿ ನಾವು ಹೇಳುತ್ತಿರುವುದು ಹುಡುಗನನ್ನು ಕುರಿತು. ಎರಡನೆಯ ವಾಕ್ಯದಲ್ಲಿ ನಾವು ಮುದುಕನನ್ನು ಕುರಿತು ಹೇಳುತ್ತಿರುತ್ತೇವೆ.

ಇಂಗ್ಲೀಷಿನಲ್ಲಿ ಕತೃಪದದ ಸ್ಥಾನವನ್ನು ಬದಲಿಸಿದರೆ ಕ್ರಿಯಾಪದದ ಸ್ಥಾನವನ್ನು ಬದಲಿಸಬೇಕಾಗುತ್ತದೆ. ಆದರೆ ಕನ್ನಡದಲ್ಲಿ ಇದು ಅವಶ್ಯಕವಲ್ಲ. ಕನ್ನಡದಲ್ಲಿ ನಾಮಪದದ ಸ್ಥಾನವು ಮಾತ್ರ ಬದಲಾಗುತ್ತದೆ.

ಉದಾ : ಹುಡುಗ ಮುದುಕನನ್ನು ದೂಡಿದ

ಮುದುಕನನ್ನು ಹುಡುಗ ದೂಡಿದ

ಇಂತಹ ವಾಕ್ಯಗಳನ್ನು ರಚಿಸಲು ಇಂಗ್ಲೀಶಿನಲ್ಲಿ ಕರ್ತರಿ ಮತ್ತು ಕರ್ಮಣಿ ಪ್ರಯೋಗಬೇಕು. ಕನ್ನಡ ವ್ಯಾಕರಣವನ್ನು ಬರೆದವರು. ಅದಕ್ಕೆ ಸ್ವಂತ ವ್ಯಾಕರಣ ಪರಂಪರೆಯನ್ನು ನಿರ್ಮಿಸಲು ಪ್ರಯತ್ನ ನಡೆದಿದೆ. ಬೇರೊಂದು ಭಾಷೆಯ ನಿಯಮಗಳನ್ನು ಕನ್ನಡಕ್ಕೆ ಅನ್ವಯಿಸ ಹೊರಟದ್ದು ಅಚ್ಚರಿಯ ಸಂಗತಿಯೇ ಸರಿ. ಖ್ಯಾತ ಭಾಷಾವಿಜ್ಞಾನಿಗಳಾದ ಡಾ. ಡಿ. ಎನ್. ಶಂಕರಭಟ್ಟರು ಈ ನ್ಯೂನ್ಯತೆಯನ್ನು "ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ" ಕೃತಿಯಲ್ಲಿ ಎತ್ತಿ ತೋರಿಸಿದ್ದಾರೆ. ಪ್ರೊ. ಬಿ. ಎಂ. ಶ್ರೀಕಂಠಯ್ಯ, ಪ್ರೊ. ತೀ. ನಂ. ಶ್ರೀ, ಪ್ರೊ. ಆರ್. ನರಸಿಂಹಾಚಾರ್, ಪ್ರೊ. ಡಿ. ಎಲ್. ಎನ್., ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ, ಪ್ರೊ. ಬಿ. ಕೃಷ್ಣಪ್ಪ, ಪ್ರೊ. ಟಿ. ಎಸ್. ವೆಂಕಣ್ಣಯ್ಯ ಮುಂತಾದವರು ಕನ್ನಡ ವ್ಯಾಕರಣಗಳನ್ನು ರಚಿಸಿದ್ದಾರೆ. ಆದರೆ ಅವರಾರೂ ಶಬ್ದಮಣಿದರ್ಪಣದಂತಹ ಸಂಪ್ರದಾಯ ಶರಣ ವ್ಯಾಕರಣ ಕಟ್ಟನ್ನು ಮೀರಿಲ್ಲ. ಒಂದು ರೀತಿಯಲ್ಲಿ ಅದೇ ವಿಷಯವನ್ನು ಸರಳ ಗದ್ಯದಲ್ಲಿ ನಿರೂಪಿಸಿದರು ಅಷ್ಟೇ. ವ್ಯಾಕರಣದ ಅಧ್ಯಯನವೆಂದರೆ ಅಮೂಲ್ಯ ಭಂಡಾರವನ್ನು ಹುದುಗಿಸಿಕೊಂಡ ಗಣಿಯ ಹಾಗೆ. ಅದು ಸಮುದ್ರದಂತೆಯೇ ಅನೇಕ ರಹಸ್ಯಗಳನ್ನು ಬಚ್ಚಿಟ್ಟುಕೊಂಡಿರುತ್ತದೆ. ಅದನ್ನು ಅನ್ವೇಷಿಸಿದಂತೆಲ್ಲ, ನಮಗೆ ಹೊಸ ವಿಷಯಗಳು ಹೊಳೆಯುತ್ತವೆ. ಸಾಂಪ್ರದಾಯಿಕತೆಯ ನಿರ್ಭಯವನ್ನು ಮೀರಿ ಇತ್ತೀಚೆಗೆ ನಡೆದ ಸಂಶೋಧನೆ ಮತ್ತು ವ್ಯಾಖ್ಯಾನಗಳ ಕಡೆ ಗಮನ ಹರಿಸಿದರೆ ನಾವು ನಮ್ಮದೇ ವ್ಯಾಕರಣ ಸಂಪ್ರದಾಯವನ್ನು ಸೃಷ್ಟಿಸಬಹುದು.

**ಅಧ್ಯಾಯ : ೫.೨**

**ಭಾಷಾಶಾಸ್ತ್ರ/ವಿಜ್ಞಾನ ಮಾದರಿ ಅಧ್ಯಯನ**

ಭಾಷಾಶಾಸ್ತ್ರ ಮತ್ತು ಭಾಷಾವಿಜ್ಞಾನ ಎಂಬ ಈ ಎರಡು ಪದಗಳು ಬಳಕೆಯಲ್ಲಿ ಇವೆ. 'ವಿಜ್ಞಾನ' ಎನ್ನುವ ಪದ 'ಶಾಸ್ತ್ರ' ಪದದಷ್ಟು ಹಿಂದಿನಿಂದ

ಬಳಕೆಗೊಂಡಂತೆ ಕಾಣುವುದಿಲ್ಲ. ಅಥವಾ ಶಾಸ್ತ್ರ ಪದವು ಪ್ರಾಚೀನ ಕಾಲದಿಂದಲೂ ಸಾಕಷ್ಟು ಬಳಕೆಗಿರುವ ಪದ. ಜ್ಯೋತಿಷ್ಯಶಾಸ್ತ್ರ, ತರ್ಕಶಾಸ್ತ್ರ, ಧರ್ಮಶಸ್ತ್ರ, ಯೋಗಶಾಸ್ತ್ರ, ಅಲಂಕಾರಶಾಸ್ತ್ರ, ಛಂದಸ್‌ಶಾಸ್ತ್ರ, ಅರ್ಥಶಾಸ್ತ್ರ, ಪಾಕಶಾಸ್ತ್ರ, ಅಶ್ವಶಾಸ್ತ್ರ, ಕಾಮಶಾಸ್ತ್ರ ಮುಂತಾಗಿ ಈ ನೆಲೆಯ ಬೇರುಗಳ ಮೂಲಕವೇ ಬೆಳೆದ ಜ್ಞಾನದ ಭಾಗವಾಗಿ ಭಾಷಾಶಾಸ್ತ್ರವನ್ನು ಶಬ್ದಶಾಸ್ತ್ರವೆಂತಲೂ ಕಂಡದ್ದು ಇದೆ. ಶಾಸ್ತ್ರ, ಶಾಸ್ತ್ರೀ, ಶಾಸ್ತ್ರೀಯ – ಒಂದು ಬಗೆಯ ಸಾಂಪ್ರದಾಯಿಕ ಶಿಸ್ತು ಆಗಿ ಬೆಳೆದುಕೊಂಡದ್ದು ಇದೆ. ಮುಂದುವರೆದು ಸಮಾಜಶಾಸ್ತ್ರ, ವಾಣಿಜ್ಯಶಾಸ್ತ್ರ, ಗಣಿತಶಾಸ್ತ್ರ ಮುಂತಾಗಿ ಆಧುನಿಕ ಕಾಲದ ಸೀಳು ದಾರಿಗಳನ್ನು ಹೆಸರಿಸಿದ್ದು ಇದೆ. ಯಾಕೆಂದರೆ ಅನಂತರ ಇವು ಸಮಾಜವಿಜ್ಞಾನ, ವಾಣಿಜ್ಯವಿಜ್ಞಾನ, ಗಣಿತವಿಜ್ಞಾನ ಎಂತಲೂ ಹೇಳುವುದರಲ್ಲಿ ಅಥವಾ ನೋಡುವುದರಲ್ಲಿ ಹೆಚ್ಚು ಆಸಕ್ತಿ ಮೂಡಿ ವಿಜ್ಞಾನದ ಮಡಿಲಿಗೆ ವರ್ಗಾವಣೆಗೊಂಡಿವೆ. ಹೀಗಾಗಿಯೇ ಶಾಸ್ತ್ರೀಯ ಅಧ್ಯಯನವನ್ನು ಗುರುತಿಸಲು ಶಾಸ್ತ್ರೀಯ ಪದದ ಬಳಕೆಯನ್ನು ಬಳಸಲ್ಪಟ್ಟಿದೆ.

ಜ್ಞಾನ ತಂತ್ರಜ್ಞಾನಗಳು ವಿಸ್ತರಿಸುತ್ತ ಮನುಷ್ಯನ ತಿಳುವಳಿಕೆಯ ಕ್ಷಿತಿಜವೂ ವಿಸ್ತರಿಸುತ್ತಿರುವ ಫಲಿತವಾಗಿ ವಿಜ್ಞಾನದ ಕೊಡುಗೆ ಅಥವಾ ತಿಳುವಳಿಕೆ ಪ್ರಮುಖವಾಗಿದೆ. ಇದು ಶಾಸ್ತ್ರಕ್ಕಿಂತಲೂ ವಿಭಿನ್ನವಾಗಿ ಆಲೋಚಿಸುವುದು ಮತ್ತು ವೈಜ್ಞಾನಿಕವಾದದ್ದು ಎಂಬ ತಿಳುವಳಿಕೆಯು ಬಲವಾದದ್ದಾಗಿದೆ. ಪ್ರಾಯೋಗಿಕ ನೆಲೆಯ ವಿಜ್ಞಾನವೂ ವೈಜ್ಞಾನಿಕತೆಯ ದೃಷ್ಟಿಯನ್ನು ತಾನು ಹೊಂದಿರುವಂತೆ ಕಾಣಬಯಸುವವರನ್ನೂ ಅಂತಹದ್ದೇ ದೃಷ್ಟಿಯನ್ನು ಧರಿಸುವಂತೆ ಬಯಸುವುದಾಗಿದೆ. ಖಗೋಳವಿಜ್ಞಾನ, ವೈದ್ಯಕೀಯ ವಿಜ್ಞಾನ, ಭೂಗೋಳವಿಜ್ಞಾನ, ಔಷಧೀಯ ವಿಜ್ಞಾನ, ತಂತ್ರಜ್ಞಾನ ಇತ್ಯಾದಿಗಳು ಪ್ರಮುಖವಾಗಿವೆ. ಇವೆಲ್ಲವನ್ನು ವೈಜ್ಞಾನಿಕತೆಯ ಕಾಂಡವೆಂದು ತಿಳಿಯಲಾಗುತ್ತದೆ. ಈ ಮೊದಲು ಈ ಜ್ಞಾನಗಳು ಇರಲಿಲ್ಲವೆಂತಲ್ಲ, ಇದ್ದರೂ ಅವುಗಳನ್ನು ಶಾಸ್ತ್ರೀಯ ಪರಿಧಿಯಾಚೆ ನೋಡಲಾಗುತ್ತಿರಲಿಲ್ಲ. ಇವೆಲ್ಲವೂ ವೈಜ್ಞಾನಿಕ ದೃಷ್ಟಿ ಅಥವಾ ಆವಿಷ್ಕಾರ ಜ್ಞಾನವನ್ನು ಹೊಂದಿರುವವು ಎಂಬ ತಿಳುವಳಿಕೆ ಇದೆ. ಹೀಗಾಗಿಯೇ ಈ ಮೊದಲು ಶಾಸ್ತ್ರವೆಂದು ಕರೆಯಲ್ಪಡುತ್ತಿದ್ದವೂ ಸಹ ವಿಜ್ಞಾನ ಎಂದು ಕರೆಯಿಸಿಕೊಳ್ಳುವ ಆಸಕ್ತಿಯನ್ನು ತಳೆದಿವೆ.

ಭಾಷಾವಿಜ್ಞಾನವು ವ್ಯಾಕರಣ, ಭಾಷಾಶಾಸ್ತ್ರ, ಭಾಷಾವಿಜ್ಞಾನ ಎಂತೆಲ್ಲ ಬೆಳೆದು ಬಂದಿರುವುದು ಅಥವಾ ಹಾಗೆ ಕರೆದದ್ದನ್ನು ನೋಡುತ್ತೇವೆ. ಹೀಗೆ ಕರೆಯುವುದು ಕೇವಲ ಆಸಕ್ತಿಯೋ ಅಥವಾ ಮತ್ತೇನಾದರು ಪಲ್ಲಟಗಳು ಇವೆಯೋ ಎಂಬುದನ್ನು ಚರ್ಚಿಸಬಹುದೆಂದು ಕಾಣುತ್ತದೆ.

ಭಾಷಾಶಾಸ್ತ್ರ ಎಂದು ಕರೆಸಿಕೊಂಡು ನಡೆದ ಭಾಷಾಧ್ಯಯನದಲ್ಲಿ ಸಾಮಾನ್ಯವಾಗಿ ಶಿಲಾ ಶಾಸನಗಳು, ಸಾಹಿತ್ಯ ಗ್ರಂಥಗಳು, ತಾಮ್ರ ಪತ್ರಗಳು ಮುಂತಾದ ಲಿಖಿತ ನೆಲೆಯ ಭಾಷೆಯನ್ನು ಕುರಿತು, ಒಂದು ನಿಯಮಾತ್ಮಕತೆಯನ್ನು ಅಥವಾ ದೃಷ್ಟಿಯನ್ನು ರೂಪಿಸಿಕೊಂಡು ಅಧ್ಯಯನಕ್ಕೆ ತೊಡಗಿರುವುದನ್ನು ನೋಡುತ್ತೇವೆ. ಆದರೆ ಭಾಷಾ ವಿಜ್ಞಾನದಲ್ಲಿ ಬರಹ ಮತ್ತು ಆಡುಭಾಷೆ ಎರಡನ್ನೂ ತನ್ನ ವ್ಯಾಪ್ತಿಗೆ ತೆಗೆದುಕೊಂಡು ವಿಶ್ಲೇಷಣೆ ನಡೆಸಿರುವುದನ್ನು ಕಾಣುತ್ತೇವೆ. ಭಾಷೆಯನ್ನು ಕುರಿತ ಅಧ್ಯಯನವೆಂದರೆ ಬರಹವೇ ಆಗಿತ್ತು ಅಥವಾ ಅಲ್ಪಸ್ವಲ್ಪ ಆಡುಭಾಷೆಯನ್ನು ಗಮನಿಸಿದರೂ, ಆಡುಭಾಷೆ ಒಂದು ಭಾಷೆಯ ಜೀವಾಳವೆಂದು ತಿಳಿದು ಅಧ್ಯಯನಮಾಡಿದ್ದು ಇಲ್ಲ. ಕವಿರಾಜಮಾರ್ಗ, ಶಬ್ದಮಣಿದರ್ಪಣದಂತಹ ವ್ಯಾಕರಣಗಳು ಆಡುಭಾಷೆಯನ್ನು ಗಮನಿಸಿದ್ದಾವೆ ಎಂದರೂ ಅವು ತಾನು ಈಗಾಗಲೇ ರೂಪಿಸಿಕೊಂಡ ನಿಯಮಗಳನ್ನು ಬಿಟ್ಟು ಕದಲಿದ್ದು ಇಲ್ಲ. ಆ ನಿಯಮಗಳಿಗೆ ಪುಷ್ಟಿ ನೀಡುವುದಕ್ಕಾಗಿ ಅಥವಾ ಮತ್ತಷ್ಟು ನಿಯಮಗಳನ್ನು ಹೆಣೆಯುವುದಕ್ಕಾಗಿ ಮೊರೆಹೋದಂತೆ ಇದೆ. ಹೀಗಾಗಿ ಬರಹ ಭಾಷೆಯನ್ನು ಗಮನಿಸುತ್ತ, ಈಗಾಗಲೇ ನಡೆದು ಬಂದ ಅಧ್ಯಯನದ ಶಾಸ್ತ್ರೀಯ ಮಾರ್ಗವನ್ನು ಪರಾಮರ್ಶಿಸುತ್ತ ತಳೆದ ವಿಜ್ಞಾನ ಮಾದರಿಯ ಬರಹ ಮತ್ತು ಜನಬಳಕೆಯ ಭಾಷೆಯ ಪ್ರಮುಖವಾಗಿ ಸ್ವೀಕರಿಸಿತು. ಆಡು ಭಾಷೆಗಳನ್ನು ಬಿಟ್ಟು ಬರಹದಲ್ಲಿ ದೊರೆಯುವ ಭಾಷೆಗಳನ್ನು ಮಾತ್ರ ವಿವೇಚಿಸುವುದರಿಂದ ಅಂತಹ ಭಾಷೆಗಳ ಅಧ್ಯಯನ ವೈಜ್ಞಾನಿಕವಾಗಿ ಪೂರ್ಣವೆನಿಸಿಕೊಳ್ಳುವುದಿಲ್ಲ ಎಂಬ ಸತ್ಯವನ್ನು ಭಾಷಾ ವಿಜ್ಞಾನಿಗಳು ತಿಳಿಯಪಡಿಸಿದರು. ಹಾಗಾಗಿ ಶಾಸ್ತ್ರಕ್ಕಿಂತ ವೈಜ್ಞಾನಿಕ ಅಧ್ಯಯನದ ದೃಷ್ಟಿ ಹೆಚ್ಚು ಸಮಗ್ರ ಹಾಗೂ ಸಮರ್ಪಕವಾದುದಾಗಿ ಕಾಣಿಸಿಕೊಂಡಿತು. ಒಟ್ಟಾರೆಯಾಗಿ ಭಾಷಾ ವಿಜ್ಞಾನದ ದೃಷ್ಟಿ ಭಾಷೆಯ ಅಧ್ಯಯನದಲ್ಲಿ ವ್ಯಾಪಕವಾಗಿಯೂ ಭಾಷಾವಿಜ್ಞಾನದ ದೃಷ್ಟಿ ಸಂಕುಚಿತವಾಗಿಯೂ ತೋರ್ಪಟ್ಟಿತು. ಹೀಗಾಗಿ ಭಾಷಾಶಾಸ್ತ್ರದ ಒಳಗಿನಿಂದಲೇ ಜನಿಸಿ ಕ್ರಮಿಸಿ ಬಂದ ಭಾಷಾವಿಜ್ಞಾನ ಎರಡರ ಮಧ್ಯ ಸಾಕಷ್ಟು ವ್ಯತ್ಯಾಸವನ್ನು ಮೂಡಿಸಿದೆ.

ಅಧ್ಯಯನದಲ್ಲಿ ಕಾಣಿಸಿಕೊಂಡ ವ್ಯತ್ಯಾಸಗಳು ನಿಜಕ್ಕೂ ಅಗಾಧವಾದ ಕಂದಕವನ್ನು ಸೃಷ್ಟಿಸಿದವೇ ಅಥವಾ ಭಾಷಾಶಾಸ್ತ್ರ ಮತ್ತು ಭಾಷಾವಿಜ್ಞಾನ ಒಂದು ಟೊಂಗೆಯ ಎರಡು ಹೂವುಗಳಷ್ಟೇ, ಚಿಗುರು ಆದವೇ ಎಂಬುದು ಇಲ್ಲಿ ಮುಖ್ಯವಾದ ಪ್ರಶ್ನೆ.

"ಇಂಗ್ಲೆಂಡ್ ಮುಂತಾದ ಯುರೋಪಿನ ಬೇರೆ ಬೇರೆ ದೇಶಗಳ ವಿದ್ವಾಂಸರು ಭಾಷೆಯ ಶಾಸ್ತ್ರೀಯ ಅಧ್ಯಯನವನ್ನು ಆಗಿನ ಕಾಲದಲ್ಲಿ Philology ಎಂದು ಹೆಸರಿಸಿಕೊಂಡರೆ, ಅಮೇರಿಕದ ಬೇರೆ ಬೇರೆ ವಿದ್ವಾಂಸರು ಭಾಷೆಯ ವೈಜ್ಞಾನಿಕ ಅಧ್ಯಯನವನ್ನು Linguistics ಎಂದು ಹೆಸರಿಸಿಕೊಂಡರು. ವಾಸ್ತವವಾಗಿ Philology ಎಂಬ ಶಬ್ದ ಭಾಷೆಯ ಅಧ್ಯಯನ ಎಂಬರ್ಥದಲ್ಲಿ ೧೩೮೬ರಲ್ಲಿಯೇ ಬಳಕೆಗೆ ಬಂದಿತಾದರೂ ಇದು ೧೬ನೇ ಶತಮಾನದ ಹೊತ್ತಿಗೆ ಹೆಚ್ಚು ಪ್ರಚಾರಕ್ಕೆ ಬಂದಿತು. ಹಾಗಾಗಿಯೇ Linguistics ಎಂಬ ಶಬ್ದ ಭಾಷೆಯ ವೈಜ್ಞಾನಿಕ ಅಧ್ಯಯನ ಎಂಬರ್ಥದಲ್ಲಿ ೧೮ನೇ ಶತಮಾನದ ಮಧ್ಯಭಾಗದಲ್ಲಿಯೇ ಬಳಕೆಗೆ ಬಂದಿತಾದರೂ ಇದು ೧೯ನೇ ಶತಮಾನದ ಅಂತ್ಯದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಿತು. ಈ ಎರಡು ಶಬ್ದಗಳು ಭಾಷೆಯ ಅಧ್ಯಯನ ಎಂಬರ್ಥದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬಳಕೆಗೆ ಬಂದುದರಿಂದ ಅವುಗಳ ಅಧ್ಯಯನದ ದೃಷ್ಟಿಯೂ ಬೇರೆ ಬೇರೆಯಾಗಿ ಕಾಣಿಸಿಕೊಳ್ಳಲು ಕಾರಣವಾಗಿದೆ.

ಮೊದ ಮೊದಲು ಜಗತ್ತಿನಾದ್ಯಂತ ಬೇರೆ ಬೇರೆ ವಿದ್ವಾಂಸರು ಪ್ರಾಚೀನ ಭಾಷೆಗಳ ತೌಲನಿಕ ಅಧ್ಯಯನವನ್ನು ಅವುಗಳ ಇತಿಹಾಸವನ್ನು ತಿಳಿಯಲು ಮುಂದುವರಿಸುತ್ತಿದ್ದರು. ಇಂತಹ ಭಾಷೆಗಳ ಶಾಸ್ತ್ರೀಯ ಅಧ್ಯಯನ ಭಾಷಾಶಾಸ್ತ್ರವಾಗಿ ಉಳಿಯಬೇಕಾಯಿತು. ಅಮೆರಿಕ ಮುಂತಾದ ದೇಶಗಳಲ್ಲಿಯೂ ಕನ್ನಡ ಸಾಹಿತ್ಯ ಗ್ರಂಥಗಳ, ಶಿಲಾಶಾಸನಗಳ, ತಾಮ್ರಪತ್ರಗಳಲ್ಲಿ ದೊರೆಯುವ ಭಾಷೆಯನ್ನು ಶಾಸ್ತ್ರೀಯವಾಗಿ ವಿವೇಚಿಸುವುದನ್ನು ಬಹಳ ಕಾಲದವರೆಗೆ ಭಾಷಾಶಾಸ್ತ್ರ ಎಂದೇ ಕರೆಯಲಾಗುತ್ತಿದ್ದಿತು. ಅನಂತರ ಬೇರೆ ಬೇರೆ ದೇಶಗಳ ವಿದ್ವಾಂಸರು ಭಾಷಾವಿಜ್ಞಾನ ಎಂಬ ಶಬ್ದವನ್ನು ಭಾಷಾಶಾಸ್ತ್ರದ ಸ್ಥಾನದಲ್ಲಿ ಸಮರ್ಥಕವಾಗಿ ಬಳಸತೊಡಗಿದರು. ಭಾಷಾವಿಜ್ಞಾನದಲ್ಲಿ ಪ್ರಾಚೀನ ಹಾಗೂ ಪ್ರಚಲಿತ ಭಾಷೆಗಳ ಅಧ್ಯಯನವು ಐತಿಹಾಸಿಕವಾಗಿಯೂ, ವಿವರಣಾತ್ಮಕವಾಗಿಯೂ ನಡೆಯುತ್ತಾ ಬಂದಂತೆಲ್ಲಾ ಇವುಗಳಿಗಿರುವ ಅಂತರ ದಿನೇ ದಿನೇ ಕಡಿಮೆಯಾಗುತ್ತಾ ಬಂದಿತು. ಅನಂತರ ಭಾಷಾಶಾಸ್ತ್ರವನ್ನು ಭಾಷಾವಿಜ್ಞಾನದ ಪ್ರಮುಖ ಅಂಗವನ್ನಾಗಿ ರೂಪಿಸಿಕೊಳ್ಳುವ ಮಟ್ಟಕ್ಕೆ ಇದು ಮುದುವರೆಯಿತು[೪]." ಹೀಗಾಗಿ ಅನಂತರ ಭಾಷಾವಿಜ್ಞಾನವೇ ತನ್ನ ವ್ಯಾಪ್ತಿಯ ಒಳಗೆ ತೆಗೆದುಕೊಂಡಿತು. ಐತಿಹಾಸಿಕ ಭಾಷಾವಿಜ್ಞಾನ, ಭಾಷಾವಿಜ್ಞಾನದ ಮುಖ್ಯ ವಿಭಾಗಗಳಲ್ಲಿ ಒಂದು ಆಗಿದೆ. ಆ ಐತಿಹಾಸಿಕ ಭಾಷಾವಿಜ್ಞಾನವು ಭಾಷಾಶಾಸ್ತ್ರದ ಕಾರ್ಯವನ್ನು ನಿರ್ವಹಿಸುತ್ತದೆ. ಅಂದರೆ ಪ್ರಾಚೀನ ಶಾಸನಗಳನ್ನು ಬರಹ ಮುಂತಾದವನ್ನೂ ಅಧ್ಯಯನಮಾಡುವ ಒಂದು ಭಾಗವಾಗಿದೆ. ಹಾಗಾಗಿ ಈ

ಎರಡು ಕ್ಷೇತ್ರಗಳನ್ನು ಪ್ರತ್ಯೇಕತೆಗಿಂತ ಭಾಷಾವಿಜ್ಞಾನದ ಒಳಗೆ ಗುರುತಿಸುವುದರಿಂದ ಭಾಷಾವಿಜ್ಞಾನವೇ ಆಗಿದೆ.

ಭಾಷಾವಿಜ್ಞಾನದ ಪರಂಪರೆಯು ನಡೆದು ಬಂದ ದಾರಿಯ ಸೀಮೆಯ ಕಲ್ಲುಗಳಂತೆ ಬಳಸಲ್ಪಟ್ಟ ಹೆಸರುಗಳನ್ನು ಗಮನಿಸಿದರೂ ಈ ಮಾತು ಸ್ಪಷ್ಟ. ಶಬ್ದಶಾಸ್ತ್ರ, ವ್ಯಾಕರಣ, ತೌಲನಿಕ ವ್ಯಾಕರಣ, ತೌಲನಿಕ ಭಾಷಾಶಾಸ್ತ್ರ, ಐತಿಹಾಸಿಕ ವ್ಯಾಕರಣ, ಐತಿಹಾಸಿಕ ಭಾಷಾಶಾಸ್ತ್ರ/ವಿಜ್ಞಾನ, ಭಾಷಾಧ್ಯಯನ ಮುಂತಾಗಿ ಬೆಳೆದು ಬಂದುದು ಇದೆ. ಇವುಗಳಲ್ಲಿ ವ್ಯಾಕರಣ, ಭಾಷಾಶಾಸ್ತ್ರ, ಭಾಷಾವಿಜ್ಞಾನ ಪದಗಳು ವ್ಯಾಪಕ ಬಳಕೆಯಲ್ಲಿ ಇವೆ. ಇವತ್ತು ಭಾಷಾಧ್ಯಯನ ಪದರದತ್ತಲೂ ಚಲನೆಯನ್ನು ಹೊರಟಂತೆ ಕಾಣುತ್ತದೆ. ಸಾಮಾನ್ಯ ಭಾಷಾವಿಜ್ಞಾನ, ವಿವರಣಾತ್ಮಕ ಭಾಷಾವಿಜ್ಞಾನ, ಐತಿಹಾಸಿಕ ಭಾಷಾವಿಜ್ಞಾನ, ತೌಲನಿಕ ಭಾಷಾವಿಜ್ಞಾನ, ಧ್ವನಿ ವಿಜ್ಞಾನ, ಧ್ವನಿಮಾ ವಿಜ್ಞಾನ, ಆಕೃತಿಮಾ ವಿಜ್ಞಾನ, ವಾಕ್ಯ ವಿಜ್ಞಾನ, ಅರ್ಥ ವಿಜ್ಞಾನ, ಅನ್ವಯಿಕ ಭಾಷಾವಿಜ್ಞಾನ ಮುಂತಾದ ಕ್ಷೇತ್ರಗಳು ಹೆಚ್ಚು ಚಾಲ್ತಿಗೆ ಬಂದಿವೆ. ಇವೆಲ್ಲವೂ ಸಹ ಒಂದು ನೆಲೆಯನ್ನು ಸಿದ್ಧಾಂತವನ್ನು ರೂಪಿಸಿಕೊಂಡಿವೆ. ಆ ರೂಪಿತ ಮಾದರಿಯೂ ಒಂದು ಬಗೆಯಲ್ಲಿ ಸಂಕೋಲೆಯೇ ಆದಂತೆ ಧ್ವನಿಸಿ ಅಥವಾ ಮಿತಿಯ ಮತ್ತೊಂದು ಮಾರ್ಗವೇ ಆಗಿರುವುದರಿಂದ ಇವತ್ತು ಅವುಗಳ ಸಾರವನ್ನು ಹೀರಿಕೊಂಡು ಮತ್ತೊಂದು ಹೊರಳು ದಾರಿಯಲ್ಲಿ ಬೆಳಕಿನೊಂದಿಗೆ ನಡೆದಿದ್ದಾರೆ. ಅದು ಆಯಾ ಭಾಷೆಯ ಅಂತಸ್ಥ ಜಗತ್ತಿನ ಮೂಲಕವೇ ಅದರ ಸ್ವರೂಪವನ್ನು ಅರಿಯುವುದು. ಮುದ್ರಣ ಯಂತ್ರ ಮತ್ತು ಪ್ರಚಾರ ಕಾರ್ಯಗಳು ಪ್ರಚಾರಮಾಡುವವರು ಮತ್ತು ಪ್ರಚಾರಕ್ಕೆ ಒಳಗಾಗುವವರು ಇಬ್ಬರಲ್ಲೂ ಬದಲಾವಣೆಯ ಅಂಶಗಳು ಉದ್ಭವಿಸಿದವು. ಮತ ಪ್ರಚಾರಕರು ಇಲ್ಲಿಯ ಸ್ಥಳೀಯ ಭಾಷೆಯ ಬಗ್ಗೆ ಗೊತ್ತಿಲ್ಲದಿರುವುದರಿಂದ ಮತ್ತು ದಾಖಲೆಗಳಾಗಲಿ, ಅನುವಾದಗಳಾಗಲಿ ಅಷ್ಟಾಗಿ ನಡೆಯುವ ಮಟ್ಟಿಗೆ ಅಕ್ಷರ ಚರಿತ್ರೆ ವ್ಯಾಪಕವಾಗಿ ಇಲ್ಲದಿರುವುದು. ಈ ಕೊರತೆಯ ನಿಮಿತ್ತವಾಗಿ ಸ್ಥಳೀಯ ಚರಿತ್ರೆ, ಬರಹ, ದಾಖಲೆಗಳನ್ನು ಸಂಗ್ರಹಿಸುವ ವಿಸ್ತರಿಸುವ ಮತ್ತು ಚಾರಿತ್ರಿಕವಾಗಿ ಅಧ್ಯಯನದ ಶಿಸ್ತುವಿಗೆ ಒಳಪಡಿಸುತ್ತಲೇ ಭಾಷೆಯನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ನಡೆಸಿದ್ದುದು. ಈ ನಿಮಿತ್ತವಾಗಿ ಪಾಶ್ಚಾತ್ಯಮಾದರಿಯಲ್ಲಿ ಕನ್ನಡ ವ್ಯಾಕರಣಗಳು ಹತ್ತೊಂಬತ್ತು – ಇಪ್ಪತ್ತನೆಯ ಶತಮಾನದಲ್ಲಿ ರಚಿಸಲ್ಪಟ್ಟದ್ದೂ ಇದೆ. ಅನಂತರ ಪಾಶ್ಚಾತ್ಯರಲ್ಲಿನ ಮಾದರಿಗಳು ಸ್ಥಳೀಯ ಅಥವಾ ದೇಶೀಯ ವಿದ್ವಾಂಸರು ಅರ್ಥಮಾಡಿಕೊಳ್ಳಲು ಮುಂದಾದದ್ದು. ಅಲ್ಲದೆ ಇಂತಹ ಕಾರ್ಯಕ್ಕಾಗಿ ಭಾಷಾವಿಜ್ಞಾನದ ತಿಳುವಳಿಕೆಯನ್ನು ನೀಡಲು ಬೇಸಿಗೆಯ ಶಿಬಿರಗಳು ನಡೆದದ್ದು ಇದೆ.

ಅಂತಹ ಬೇಸಿಗೆಯ ಶಿಬಿರಗಳು ಭಾರತೀಯ ಮತ್ತು ಕನ್ನಡದ ಹಲವು ವಿದ್ವಾಂಸರಿಗೆ ಭಾಷಾವಿಜ್ಞಾನದತ್ತ ಒಲವು ಮೂಡಲು ಕಾರಣವಾಯಿತು. ಪ್ರೊ. ಚಿದಾನಂದ ಮೂರ್ತಿ, ಡಾ. ಡಿ. ಎನ್. ಶಂಕರಭಟ್ಟ, ಪ್ರೊ. ಎಸ್. ಅನಂತನಾರಾಯಣ, ಪ್ರೊ. ಎಚ್. ಎಸ್. ಬಿಳಿಗಿರಿ ಮುಂತಾದವರು ಇಂತಹ ಬೇಸಿಗೆಯ ಶಿಬಿರದ ಶಿಬಿರಾರ್ಥಿಗಳಾಗಿ ಸಕ್ರಿಯವಾಗಿ ಪಾಲ್ಗೊಂಡಿರುವುದು ಮಾತ್ರವಲ್ಲ ಕನ್ನಡ ಭಾಷೆಯ ಕ್ಷೇತ್ರಕ್ಕೆ ತಮ್ಮದೇ ಆದ ಪಾಶ್ಚಾತ್ಯ ನೆಲೆಯಲ್ಲಿ ಕಂಡುಕೊಂಡ ಮಾರ್ಗ ಅಥವಾ ಸಿದ್ಧಾಂತಗಳ ಮೂಲಕ ಕನ್ನಡ ಭಾಷಾಧ್ಯಯನವನ್ನು ಮಾಡಿದ್ದಾರೆ.

ಅದಾಗಲೇ ಪಾಶ್ಚಾತ್ಯರಲ್ಲಿ ವ್ಯಾಪಕವಾಗಿ ನಡೆದಿದ್ದ ವ್ಯಾಕರಣ, ತೌಲನಿಕತೆ, ವರ್ಣನಾತ್ಮಕತೆ, ನಿಘಂಟು ರಚನೆ ಮತ್ತು ಧ್ವನಿ ವಿಜ್ಞಾನ ಮುಂತಾದ ಮಾದರಿಗಳು ಕನ್ನಡ ಭಾಷೆಯ ಅಧ್ಯಯನವನ್ನು ಮಾಡಲು ಅಳವಡಿಸಿಕೊಳ್ಳಲು ಪ್ರಯತ್ನಿಸಿದರು. ಭಾಷೆಗೆ ಸಂಬಂಧಿಸಿದಂತೆ ಸಾಕಷ್ಟು ವಿಷಯಗಳನ್ನು ಕಲೆ ಹಾಕಲಾಯಿತು. ಅವುಗಳ ವಿಭಜನೆ ಮತ್ತು ವಿವರಣೆ ಪಶ್ಚಿಮದ ಸಿದ್ಧಾಂತಗಳೇ ನಿರ್ಧರಿಸಲ್ಪಟ್ಟವು.

ರಾಬರ್ಟ್ ಕಾಲ್ಡ್‌ವೆಲ್, ಲೈಬ್ನಿಜ್, ಹರ್ಡರ್, ಸರ್ ವಿಲಿಯಂ ಜೋನ್ಸ್ ಮುಂತಾದ ವಿದ್ವಾಂಸರು ಭಾಷೆಯ ವರ್ಗ ಅಥವಾ ಮೂಲವನ್ನು ಕುರಿತು ತೌಲನಿಕ ಮತ್ತು ಹಲವು ಅನ್ಯ ಜ್ಞಾನ ಶಿಸ್ತುಗಳ ಮೂಲಕ ನೋಡುವ ಒಂದು ಹೊಸ ಮಾರ್ಗವನ್ನು ತೋರಿಸಿದ್ದರು. ಭಾಷೆಯ ಬಾಂಧವ್ಯ ವಾಂಶಿಕ ಬೆಳವಣಿಗೆಯ ವಂಶವೃಕ್ಷ ಕುರಿತು ಒಂದಷ್ಟು ಗಮನಾರ್ಹವಾದ ಕಾರ್ಯವನ್ನು ನಿರ್ವಹಿಸಿದರು. ಇದೇ ಸಮಯದ ಮತ್ತೊಂದು ಗಮನಾರ್ಹ ಸಂಗತಿ ಎಂದರೆ ಭಾಷಾಧ್ಯಯನವನ್ನು ಕುರಿತು ಇದ್ದ ಅಥವಾ ಭಾಷಾಧ್ಯಯನಕ್ಕೆ ಒಳಗಾಗುತ್ತಿದ್ದ ಸಿದ್ಧಮಾದರಿಯ ಬರಹ ಭಾಷೆಯ ಜೊತೆಗೆ ಬುಡಕಟ್ಟಿನಂತಹ ಬರಹವಿಲ್ಲದ ಭಾಷೆಗಳ ಬಗ್ಗೆಯೂ ಕುತೂಹಲ ಮೂಡಿದ್ದು. ಪ್ರಾದೇಶಿಕ ಭಾಷೆಗಳ ವ್ಯತ್ಯಾಸವನ್ನು ಸಹ ಅಧ್ಯಯನವು ತನ್ನ ವ್ಯಾಪ್ತಿಗೆ ತೆಗೆದುಕೊಂಡಿತು.

"ಲೈಬ್ನಿಜ್‌ಗೆ ಇಷ್ಟವಾಗಿದ್ದ ಮತ್ತೊಂದು ಕೆಲಸವೆಂದರೆ ಜೀವಂತ ಭಾಷೆಗಳ ವಿವರವನ್ನು ಕಲೆಹಾಕುವುದು ಮತ್ತು ಅದನ್ನು ವಿವರಿಸುವುದು. ಆತ ತನ್ನ ಕಾಲದ ಒಬ್ಬ ಶ್ರೇಷ್ಠ ಜ್ಞಾನಿಯಾಗಿದ್ದುದರಿಂದ ಸಮಾಜದ ಮೇಲೆ ಹಲವು ರೀತಿಯಲ್ಲಿ ಪ್ರಭಾವ ಬೀರಬಲ್ಲವನಾಗಿದ್ದನು. ಇದಕ್ಕೂ ಮಿಗಿಲಾಗಿ ಅವನ ಸಂಪರ್ಕ ಮತ್ತು ಸ್ನೇಹ ವಿಶಾಲವಾದುದಾಗಿತ್ತು. ಅರಮನೆಯಿಂದ ಗುಡಿಸಲಿನವರೆಗೆ ಅವನ ಮಾತು ವರ್ಚಸ್ಸು ನಡೆಯುತ್ತಿತ್ತು. ಇವರ ನಿದರ್ಶನಕ್ಕಾಗಿ ಒಂದು ಪ್ರಸಂಗವನ್ನು ಇಲ್ಲಿ

ಉಲ್ಲೇಖಿಸಬಹುದು. ರಷ್ಯಾ ದೇಶದ ಎರಡನೆಯ ಕ್ಯಾತರಿನ್‌ಳನ್ನು ಪಿ. ಎನ್. ಪಲ್ಲಾಸನಿಗೆ ಆರ್ಥಿಕ ನೆರವು ನೀಡಿ ಇನ್ನೂರು ಭಾಷೆ – ಉಪ ಭಾಷೆಗಳ ಮಾದರಿಗಳನ್ನು ಸಂಗ್ರಹಿಸುವ ಸಲುವಾಗಿ ಪ್ರೋತ್ಸಾಹಿಸುವಂತೆ ಒಪ್ಪಿಸಿದನು. ಅಷ್ಟೇ ಅಲ್ಲದೇ ಈತ ಚಕ್ರವರ್ತಿಯಾದ ಪೀಟರ್ ಮಾಹಾಶಯನನ್ನು ರಷ್ಯಾ ಚಕ್ರಾಧಿಪತ್ಯದ ಎಲ್ಲಾ ಭಾಷೆಗಳ ಅಭ್ಯಾಸಗಳಿಗೆ ವ್ಯವಸ್ಥೆಮಾಡುವಂತೆ ಮತ್ತು ಆ ಭಾಷೆಗಳನ್ನು ಬರವಣಿಗೆಗೆ ಇಳಿಸಲು ನಿಘಂಟುಗಳನ್ನು ವ್ಯಾಕರಣಗಳನ್ನು ಸಿದ್ದಪಡಿಸುವಂತೆ ಒತ್ತಾಯಪೂರ್ವಕವಾಗಿ ವಿನಂತಿಸಿದನು'[೫]. ಇದು ಉಪಯುಕ್ತ ಕಾರ್ಯದ ಮತ್ತೊಂದು ಕೊಡುಗೆಯೇ ಆಗಿದೆ.

ಭಾಷಾವಿಜ್ಞಾನ ಕ್ಷೇತ್ರಕ್ಕೆ ಮತ್ತೊಂದು ಕಿಟಕಿಯನ್ನು ತೆಗೆದು ಇನ್ನಷ್ಟು ಗಾಳಿ ಬೆಳಕಿನ ಪ್ರಖರತೆಗೆ ಕಾರಣನಾದವನು ವಿಲ್. ಹೆಲ್ಮ್ಯಾನ್ ಹಂಬೋಲ್ಟ್ (೧೭೬೭–೧೮೩೫). "ಭಾಷೆ ಒಂದು ಪದಾರ್ಥವಲ್ಲ, ಸಿದ್ಧವಸ್ತುವಲ್ಲ, ಅದೊಂದು ನಿರಂತರ ಚಟುವಟಿಕೆ. ನಿತ್ಯ ಪರಿವರ್ತನಾಶೀಲವಾದ ಕ್ರಿಯೆ ಎಂಬುದು ಹಂಬೋಲ್ಟ್‌ನ ವಿಚಾರ ಸಾರ. ಬುದ್ಧಿಯ ಒಂದು ಪ್ರಭಲ ಶಕ್ತಿ ಕ್ರಿಯಾತ್ಮಕವಾಗಿ ಕಾರ್ಯೋನ್ಮುಖವಾಗಿರುವುದೇ ಭಾಷೆ. ಒಂದು ಜನಾಂಗದ ಸಂಸ್ಕೃತಿಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ಆ ಜನತೆಯ ಮಾತಿನ ಜೀವಂತ ಶಕ್ತಿ ಹೇಗೆ ಅವರ ಜಗತ್ ಸೃಷ್ಟಿಯನ್ನು ರೂಪಿಸಿದೆ ಎಂಬುದನ್ನು ತಿಳಿಯಬೇಕಂತೆ. ಏಕೆಂದರೆ, .....Man lives with the world about him principally, indeed... exclusively, as language presents it to him. ಆದರೆ ಆತ ಈ ವಿಚಾರವನ್ನು ತಿಳಿಯಲು ಅನುಸರಿಸಬೇಕಾದ ಕ್ರಮ ಇಲ್ಲವೇ ತಂತ್ರವನ್ನು ತಿಳಿಸಲಿಲ್ಲ. ಹಂಬೋಲ್ಟ್‌ನ ಗ್ರಂಥ On the structural differences of influence on the spiritual development of mankind ಎಂಬುದು ೧೮೩೬ರಲ್ಲಿ ಬರ್ಲಿನ್‌ನಲ್ಲಿ ಪ್ರಕಟವಾಯಿತು. ನಾಲ್ಕು ನೂರ ಮುವತ್ನಾಲ್ಕು ಪುಟಗಳ ಈ ಪುಸ್ತಕ ಮತ್ತೆ ೧೯೬೦ರಲ್ಲಿ ದ್ವಿತೀಯ ಮುದ್ರಣ ಪಡೆಯಿತು. ೧೯ನೇ ಶತಮಾನದ ತುಂಬಾ ವ್ಯಾಕರಣಪ್ರಿಯ ಭಾಷಾವಿದ್ವಾಂಸರೇ ತುಂಬಿಕೊಂಡಿದ್ದಾಗ ಹಂಬೋಲ್ಟ್ ವ್ಯಾಕರಣಗಳನ್ನು ಅಪೇಕ್ಷೆಪಡದೇ ವಿರೋಧಿಸಿದ್ದು ಒಂದು ಸೋಜಿಗವೇ ಸರಿ. ಆತ ಭಾಷೆಯ ಬೆಳವಣಿಗೆಯಲ್ಲಿ ನಾಲ್ಕು ಹಂತಗಳನ್ನು ತಿಳಿಸಿದ್ದಾನೆ.

೧. ಕೇವಲ ವಸ್ತುಗಳನ್ನು ಮಾತ್ರ ಪದಗಳು ಸೂಚಿಸುವುದು. ಪದಗಳನ್ನು ಆಲಿಸುವವರು ಅವುಗಳ ಪರಸ್ಪರ ಸಂಬಂಧವನ್ನು ಊಹಿಸುವುದು.

೨. ಪದಗಳು ಅನುಕ್ರಮವಾಗಿದ್ದವು. ಕೆಲವು ಪದಗಳು ತಮ್ಮ ಸ್ವತಂತ್ರವಾದ ಇರುವಿಕೆಯನ್ನು ನೀಗಿಕೊಳ್ಳಲಾರಂಭಿಸಿದವು.

೩. ಹೀಗೆ ತಮ್ಮ ಸ್ವಂತಂತ್ರವಾದ ಅಸ್ತಿತ್ವವನ್ನು ನೀಗಿಕೊಂಡ ಪದಗಳು ಪ್ರತ್ಯಯಗಳಾಗಿ ಪರಿಣಮಿಸಿದವು.

೪. ರೂಪಾಂತರ ಅಥವಾ Flection ಎಂಬ ಈ ಹಂತದಲ್ಲಿ ಪದಗಳು ಅಖಂಡ ರೂಪದಲ್ಲಿರುತ್ತವೆ. ಇಲ್ಲಿ ಪ್ರಕೃತಿ ಮತ್ತು ಪ್ರತ್ಯಯವನ್ನು ವಿಂಗಡಿಸುವುದು ದುಸ್ಸಾಧ್ಯ[೬]. ಈಗೆ ಭಾಷೆಯ ಬೆಳವಣಿಗೆಯ ಹಂತವನ್ನು ಕುರಿತು ಮಂಡಿಸಿದ ಚಿಂತನೆಯು ಹಲವು ಭಾಷಾವಿಜ್ಞಾನಿಗಳಿಗೆ ಮತ್ತೊಂದು ಕೀಲಿ ಕೈ ಸಿಕ್ಕಂತಾಯಿತು.

ಹತ್ತೊಂಬತ್ತನೆಯ ಶತಮಾನಕ್ಕಾಗಲೆ ಭಾಷಾವಿಜ್ಞಾನವೆನ್ನಿಸಿಕೊಳ್ಳಲು ಒಂದೆಡೆ ತವಕಿಸುತ್ತಿದ್ದರೆ ಮತ್ತೊಂದು ಕಡೆ ಭಾಷೆಯು ಅಧ್ಯಯನದ ವಸ್ತುವಾಗುವುದೇ ಎಂಬ ಅನುಮಾನಗಳಿಂದಲೇ ಕಾಣಲಾಗುತ್ತಿತ್ತು. ಧ್ವನಿಯ ಹುಟ್ಟಿನಿಂದ ಭಾಷೆಯ ರಚನೆಯ ವ್ಯವಸ್ಥೆಯ ವರೆಗಿನ ಉಲಿಯ ಪಯಣ ಗಮನಸೆಳೆಯುತ್ತಿದ್ದುದೇನೋ ನಿಜ. ಮನೋವಿಜ್ಞಾನ ಗಮನಿಸುವ ಶರೀರ ಮತ್ತು ಧ್ವನಿಯ ಉತ್ಪತ್ತಿಗೆ ನೆರವಾಗುವ ಅಂಗಾಂಗಗಳ ಬಗ್ಗೆ ತಾನು ಹೇಳಿದ್ದರಾಚೆ ಉಲಿಯ ನಿಟ್ಟಿನಿಂದ ಅಭ್ಯಾಸಿಸುವಂತಹದ್ದು ಏನೂ ಇಲ್ಲವೆಂತಲೂ ಮತ್ತು ಹಾಗೇನಾದರು ನಡೆದಲ್ಲಿ ಅದನ್ನು ವಿಜ್ಞಾನವೆಂಬ ವಿಶೇಷಣದಿಂದ ಗುರುತಿಸಲಾಗದು ಎನ್ನುವ ಹಂತದಲ್ಲಿತ್ತು.

ಇಂತಹ ಹೊತ್ತಿನಲ್ಲಿ ಭಾಷಾಧ್ಯಯನ ಮತ್ತು ಭಾಷೆಯನ್ನು ನೋಡುವ ಇತರ ಜ್ಞಾನ ಕ್ಷೇತ್ರಕಾರರಿಗೂ ಒಂದು ಹೊಸ ಹೊಳಪನ್ನು ನೀಡಿದವನು ಫರ್ಡಿನಾಂಡ್ ದ ಸಸೂರ್. (Ferdinand de saussure ೧೮೫೭–೧೯೧೪). ಈತ ಭಾಷಾವಿಜ್ಞಾನದ ಮುಂಬೆಳಗಿನ ಮಹಾಪುರುಷ ಎಂದೇ ಗುರುತಿಸಲಾಗುತ್ತದೆ. "ವಿದ್ಯಾರ್ಥಿಯಾಗಿರುವಾಗಲೇ ಐರೋಪ್ಯ ಭಾಷೆಗಳ ಸ್ವರಾಕ್ಷರಗಳ ಕುರಿತು ಅವರು ಮಂಡಿಸಿದ "memoir on the original system of vowels in the Indo-European Languages" ಎನ್ನುವ ಪ್ರಬಂಧವು ಒಳನೋಟಗಳು ತುಂಬಿದ ತಲಸ್ಪರ್ಶಿ ತೌಲನಿಕ ಅಧ್ಯಯನವಾಗಿತ್ತು. ಈತ ಪುಸ್ತಕ ಪ್ರಕಟಣೆಗಿಂತ ತರಗತಿ ಮತ್ತು ವಿದ್ಯಾರ್ಥಿಗಳೊಂದಿಗಿನ ಚರ್ಚೆ, ಪ್ರವಚನದತ್ತ ಒಲವು ಹೆಚ್ಚು. ಹಾಗಾಗಿ ಈತ ನಿಧನನಾದ ನಂತರ ವಿದ್ಯಾರ್ಥಿಗಳು ಬರೆದುಕೊಂಡ ಟಿಪ್ಪಣಿಗಳನ್ನು ಒಟ್ಟುಗೂಡಿಸಿ ಪುಸ್ತಕವಾಗಿ ಪ್ರಕಟಿಸಿದರು. ಕೋರ್ಸ್ ಇನ್ ಜನರಲ್ ಲಿಂಗ್ವಿಸ್ಟಿಕ್ಸ್ ಎಂಬ

ಹೆಸರಿನಲ್ಲಿ. ಈ ಕೃತಿಯು ಭಾಷಾಧ್ಯಯನಕಾರರಿಗೆ ಕೈಪಿಡಿಯಾಯಿತು. ಸಸೂರ್ ಭಾಷೆಗೆ ವಿಜ್ಞಾನದ ಸ್ಥಾನಮಾನನವನ್ನು ತಂದಿತ್ತನು. ಸಾಹಿತ್ಯವೂ ಒಳಗೊಂಡಂತೆ ಮಾನವಶಾಸ್ತ್ರ, ಸಮಾಜಶಾಸ್ತ್ರ, ಇತಿಹಾಸ ಮುಂತಾದವುಗಳು ಪರಾಮರ್ಶನಕ್ಕೆ ಯೋಗ್ಯವಾದವು ಎಂದು ಪ್ರಸ್ತುತಪಡಿಸಿದ. ಆ ಮೂಲಕ ಅಧ್ಯಯನದ ವಸ್ತುಗಳನ್ನು ವಿವಿಧ ಆಯಾಮಗಳ ಮೂಲಕ ಪರಿಶೀಲಿಸಿದನು. "ಭಾಷಾಶಾಸ್ತ್ರದ ಅಸಾಧಾರಣತೆಯು ಒಂದನ್ನೊಂದು ಅವಲಂಬಿಸಿರುವ ಎರಡು ವಿಶಿಷ್ಟ ಅಂಶಗಳನ್ನು ತಿಳಿಸುತ್ತದೆ. ಉದಾಹರಣೆಗೆ :

೧. ಉಚ್ಛರಿಸಿದ ಅಕ್ಷರಗಳನ್ನು ಕಿವಿಯು ಧ್ವನಿಯ ರೂಪದಲ್ಲಿ ಆಲಿಸುತ್ತದೆ. ಧ್ವನಿ ಪೆಟ್ಟಿಗೆ ಇಲ್ಲದೆ ಧ್ವನಿ ಅಸ್ತಿತ್ವದಲ್ಲಿ ಇರಲಾರದು. ಉದಾಹರಣೆಗೆ : ಉಭಯ ಸಹಕಾರಿ ಅಂಗಗಳು ಇಲ್ಲದಿದ್ದರೆ 'ಣ' ಎಂಬ ಶಬ್ದ ಇರಲಾರದು. ಹೀಗಾಗಿಯೇ, ಕಿವಿ ಆಲಿಸುವುದನ್ನೇ ಭಾಷೆಯೆಂದು ಹೇಳಲಾಗದು. ಧ್ವನಿಯ ಅಭಿವ್ಯಕ್ತಿಯನ್ನು ಹೇಗೆ ನಿರಾಕರಿಸಲಾಗದೋ ಹಾಗೆಯೇ ಆಲಿಕೆಯ ಸ್ಪಂದನವನ್ನು ನಿರಾಕರಿಸಲಾಗದು.

೨. ಈ ಧ್ವನಿಮಾ ದ್ವಂದ್ವವನ್ನು ನಾವು ಪಕ್ಕಕ್ಕಿಟ್ಟುಬಿಟ್ಟರೆ ಭಾಷೆಯನ್ನು ಧ್ವನಿಮಾ ಅಂಶಗಳಿಗೆ ಇಳಿಸಿಬಿಡಬಹುದೇ? ಇಲ್ಲ. ಏಕೆಂದರೆ, ಉಚ್ಛರಿಸುವ ಶಬ್ದಗಳು ಕೇವಲ ವಿಚಾರಗಳನ್ನು ಅಭಿವ್ಯಕ್ತಿಸುವ ಸಾಧನಗಳಾಗಿದ್ದು, ಅವಕ್ಕೆ ಪ್ರತ್ಯಕ್ಷ ಅಸ್ತಿತ್ವವಿಲ್ಲ. ಇಲ್ಲಿಯೇ ಇನ್ನೊಂದು ಮಹತ್ವದ ಪೂರಕ ಅಂಶವೊಂದು ಹೊಮ್ಮುತ್ತಿರುವುದು ವೇದ್ಯವಾಗುತ್ತಿದೆ. ಮನಶಾಸ್ತ್ರ ಮತ್ತು ಶರೀರ ವಿಜ್ಞಾನದ ನೆಲೆಯಿಂದ ಶಬ್ದವು ತನ್ನಷ್ಟಕ್ಕೆ ಒಂದು ಸಂಕೀರ್ಣವಾದ ಕಲಿಕೆಯ ಅಭಿವ್ಯಕ್ತಿಯ ಘಟಕವಾಗಿದೆ, ಮಾತ್ರವಲ್ಲ;

೩. ಯಾವುದೇ ಸಮಯದಲ್ಲೂ ಭಾಷೆಯು ಸ್ಥಾಪಿತ ವ್ಯವಸ್ಥೆಯನ್ನು ಮತ್ತು ವಿಕಾಸವನ್ನು ಒಳಗೊಂಡಿರುತ್ತದೆ. ಜತೆಗೆ, ಪ್ರತಿ ಕ್ಷಣದಲ್ಲೂ ಅದು ವರ್ತಮಾನದ ಸಂಸ್ಥೆಯಾಗಿದ್ದು, ಗತಕಾಲದ ಉತ್ಪಾದನೆಯೂ ಆಗಿರುತ್ತದೆ. ವ್ಯವಸ್ಥೆ ಮತ್ತು ಅದರ ಇತಿಹಾಸ, ಅದು ಏನಾಗಿತ್ತು ಮತ್ತು ಏನಾಗಿದೆ ಎಂದು ಗುರುತಿಸುವುದು ಮೊದಲ ನೋಟಕ್ಕೆ ಸುಲಭವಾಗಿರುವಂತೆ ಕಾಣುತ್ತದೆ. ವಾಸ್ತವದಲ್ಲಿ, ಇವೆರಡರ ನಡುವಿನ ಸಂಬಂಧ ಎಷ್ಟು ಅಂಟಿಕೊಂಡಿದೆ ಎಂದರೆ ಅವನ್ನು ಬೇರ್ಪಡಿಸುವುದು ಕಠಿಣವೇ. ಭಾಷೆಯ ಅನುಭವವೇದ್ಯತೆಯನ್ನು ಅದರ ಅತ್ಯಂತ ಮೂಲಾವಸ್ಥೆಯಲ್ಲಿ

ಸರಳಗೊಳಿಸಬಹುದೇ? ಇಲ್ಲ. ಏಕೆಂದರೆ ಭಾಷೆಯ ಆರಂಭಿಕ ಗುಣಲಕ್ಷಣದ ಸಮಸ್ಯೆಗಳು ಅದರ ಶಾಶ್ವತ ಸಮಸ್ಯೆಗಳಿಗಿಂತ ಭಿನ್ನವಾಗಿವೆ ಎಂದು ತಿಳಿದುಕೊಳ್ಳವುದು ತಪ್ಪು ಕಲ್ಪನೆಯಾಗುತ್ತದೆ. ನಾವು ಆ ಚಕ್ರತೀರ್ಥದ ಸುಳಿಯಲಿದ್ದೇವೆ ಅಷ್ಟೇ.

ಸಮಸ್ಯೆಯನ್ನು ಯಾವ ಮೂಲೆಯಿಂದ ಕೈಗೆತ್ತಿಕೊಂಡರೂ ಭಾಷೆಯಲ್ಲಿ ಯಾವೊಂದು ವಸ್ತುವೂ ಸ್ವತಂತ್ರವಾಗಿರುವುದನ್ನು ಕಾಣಲಾರೆವು. ಹೇಗೆ ನೋಡಿದರೂ ಈ ವೈರುಧ್ಯ ನಮ್ಮನ್ನು ಎದುರುಗೊಳ್ಳುತ್ತದೆ. ನಮ್ಮ ಗಮನವನ್ನು ಪ್ರತಿ ಸಮಸ್ಯೆಯ ಒಂದು ಮಗ್ಗಲಿಗೆ ಕೇಂದ್ರೀಕರಿಸಿದಾಗ ಮೇಲೆ ಸೂಚಿಸಿದ ಇಬ್ಬಂದಿತನವನ್ನು ಗ್ರಹಿಸಲು ವಿಫಲವಾಗಿರುತ್ತೇವೆ. ಅಥವಾ ಏಕಕಾಲಕ್ಕೆ ಭಾಷೆಯ ವಸ್ತುಗಳನ್ನು ವಿವಿಧ ಆಯಾಮಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಆತುರಕ್ಕೆ ಬಿದ್ದು ಬಿಡುತ್ತೇವೆ. ಹಾಗಾದಾಗ ವೈವಿಧ್ಯಮಯವಾಗಿರುವ ಭಾಷಾಧ್ಯಯನದ ಈ ವಿಷಯಗಳು ಗೊಂದಲದ ಗೂಡಾಗಿ; ಒಂದಕ್ಕೊಂದು' ಸಂಬಂಧವಿಲ್ಲದವುಗಳಾಗಿ ಕಾಣುತ್ತವೆ. ಇದು ವಿವಿಧ ವಿಜ್ಞಾನ ವಿಷಯಗಳಾದ ಮನಃಶಾಸ್ತ್ರ, ಮಾನವಶಾಸ್ತ್ರ ಭಾಷಾಶಾಸ್ತ್ರ ವ್ಯಾಕರಣಶಾಸ್ತ್ರ ಇತ್ಯಾದಿಗಳತ್ತ ನಮ್ಮನ್ನು ಕರೆದೊಯ್ಯುತ್ತದೆ. ಭಾಷಾಶಾಸ್ತ್ರದಿಂದ ವಿಶಿಷ್ಟವಾಗಿರುವ ಇವು, ಭಾಷೆಯ ಒಟ್ಟಾರೆ ವ್ಯಾಪ್ತಿಯೊಳಗೆ ಬರುತ್ತವೆ'[2] ಎನ್ನುತ್ತಾನೆ ಸಸೂರ್.

ಸಸೂರನ ಕಾಲಘಟ್ಟದಲ್ಲೇ ಪಾಶ್ಚಾತ್ಯದಲ್ಲಿ ಎಡ್ವರ್ಡ್ ಸಫೀರ್, ಎಂ. ಬಿ. ಎಮಿನೋ, ಬ್ಲೂಮ್ ಫೀಲ್ಡ್ ಮುಂತಾದವರು ಭಿನ್ನವಾಗಿ ಆಲೋಚಿಸತೊಡಗಿದರು. ಬೇರೆ ಬೇರೆ ಭಾಷೆಗಳನ್ನು ಕಲಿಯುವ ಆಸಕ್ತಿಯನ್ನು ತಳೆದರು. ಹಾಗೆ ವ್ಯಾಕರಣದ, ನಿಘಂಟುಗಳನ್ನು ರಚಿಸುತ್ತಲೇ ಇನ್ನೊಂದು ಮತ್ತೊಂದು ಭಾಷೆಯನ್ನು ಸಂಪಾದಿಸುತ್ತ ಭಾಷೆಗಳ ಕುರಿತು ತೌಲನಿಕ ಅಧ್ಯಯನಕ್ಕೆ ಮುಂದಾದರು. ಅದಕ್ಕಿಂತ ಮುಖ್ಯವಾಗಿ ಒಂದು ಭಾಷೆಯ ಸಮಾಜ, ಸಂಸ್ಕೃತಿಗಳ ಒಳಗಿನಿಂದ ಭಾಷೆಯ ನಾಡಿಮಿಡಿತವನ್ನು ಅರಿಯಲು ಎಡ್ವರ್ಡ ಸಫೀರ್‌ನಂತಹವರು ಮುಂತಾದವರು ಇಂಡೋ ಯುರೋಪಿಯನ್ ಭಾಷಾ ಪರಿವಾರದ ಸಮಸ್ಯೆ ಹಾಗೂ ಪರಿಹಾರಗಳನ್ನು ಕುರಿತು ಸಂಶೋಧನಾತ್ಮಕ ಲೇಖನಗಳನ್ನು ಬರೆದಿದ್ದಾನೆ. ಭಾಷೆಯ ರಚನೆಯಲ್ಲಿ ಕಾಣುವ ಅಂತರ್ಗತ ಹಾಸುಹೊಕ್ಕುಗಳ ಚಹರೆಗಳ ಬಗ್ಗೆ ಹೆಚ್ಚಿನ ಒಲವು ಇತ್ತು. ಹೀಗಾಗಿಯೇ ಸಫೀರನು ಭಾಷೆಯನ್ನು ಸಮಾಜ ವಿಜ್ಞಾನದ ಶಾಖೆಯೆಂದು ಭಾವಿಸಿದಂತೆ ತೋರುತ್ತದೆ. ಪ್ರತಿಯೊಂದು ಭಾಷೆಯೂ ಸಮಸ್ತ ಸಂಸ್ಕೃತಿಯ ಅಂಗವೆಂಬುದು ಆತನ ಖಚಿತ ನಿಲುವು. ಲಿಪಿ ರಹಿತ ಭಾಷೆಗಳ, ಆದಿವಾಸಿ, ಬುಡಕಟ್ಟು ಜನಾಂಗಗಳ

ಭಾಷೆಗಳ ವಿವರಗಳನ್ನು ಸಂಗ್ರಹಿಸುವಾಗ ಆ ಜನಾಂಗದ ಸಂಸ್ಕೃತಿಯತ್ತ ಗಮನವಹಿಸುತ್ತಿದ್ದ ಮತ್ತು ಅದಕ್ಕೆ ಪೂರಕವಾದ ಅಂಶಗಳನ್ನು ಕೂಡಿಹಾಕುವುದರಲ್ಲಿ ಎಚ್ಚರಿಕೆ ಮತ್ತು ಆಸಕ್ತಿಯನ್ನು ಉಳ್ಳವನಾಗಿದ್ದನು. ಮಾನವಶಾಸ್ತ್ರಕ್ಕೂ ಭಾಷಾಶಾಸ್ತ್ರಕ್ಕೂ ಇರುವ ತೌಲನಿಕತೆಯನ್ನು ಕುರಿತು ತನ್ನ ಆಲೋಚನೆಗಳನ್ನು ಮಂಡಿಸಿದ್ದನು. ಅಲ್ಲದೆ ಅಮೆರಿಕ ಇಂಡಿಯನ್ ಭಾಷೆಗಳ ತೌಲನಿಕ ಭಾಷಾವಿಜ್ಞಾನ ಕುರಿತು ಮಹತ್ತರ ಬರಹವನ್ನು ಪ್ರಕಟಿಸಿದ್ದಾನೆ.

ಭಾರತೀಯ ಹಾಗೂ ದ್ರಾವಿಡ ಭಾಷಾವಿಜ್ಞಾನದ ಬೆಳವಣಿಗೆಯಲ್ಲಿ ಸಫೀರ್ ಕಾಲ್ಡ್‌ವೆಲ್ ಎಮಿನೋ ಮುಂತಾದವರ ಸಾಲಿನಲ್ಲಿ ಎಡ್ವಿನ್ ಎಚ್. ಟಟಲ್ (೧೮೭೭-೧೯೩೭) ಹೆಸರು ಸಹ ಪ್ರಮುಖವಾದದ್ದು. ದ್ರಾವಿಡೇತರ ಭಾಷೆ ಹಾಗೂ ಭಾಷಾ ಪರಿವಾರಗಳಿಗೆ ಸಂಬಂಧಿಸಿದಂತೆ ಇಪ್ಪತ್ತೈದಕ್ಕೂ ಹೆಚ್ಚಿನ ಲೇಖನಗಳನ್ನು ಟಟಲ್ ಪ್ರಕಟಿಸಿದ್ದಾನೆ. "ಕನ್ನಡ ಭಾಷೆಯಲ್ಲಿ ಇಂದು ಬಳಕೆಯಲ್ಲಿರುವ ಅಕ್ಕಿ, ಅಷ್ಟು, ಇಷ್ಟು, ಎಷ್ಟು ಮತ್ತು ಪ್-ಹ್ ಧ್ವನಿ ವ್ಯತ್ಯಾಸಗಳ ಕುರಿತು ಟಟಲ್ ಅಭಿಪ್ರಾಯ ಇಂತಿದೆ.

ವ್ರೀಘಿ-ರೀಘಿ-ಆರಿಭ; ಅರ್ಕಿ-ಅಕ್ಕಿ, ಅಚ್-ಅಚ್ತು; ಆಸು-ಅಷ್ಟು. ಇದೇ ರೀತಿ ಈಸು-ಇಷ್ಟು, ಏಸು-ಎಷ್ಟು, ಪ್-ಫ್-ಫ್ಞ್-ಹ್ ಇದಲ್ಲದೆ ಉಪಭಾಷೆಗಳನ್ನು ಕುರಿತು ಸಹ ವಿಶೇಷ ಜ್ಞಾನವನ್ನು ಸಂಪಾದಿಸಿದ್ದಾನೆ.

ಈ ಹೊತ್ತಿಗಾಗಲೇ ತೌಲನಿಕ ಭಾಷಾವಿಜ್ಞಾನ ಹಲವರ ಗಮನವನ್ನು ಸೆಳೆದಿತ್ತು. ಈ ಕ್ಷೇತ್ರದಲ್ಲಿ ಫ್ರಾಂಕ್ಲಿನ್ ಎಡ್ವರ್ಟನ್ ಎಡ್ಗರ್ ಹೂವರ್ಡ್ ಸ್ಟುರ್ಟವಾಂಟ ಮುಖ್ಯರಾದವರು. ಮುಂದುವರೆದು ಭಾರತೀಯ ಭಾಷೆಗಳ ತೌಲನಿಕ ಕ್ಷೇತ್ರದತ್ತ ಒಲವು ಬೆಳೆಸಿಕೊಂಡ ಮರ್ರೆ ಬಾರ್ನ್‌ಸನ್ ಎಮಿನೋ (೧೯೦೪) ಕೂಡ ಪ್ರಮುಖರು. ಮಧ್ಯ ಭಾರತ ಹಾಗು ದಕ್ಷಿಣ ಭಾರತದ ದ್ರಾವಿಡ ಭಾಷೆಗಳ ಸಂಶೋಧನಾ ಕಾರ್ಯದಲ್ಲಿ ನಿರತರಾದರು. ತೊದ, ಕೊಡಗು, ಕೋಲಾಮಿಯ ಮತ್ತು ಕೋತಾ ಭಾಷೆಗಳ ಮೇಲೆ ಅನೇಕ ಅಂಕಿ ಅಂಶಗಳನ್ನು ಅಗತ್ಯವಿವರಗಳೊಡನೆ ಕಲೆಹಾಕಿದರು. ನೀಲಗಿರಿಯ ಕೋತಾ ಭಾಷೆಯನ್ನು ಕುರಿತು ಬರೆದ ನಾಲ್ಕು ಪ್ರತ್ಯೇಕ ಸಂಪುಟಗಳು ದ್ರಾವಿಡ ಭಾಷಾವಿಜ್ಞಾನದ ಅತ್ಯಮೂಲ್ಯ ಆಸ್ತಿ. ಅಲ್ಲದೆ ಬ್ರಾಹೂಈ ಮತ್ತು ತೌಲನಿಕ ವ್ಯಾಕರಣವೆಂಬ ಗ್ರಂಥವನ್ನು ರಚಿಸಿದರು. ವಿವರಣಾತ್ಮಕ ಭಾಷಾವಿಜ್ಞಾನದ ನಿಯಮಗಳನ್ನು ಅನ್ವಯಿಸಿ ದ್ರಾವಿಡ ಭಾಷೆಗಳ ಅದರಲ್ಲಿಯೂ

ಕೋತ, ತೊದ, ಕೋಲಾಮಿ ಭಾಷೆಗಳ ಅಧ್ಯಯನವನ್ನು ನಡೆಸಿದ ಕೆಲವೇ ಭಾಷಾವಿಜ್ಞಾನಿಗಳಲ್ಲಿ ಎಂ. ಬಿ. ಎಮಿನೋ ಅವರು ಪ್ರಮುಖರು.

ಪಾಶ್ಚಾತ್ಯ ವಿದ್ವಾಂಸರು ಹಲವು ಪಾಶ್ವಾತ್ಯ ಭಾಷೆಗಳ ಮತ್ತು ಭಾಷಾವಿಜ್ಞಾನದ ಆಯಾಗಳ ಮೂಲಕ ನಡೆಸಿದ ಅಧ್ಯಯನವು ಭಾಷಾವಿಜ್ಞಾನ ಕ್ಷೇತ್ರದ ವಿಸ್ತಾರದ ಪ್ರಮುಖ ಅಂಶವಾದರೆ, ಮತ್ತೊಂದೆಡೆ ಹಲವು ಭಾಷಾವಿಜ್ಞಾನಿಗಳು ಭಾರತೀಯ ಭಾಷೆಗಳನ್ನು ಕುರಿತು ನಡೆಸಿದ ಅಧ್ಯಯನಗಳು ಮತ್ತೊಂದು ಗಮನಾರ್ಹ ಅಂಶವಾಗಿದೆ. ಈ ಎಲ್ಲದರ ಫಲಿತವಾಗಿ ಭಾರತೀಯ ಭಾಷೆ ಹಾಗೂ ದ್ರಾವಿಡ ಭಾಷೆಗಳ ಕ್ಷೇತ್ರದಲ್ಲಿ ಆಯಾ ಭಾಷಿಕರಿಗೆ ಹೆಚ್ಚಿನ ಒಲವು ಮೂಡಲು ಸಹ ಕಾರಣವಾಯಿತು. ಫ್ರಾನ್ಸಿಸ್ ವೈಟ್ ಎಲ್ಲಿಸ್, ರಾಬರ್ಟ್ ಎ ಕಾಲ್ಡ್‌ವೆಲ್, ಜೂಲ್ಸ್ ಬ್ಲಾಕ್, ಥಾಮಸ್ ಬರೋ, ಮರೆ ಬಾರ್ನಸನ್, ಎಮಿನೋ, ಅಲ್ಫ್ರಡ್ ಮಾಸ್ಟರ್, ಸ್ಟೆನ್‌ಕೊನೊ, ಎಂ. ಎಸ್. ಅಂಡ್ರೆನೊವ್, ಕಮಿನಲ್ ಜ್ವಲೆಬಿಲ್ ಮೊದಲಾದವರು ದ್ರಾವಿಡ ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಮಹತ್ತರವಾದ ಸೇವೆ ಸಲ್ಲಿಸಿದ ಪಾಶ್ಚಾತ್ಯ ಅಥವಾ ವಿದೇಶಿ ವಿದ್ವಾಂಸರಾಗಿದ್ದರು. ಆದರೆ ದ್ರಾವಿಡರೇ ಈ ಕ್ಷೇತ್ರಕ್ಕೆ ಇಷ್ಟೊಂದು ಪ್ರಮಾಣದ ಕೆಲಸಮಾಡಿದವರು ಇರಲಿಲ್ಲ. ಆದರೆ ಇದೆಲ್ಲದರ ಮುಂದುವರಿಕೆಯಾಗಿ ಆಯಾ ಭಾಷಿಕತೆಯೊಳಗಿನಿಂದ ಅನಂತರ ಕಾಣಿಸಿಕೊಂಡರು. ಅಂತಹವರಲ್ಲಿ ಮೊದಲಿಗರು ಪ್ರಮುಖರೂ ಆದ ಎಲ್. ವಿ. ರಾಮಸ್ವಾಮಿ ಅಯ್ಯರ್ ಆಗಿದ್ದಾರೆ.

ರಾಮಸ್ವಾಮಿ ಅಯ್ಯರ್ ಅವರು ದ್ರಾವಿಡ ಶಬ್ದಗಳ ನಿಷ್ಪತ್ತಿಯ ಕುರಿತು ಮೊದಲು ವಿವೇಚನೆಯನ್ನು ನಡೆಸಿದರು. ಈಗಾಗಲೇ ಭಾಷಾವಿಜ್ಞಾನ ಹಲವು ಕ್ಷೇತ್ರಗಳಾಗಿ ತನ್ನ ಬಾಹುಗಳನ್ನು ವಿಸ್ತರಿಸಿಕೊಂಡಿದ್ದನ್ನು ಬಲ್ಲ ರಾಮಸ್ವಾಮಿ ಅಯ್ಯರ್ ಅವರು ತುಳು ಭಾಷಾ ಧ್ವನಿ ವ್ಯವಸ್ಥೆ, ಮಲೆಯಾಳಂ ಆಕೃತಿಮಾಗಳ ವಿಕಾಸ, ದ್ರಾವಿಡದಲ್ಲಿ ಪ್ರೇರಣಾರ್ಥಕ ಕ್ರೀಯಾಪದಗಳು, ದ್ರಾವಿಡ ಭಾಷೆಗಳಲ್ಲಿ ಕೆಲವು ಪ್ರತ್ಯಯಗಳು, ತಮಿಳು ಮಲೆಯಾಳಂ ವ್ಯರ್ತ್ಯಸ್ಪರ್ಶ ಧ್ವನಿಗಳು ಮುಂತಾದ ಲೇಖನಗಳನ್ನು ಪ್ರಕಟಿಸಿದರು. ಮಲೆಯಾಳಂನ ಪ್ರಾಚೀನ ವ್ಯಾಕರಣ ಕೃತಿಯಾದ ಲೀಲಾತಿಲಕ ವ್ಯಾಕರಣಕ್ಕೆ ವ್ಯಾಖ್ಯಾನವನ್ನು ರಚಿಸಿದರು.

ದ್ರಾವಿಡ ಮತ್ತು ಸಂಸ್ಕೃತದ ವರ್ಗ ಅಥವಾ ವಂಶವೃಕ್ಷವನ್ನು ಈಗಾಗಲೇ ಸ್ಪಷ್ಟಪಡಿಸಿ ಹೊಸ ಸಂಚಲನವನ್ನೇ ಉಂಟುಮಾಡಿದ್ದ ಕಾಲ್ಡ್‌ವೆಲ್‌ನ ಮೇರು ಕೃತಿ 'ದ್ರಾವಿಡ ಭಾಷೆಗಳ ತೌಲನಿಕ ವ್ಯಾಕರಣ' ಗ್ರಂಥದ ಕೆಲವು ಕೊರತೆ ಅಥವಾ ನ್ಯೂನ್ಯತೆ

ಮತ್ತು ಅಧ್ಯಯನದ ಮಿತಿಗಳನ್ನು ಗುರುತಿಸಿದನು. ಈ ಕುರಿತು ಆತನ ಮೂರು ನ್ಯೂನ್ಯತೆಗಳು ಪ್ರಮುಖವಾದವು.

೧. ಮಧ್ಯ ಭಾರತ ಮತ್ತು ಉತ್ತರ ಭಾರತದ ದ್ರಾವಿಡ ಉಪಭಾಷೆಗಳನ್ನು ಕುರಿತು ಪೂರ್ಣವಾದ ಮಾಹಿತಿ ಆತನಿಗೆ ಉಪಲಬ್ಧವಿರಲಿಲ್ಲ. ಕಾಲ್ಡ್‌ವೆಲ್ ಉಪಯೋಗಿಸಿಕೊಂಡ ಮಿತ ಮಾಹಿತಿಯೂ ಕೂಡ ಅಪೂರ್ಣ ಹಾಗೂ ದೋಷಯುಕ್ತವಾಗಿತ್ತು.

೨. ದಕ್ಷಿಣ ದ್ರಾವಿಡ ಭಾಷೆಗಳಲ್ಲೂ ಆತ ಯೂರೋಪಿನ ವಿದ್ವಾಂಸರು ಸಿದ್ದಪಡಿಸಿದ್ದ ಮಲೆಯಾಳಂ, ಕನ್ನಡ ಮತ್ತು ತೆಲುಗು ಭಾಷೆಗಳ ವ್ಯಾಕರಣಗಳಲ್ಲಿ ದೊರೆಯುವ ಮಾಹಿತಿಯನ್ನು ಅವಲಂಬಿಸಬೇಕಾಯಿತು. ಇವುಗಳಲ್ಲೂ ಕನ್ನಡದಲ್ಲಿ ಕಿಟೆಲ್ ಅವರದು ಬಹುವಾಗಿ ವಿಶ್ವಾಸಾರ್ಹ ಆಧಾರವಾಗಿತ್ತು. ಆದರೆ ಬ್ರೌನ್ ಅವರು ಕೊಟ್ಟ ತೆಲುಗು ಭಾಷೆಯ ಪರಿಚಯ ಮಾಹಿತಿಗಳು ಅಪೂರ್ಣವಾಗಿದ್ದವು. ಉದಾಹರಣೆಗೆ: ತೆಲುಗು ಭಾಷೆಯ ಪ್ಲುತಾಂತ ಶಬ್ದಗಳ ವಿವೇಚನೆ ಅತೃಪ್ತಿಕರವಾಗಿದೆ.

೩. ಇನ್ನು ತಮಿಳು ಭಾಷೆಯನ್ನು ಕುರಿತು ಕೂಡ ಕಾಲ್ಡ್‌ವೆಲ್ ಮೂಲ ಕೃತಿಗಳನ್ನು ಅವಲೋಕಿಸಿದಂತೆ ಕಾಣುವುದಿಲ್ಲ. ಅಲ್ಲದೆ ಸಂಗಮ್ ಕಾಲದ ಸಾಹಿತ್ಯವಂತೂ ಆಗಿನ್ನೂ ದೊರೆತೇ ಇರಲಿಲ್ಲ. ಅದರಿಂದ ಆತ ತನ್ನ ಬಳಿ ಇದ್ದ ಪಂಡಿತರು ಒದಗಿಸಿದ ವಿವರಗಳನ್ನು ಪ್ರಮಾಣವೆಂದು ಅಂಗೀಕರಿಸಿದ[೮].

ಹೀಗೆ ಆಲೋಚಿಸುವ ಮೂಲಕ ದ್ರಾವಿಡ ಭಾಷೆಗಳನ್ನು ಕುರಿತು ಇನ್ನಷ್ಟು ಅಧ್ಯಯನಕ್ಕೆ ತೀವ್ರವಾಗಿ ತೊಡಗಿಕೊಳ್ಳಲು ಸಾಧ್ಯವಾಗುವ ವಾತಾವರಣವನ್ನು ರೂಪಿಸಿದನು. ಐತಿಹಾಸಿಕ ಭಾಷಾವಿಜ್ಞಾನ, ತೌಲನಿಕ ಭಾಷಾವಿಜ್ಞಾನ, ವಿವರಣಾತ್ಮಕ ಭಾಷಾವಿಜ್ಞಾನ ಮುಂತಾದವುಗಳ ಮೂಲಕ ಭಾಷಾಧ್ಯಯನ ದ್ರಾವಿಡ ಭಾಷೆಗಳ ಕುರಿತು ಇನ್ನಷ್ಟು ಹೊಸ ಹೊಸ ಸಂಗತಿಗಳು ಕಾಣಲ್ಪಟ್ಟವು. ಸಾಮಾನ್ಯ ಭಾಷಾವಿಜ್ಞಾನದಂತೆಯೇ ಆನ್ವಯಿಕ ಭಾಷಾವಿಜ್ಞಾನವು ಹಲವು ವಿಭಾಗಗಳನ್ನು ಹೊಂದಿತ್ತು. ಸಾಮಾಜಿಕ ಭಾಷಾವಿಜ್ಞಾನ, ಮನೋಭಾಷಾವಿಜ್ಞಾನ, ಮಾನವ ಭಾಷಾವಿಜ್ಞಾನ, ಗಣಿತೀಯ ಭಾಷಾವಿಜ್ಞಾನ, ಗಣಕ ಭಾಷಾವಿಜ್ಞಾನ, ಜೈವ ಭಾಷಾವಿಜ್ಞಾನ, ವೈದೃಶ್ಯಾತ್ಮಕ ಭಾಷಾವಿಜ್ಞಾನ, ಕ್ಷೇತ್ರ ಭಾಷಾವಿಜ್ಞಾನ ಅಲ್ಲದೆ ತೌಲನಿಕ ಭಾಷಾವಿಜ್ಞಾನವೂ ತನ್ನ ಒಡಲನ್ನು ಸೀಳಿಕೊಂಡು ಇನ್ನಷ್ಟು ಅಂಗಾಂಗಗಳನ್ನು ಪಡೆಯಿತು. ಧ್ವನಿವಿಜ್ಞಾನ, ಧ್ವನಿಮಾ ವಿಜ್ಞಾನ ಆಕೃತಿಮಾವಿಜ್ಞಾನ, ಪದ ವಿಜ್ಞಾನ,

ವಾಕ್ಯವಿಜ್ಞಾನ, ಅರ್ಥವಿಜ್ಞಾನ, ಕೋಶ ವಿಜ್ಞಾನ, ಭಾಷಾಭೂಗೋಳ, ಲಿಪಿ ವಿಜ್ಞಾನ ಹೀಗೆ ಭಾಷಾಧ್ಯಯನವು ವಿಜ್ಞಾನ ಮಾದರಿಯಲ್ಲಿ ಜಗತ್ತಿ ನಾದ್ಯಂತ ಮತ್ತು ಭಾಷೆಯನ್ನು ಹತ್ತು ಹಲವು ಮಾರ್ಗಗಳ ಮೂಲಕ ಅಧ್ಯಯನಕ್ಕೆ ಒಳಪಡಿಸಿತು.

ವಿಜ್ಞಾನ ಅಥವಾ ಶಾಸ್ತ್ರೀಯ ಮಾದರಿಯ ಅಧ್ಯಯನಗಳು ಪಾಶ್ಚಾತ್ಯ ವ್ಯಾಕರಣ ಮಾದರಿಯ ಮುಂದುವರಿಕೆಯಾಗಿಯೇ ನಡೆದ ಭಾಷಾಧ್ಯಯನವಾಗಿದೆ. ಹದಿನೆಂಟು – ಹತ್ತೊಂಬತ್ತನೆಯ ಶತಮಾನದಲ್ಲಿ ಕ್ರಿಶ್ಚಿಯನ್ ಮಿಶಿನರಿಗಳು ಕನ್ನಡವೂ ಸೇರಿದಂತೆ ಭಾರತದ ಹಲವು ಭಾಷೆಗಳ ವ್ಯಾಕರಣಾಂಶಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದ್ದು ಇದೆ. ಮತ ಪ್ರಚಾರದ ನಿಮಿತ್ತನಾಗಿ ಸ್ಥಳೀಯ ಭಾಷೆ, ಜನ ಸಂಸ್ಕೃತಿಯೊಂದಿಗೆ ಬೆರೆಯುತ್ತ ದಾಖಲೆಗಳನ್ನೂ ಪೇರಿಸಿ ಅಧ್ಯಯನಕ್ಕೆ ಮುಂದಾದದ್ದು ಈ ಹಿಂದಿನ ಅಧ್ಯಾಯದಲ್ಲಿ ನೋಡಲಾಗಿದೆ. ಪಾಶ್ಚಾತ್ಯರ ವ್ಯಾಕರಣದಿಂದ ಭಾಷಾವಿಜ್ಞಾನದ ವ್ಯಾಪಕ ಪರಿವರ್ತನೆ ಅಥವಾ ಮುಂದುವರಿಕೆಯನ್ನು ಅಭ್ಯಾಸಿಸದ ದೇಶೀಯ ಹಲವು ವಿದ್ವಾಂಸರು ಅಂತಹದ್ದೇ ಪ್ರಯತ್ನದಲ್ಲಿ ತಮ್ಮನ್ನು ತೊಡಗಿಸಿಕೊಂಡರು.

ಭಾಷಾವಿಜ್ಞಾನ ಅಥವಾ ಭಾಷಾಶಾಸ್ತ್ರ ಮಾದರಿಯ ಅಧ್ಯಯನದಲ್ಲಿ ಮುಖ್ಯವಾಗಿ ಮೂರು ಮಾದರಿಗಳಲ್ಲಿ ಬರಹಗಳನ್ನು ಗುರುತಿಸಬಹುದಾಗಿದೆ.

೧. ಐತಿಹಾಸಿಕ ಭಾಷಾವಿಜ್ಞಾನ ಅಥವಾ ಚಾರಿತ್ರಿಕ ಭಾಷಾ ವಿಜ್ಞಾನ
೨. ತೌಲನಿಕ ಭಾಷಾವಿಜ್ಞಾನ
೩. ವಿವರಣಾತ್ಮಕ ಅಥವಾ ವಿಶ್ಲೇಷಣಾತ್ಮಕ ಭಾಷಾವಿಜ್ಞಾನ

೧. ಐತಿಹಾಸಿಕ ಭಾಷಾ ವಿಜ್ಞಾನದಲ್ಲಿ ಒಂದು ಭಾಷೆಯ ಐತಿಹಾಸಿಕ ಮೆಟ್ಟಿಲುಗಳನ್ನು ಗುರುತಿಸುತ್ತಾ ಅದರ ಇತಿಹಾಸವನ್ನು ಶೋಧಿಸುವುದು. ಅದು ಪರಿವರ್ತನೆಗೊಳಗಾಗಿ ನಡೆದು ಬಂದ ರೀತಿಯನ್ನು ವಿವರಿಸುವುದು ಮುಖ್ಯವಾಗುತ್ತದೆ. ಉದಾಹರಣೆಗೆ : ಹಳಗನ್ನಡ, ನಡುಗನ್ನಡ, ಹೊಸಗನ್ನಡ ಹಂತಗಳನ್ನು ವಿವರಿಸಿ ಕನ್ನಡ ಭಾಷೆಯ ಸಂಪೂರ್ಣ ಚರಿತ್ರೆಯನ್ನು ನೀಡುವುದನ್ನು ಐತಿಹಾಸಿಕ ಭಾಷಾವಿಜ್ಞಾನದಲ್ಲಿ ಕಾಣಬಹುದಾಗಿದೆ. ಹೀಗೆ ಯಾವುದೇ ಭಾಷೆಯ ಐತಿಹಾಸಿಕ ಮಜಲುಗಳನ್ನು ಗುರುತಿಸಿ ಅದರ ಇತಿಹಾಸವನ್ನು ಕಂಡುಹಿಡಿಯುವುದನ್ನು ಐತಿಹಾಸಿಕ ಭಾಷಾವಿಜ್ಞಾನ ಎನ್ನುತ್ತಾರೆ.

೨. ತೌಲನಿಕ ಭಾಷಾ ವಿಜ್ಞಾನದಲ್ಲಿ ಎರಡು ಅಥವಾ ಎರಡಕ್ಕಿಂತ ಹೆಚ್ಚು ಭಾಷೆಗಳ ತೌಲನಿಕ ಅಧ್ಯಯನ ನಡೆಯುತ್ತದೆ. ಇಲ್ಲಿ ಅಭ್ಯಸಿಸುವ ಭಾಷೆಗಳು ಸಾಮಾನ್ಯವಾಗಿ ಒಂದೇ ಗುಂಪಿಗೆ ಸೇರಿದ ಭಾಷೆಗಳಾಗಿರುತ್ತವೆ. ಉದಾಹರಣೆಗೆ : ಕನ್ನಡ, ತಮಿಳು, ತೆಲುಗು ಇವುಗಳ ತುಲನಾತ್ಮಕ ಅಧ್ಯಯನವನ್ನು ಇಲ್ಲಿ ಸೇರಿಸಬಹುದು. ಇಂಥ ಅಧ್ಯಯನದಿಂದ ಆ ಭಾಷೆಗಳ ಮೂಲ ರೂಪವನ್ನು ಗುರುತಿಸಬಹುದು.

೩. ವಿವರಣಾತ್ಮಕ ಭಾಷಾವಿಜ್ಞಾನ – ನಾವು ಆಡುವ ಭಾಷೆಯನ್ನು ಪರಿಶೀಲಿಸಿದರೆ ಮೊದಲು ಕಣ್ಣಿಗೆ ಬೀಳತಕ್ಕುವೆಂದರೆ, ವಾಕ್ಯಗಳು. ನಾವು ವಾಕ್ಯಗಳಲ್ಲಿ ಮಾತನಾಡುತ್ತೇವೆ. ಎಷ್ಟೋ ಬಾರಿ ಒಂದು ಪದವೇ ಒಂದು ವಾಕ್ಯದ ರೂಪವಾಗಿರಲೂಬಹುದು. ಇಂತಹ ಕಡೆ ಸನ್ನವೇಶವೇ ಉಳಿದ ವಾಕ್ಯಾಂಶವನ್ನು ಧ್ವನಿಸುತ್ತಿರುತ್ತದೆ. ವಾಕ್ಯಗಳಲ್ಲಿ ಪದಗಳಿರುತ್ತವೆ. ಪದಗಳಲ್ಲಿ ಧ್ವನಿಗಳಿರುತ್ತವೆ. ಭಾಷೆಯ ಅತ್ಯಂತ ಚಿಕ್ಕ ಘಟಕ ಧ್ವನಿ. ಆದ್ದರಿಂದ ವಿವರಣಾತ್ಮಕ ಭಾಷಾ ವಿಜ್ಞಾನದ ಆರಂಭದಲ್ಲಿ ಧ್ವನಿ ಹುಟ್ಟುವ ಬಗ್ಗೆ, ಧ್ವನಿ ವರ್ಗೀಕರಣ, ಅಂತರ್ ರಾಷ್ಟ್ರೀಯ ಧ್ವನಿ ಲಿಪಿ ಇತ್ಯಾದಿ ಚರ್ಚೆಗೆ ಬರುತ್ತದೆ. ಹೀಗೆ ವಿವರಣಾತ್ಮಕ ಭಾಷಾವಿಜ್ಞಾನವೂ ವಾಕ್ಯದೊಳಗಿನ ಸೂಕ್ಷ್ಮ ಜಗತ್ತನ್ನು ಪರಿಚಯಿಸತೊಡಗಿತು.

ಹಾಗೆಯೇ ಇವತ್ತು ಭಾಷಾ ವಿಜ್ಞಾನವು ಅನೇಕ ಶಾಸ್ತ್ರಗಳೊಡನೆ ಅವಿನಾಭಾವ ಸಂಬಂಧವನ್ನು ಹಿಂದಿಗಿಂತ ಇಂದು ಹೆಚ್ಚು ಹೊಂದಿದೆ. ಉದಾಹರಣೆಗೆ : ಮಾನವಶಾಸ್ತ್ರ, ಮನಃಶಾಸ್ತ್ರ, ಸಮಾಜ ಶಾಸ್ತ್ರ, ಗಣಕ ಶಾಸ್ತ್ರ, ಇತಿಹಾಸ ಮುಂತಾಗಿ. ಹೀಗಾಗಿ ಸಾಮಾಜಿಕ ಭಾಷಾವಿಜ್ಞಾನ, ಮಾನವ ಭಾಷಾವಿಜ್ಞಾನ, ಮನೋ ಭಾಷಾವಿಜ್ಞಾನ ಮುಂತಾದ ಅನೇಕ ಶಾಸ್ತ್ರ ಅಥವಾ ವಿಜ್ಞಾನ ಅಂಗೋಪಾಂಗವಾಗಿ ಬೆಳೆದಿವೆ. ಇದನ್ನೇ ಪ್ರತ್ಯೇಕ ಭಾಗವಾಗಿ ಆನ್ವಯಿಕ ಭಾಷಾವಿಜ್ಞಾನ ಎಂದು ಗುರುತಿಸುವುದು ಇದೆ.

**ಕನ್ನಡ ಭಾಷಾಶಾಸ್ತ್ರ (Philology) ದ ತಾತ್ವಿಕ ಬರಹಗಳು ಮತ್ತು ದೃಷ್ಟಿ.**

೧. ಕನ್ನಡದಲ್ಲಿ ಭಾಷಾಶಾಸ್ತ್ರದ ಬರಹಗಳು ಆರಂಭವಾದದ್ದು ಇಂಗ್ಲೆಂಡಿನಲ್ಲಿ. ಭಾಷಾ ಶಿಕ್ಷಣವನ್ನು ವ್ಯಾಸಂಗಮಾಡಿದ ಕನ್ನಡದ ಕೆಲವು ವಿದ್ವಾಂಸರಿಂದ ಮತ್ತು ಆ ಅಧ್ಯಯನದ ಬಗೆಯೂ ಸಹ ಇಂಗ್ಲೆಂಡ್ ಸೇರಿದಂತೆ ಪಾಶ್ಚಾತ್ಯದಲ್ಲಿ ಸಿದ್ಧಗೊಂಡ ಸಿದ್ಧಾಂತಗಳ ತಾತ್ವಿಕ ದೃಷ್ಟಿಯ ಮೂಲಕವಾದ ಚಲನೆಯಲ್ಲಿ ಮೊದಲು ಭಾಷಾಧ್ಯಯನವು ಅನುಗಮನ (Inductive) ರೀತಿಯಲ್ಲಿ ವಸ್ತುನಿಷ್ಟವಾದ ಅಧ್ಯಯನಕ್ಕೆ ತೆರೆದುಕೊಂಡಿತು. ಇದಕ್ಕೆ ನಿದರ್ಶನವಾಗಿ ಆರ್. ಪಿ.

ಜಾಗೀರ್‌ದಾರರ 'ಶಾರದೆಯ ಸಂಸಾರ' ಗ್ರಂಥವನ್ನು ನೋಡಬಹುದು. ಸಾಹಿತ್ಯಕ ಶೈಲಿಯಲ್ಲಿ ಅಥವಾ ಕಾದಂಬರಿಯ ಮಾದರಿಯಲ್ಲಿ ನಿರೂಪಿಸುತ್ತಲೇ ಕನ್ನಡ ಭಾಷೆಯ ಭಾಷಿಕ ಆಯಾಮಗಳನ್ನು ವಿವರಿಸಲು ಯತ್ನಿಸುತ್ತದೆ. ಆದರೆ ಈ ಕೃತಿಯು ವೈಜ್ಞಾನಿಕತೆಗಿಂತ ವಸ್ತು ನಿಷ್ಠವಲ್ಲದ ವಿವರಗಳಲ್ಲಿಯೇ ಉಳಿದು ನಿರಾಶೆಗೆ ಕಾರಣವಾಗುತ್ತದೆ.

ಭಾಷಾವಿಜ್ಞಾನವು ಕೇವಲ ಬರಹದ ಭಾಷೆಯನ್ನು ಮಾತ್ರ ತನ್ನ ಅಧ್ಯಯನದ ವ್ಯಾಪ್ತಿ ಅಥವಾ ಪ್ರಪಂಚವೆಂದು ಈ ಹಿಂದಿನ ವ್ಯಾಕರಣ ಮಾದರಿಯಂತೆ ಉಳಿಯಲಿಲ್ಲ. ಆ ಕಾರಣದಿಂದಾಗಿಯೇ ಅಧ್ಯಯನದ ಕುತೂಹಲವನ್ನು ತಳೆಯಿತೆಂದು ಕಾಣುತ್ತದೆ. ಅಂದರೆ ಭಾಷಿಕ ಸಮುದಾಯ – ಸಮುದಾಯಗಳಲ್ಲಿ ಜೀವಂತವಾಗಿರುವ ಆಡು ನುಡಿಯನ್ನು ಅಧ್ಯಯನಕ್ಕೆ ಒಳಪಡಿಸುವ ವಿಧಾನವನ್ನು ಭಾಷಾವಿಜ್ಞಾನದಲ್ಲಿ ಕಾಣುತ್ತೇವೆ. ಭಾಷಾವಿಜ್ಞಾನಿಗಳಿಗೆ ಆಡು ನುಡಿಯೇ ಪ್ರಮಾಣ ಆಕರ. ಜನರಾಡುವ ಭಾಷಿಕ ಪ್ರಭೇದಗಳು ಉಪಭಾಷೆಗಳು ಅಧ್ಯಯನದ ಬಹು ಮುಖ್ಯ ಆಸಕ್ತಿಯೂ ಆಗಿತ್ತು. ಇದರಿಂದ ಭಾಷೆಯ ರೂಪ ವಸ್ತುವನ್ನು ವಿಶ್ಲೇಷಿಸುವ ಕ್ರಮ ಕೂಡ ಬದಲಾಯಿತು. ಭಾಷೆಯ ವಿಭಿನ್ನ ವ್ಯಾಕರಣಾತ್ಮಕ ಘಟಕಗಳು ಒಂದರೊಳಗೊಂದು ಹೆಣೆದುಕೊಂಡು ಒಟ್ಟು ರಚನೆಯಾಗಿರುತ್ತವೆ. ಭಾಷೆಯನ್ನು ಬಿಡಿ ಬಿಡಿಯಾಗಿ ಛಿದ್ರಗೊಳಿಸಿ ನೋಡುತ್ತಲೆ ಅದರ ಒಟ್ಟು ಸ್ವರೂಪದ ಕಡೆಗೆ ಗಮನಕೊಡುವುದು ಭಾಷಾವಿಜ್ಞಾನದ ಕರ್ತವ್ಯ. ಭಾಷೆ ಸ್ಥಗಿತವಾದುದಲ್ಲ. ಅದು ಪರಿವರ್ತನೆಗೆ ಒಳಗಾಗುವ ಚಲನಶೀಲ ಸಂರಚನೆ. ಸಮುದಾಯದ ಸಂವಹನ ವ್ಯವಸ್ಥೆಯೊಳಗೆ ಬಳಕೆಗೊಳ್ಳುತ್ತ ಸಂವಹನಿಗಳ ಸಾಂಸ್ಕೃತಿಕ ಸಾಮಾಜಿಕ ರಾಜಕೀಯ ಅಂಶಗಳಿಗೆ ಮುಖ್ಯವಾಗುವ ಒಂದು ಸಾಂಸ್ಕೃತಿಕ ಸಂರಚನೆಯಾಗಿ ನೋಡಲಾಯಿತು.

೨. ಕನ್ನಡದಲ್ಲಿ ರಚನೆಯಾದ ವ್ಯಾಕರಣ ನಿಘಂಟುಗಳು ಮತ್ತು ಭಾಷಾವಿಜ್ಞಾನದ ಬರಹಗಳು ಪೂರ್ವದ ಚಿಂತನಾ ಕ್ರಮದ ಜೊತೆಗೆ ಸಂಸ್ಕೃತ ಮತ್ತು ಪಶ್ಚಿಮದ ಚಿಂತನಾಕ್ರಮ ಸೇರಿಕೊಂಡು ಬೆಳೆದದ್ದನ್ನು ಕಾಣಬಹುದಾಗಿದೆ. ಕಿಟೆಲ್‌ರ ಕನ್ನಡ ಇಂಗ್ಲೀಶ್ ನಿಘಂಟು ಆರ್. ನರಸಿಂಹಾಚಾರ್‌ರವರ The history of kannada language ಕೃತಿಯು ಭಾಷೆಯ ರಚನೆ, ಭಾಷಾ ಸ್ವೀಕರಣ, ಕನ್ನಡ ಭಾಷೆಯ ಘಟ್ಟಗಳನ್ನು ವಿವರಿಸುವ ಕೆಲಸವನ್ನು ಮಾಡುತ್ತದೆ. ಕನ್ನಡ ಭಾಷೆಯ ಚರಿತ್ರೆಯನ್ನು ರಚಿಸಿಕೊಳ್ಳುವ ಅಥವಾ ಕಂಡುಕೊಳ್ಳುವ ಪ್ರಯತ್ನಗಳು ಸಾಕಷ್ಟು ನಡೆದವು. ಶಾಸನ, ಹಳೆಗನ್ನಡ, ನಡುಗನ್ನಡ, ಹೊಸಗನ್ನಡವೆಂದು

ರೂಪಿಸಿಕೊಂಡು ಅವುಗಳ ಭಾಷಾ ಲಕ್ಷಣಗಳನ್ನು ವಿವರಿಸುವ ಮತ್ತು ಚರಿತ್ರೆಯ ಪ್ರಾಚೀನತೆಯನ್ನು ಸ್ಥಾಪಿಸುವ ಒಲವು ಕಾಣುತ್ತದೆ. ಜಿ. ಎಸ್. ಗಾಯಿ ಅವರ Historical Grammar of Old Kannada ಶಾಸನಗಳನ್ನು ಕುರಿತು ಡಿ. ಎನ್. ಮುಳಬಾಗಿಲು ಅವರ ನುಡಿಗಟ್ಟು, ಎಸ್. ಎಸ್. ಬಸವನಾಳ ಮತ್ತು ಪಂಡಿತ ಕವಲಿ 'ಕನ್ನಡ ಚನ್ನುಡಿ', 'ಮಾತಿನ ಮುನ್ನಡೆ'. ಡಿ. ಎನ್. ಮುಳಬಾಗಿಲ ಅವರ 'ಕನ್ನಡ ಕೈಪಿಡಿ' ಮುಂತಾದವು. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಕನ್ನಡ ಭಾಷೆಯ ರಚನೆ ಮತ್ತು ಪ್ರಯೋಗಗಳನ್ನು ಕುರಿತ ಬರಹಗಳಾಗಿವೆ.

೩. ಕನ್ನಡ ಭಾಷಾಶಾಸ್ತ್ರ :- ಭಾಷಾವಿಜ್ಞಾನಿಗಳ ಚಿಂತನೆಗಳ ಹಿನ್ನೆಲೆಯಲ್ಲಿ ಪ್ರಕಟವಾದ ಕೃತಿ ಕನ್ನಡ ಭಾಷಾಶಾಸ್ತ್ರ. ರಾ. ಯ. ಧಾರವಾಡಕರ ಅವರು ೧೯೫೧ರಲ್ಲಿ ಪ್ರಕಟಿಸಿದರು. ಆರ್. ಎಸ್. ಪಂಚಮುಖಿ, ಆ. ನೇ. ಉಪಧ್ಯಾಯ ಮತ್ತು ಕುವೆಂಪು ಅವರು ಈ ಕೃತಿಯ ಮಹತ್ವವನ್ನು ಹೇಳುತ್ತಾ ಭಾಷಾಶಾಸ್ತ್ರದ ತತ್ವಗಳನ್ನು ಕುರಿತಾಗಿ ಪುಸ್ತಕ ಕನ್ನಡ ಕೈಪಿಡಿಯ ಭಾಷಾಚರಿತ್ರೆಯ ಭಾಗವನ್ನು ಬಿಟ್ಟರೆ ಕನ್ನಡದಲ್ಲಿ ಈ ರೀತಿಯ ಗ್ರಂಥಗಳು ಇರಲಿಲ್ಲ. ಭಾಷೆ, ಉತ್ಪತ್ತಿ ಮತ್ತು ಬೆಳವಣಿಗೆ, ಭಾಷೆಯ ವರ್ಗೀಕರಣ ಮತ್ತು ದ್ರಾವಿಡ ವರ್ಗದ ಭಾಷೆಗಳು, ಕನ್ನಡ ವರ್ಣಮಾಲೆ ಉತ್ಪತ್ತಿ ಬೆಳವಣಿಗೆ ಮತ್ತು ಸಂಸ್ಕರಣ, ಕನ್ನಡ ಕೋಶ ಮತ್ತು ಅದರ ಬೆಳವಣಿಗೆ, ಕನ್ನಡ ಮತ್ತು ನೆರೆಹೊರೆಯ ಭಾಷೆಗಳು ಭಾಷೆಯಲ್ಲಿ ಕಂಡುಬರುವ ಕನ್ನಡ ಸಂಸ್ಕೃತಿ, ಕನ್ನಡ ವ್ಯಾಕರಣದ ಮುಖ್ಯಾಂಶಗಳು ಎಂಬ ಒಟ್ಟು ಏಳು ಪ್ರಕರಣಗಳಿವೆ. ಈ ಗ್ರಂಥದಲ್ಲಿ ಕನ್ನಡ ಭಾಷೆಯ ವ್ಯಾಕರಣಾಂಶಗಳು ಗೌಣವಾಗಿ ಭಾಷಾಶಾಸ್ತ್ರದ ವಿಚಾರಗಳು ಪ್ರಮುಖವಾಗಿ ಚರ್ಚಿಸಲ್ಪಟ್ಟಿವೆ. ಭಾಷೆಯ ಉಗಮದ ತತ್ವಗಳು ಅನುಕರಣ, ಉದ್ಗಾರ, ನಾದ ಸಂಕೇತ, ದ್ರಾವಿಡ ವರ್ಗದ ಭಾಷಾ ಸ್ವರೂಪ, ಪರ್ಶಿಯನ್, ಅರೆಬಿಕ್, ಹಿಂದುಸ್ಥಾನಿ, ಪೋರ್ಚ್‌ಗೀಸ್, ಫ್ರೆಂಚ್, ಇಂಗ್ಲೀಶ್, ತಮಿಳು, ತೆಲುಗು, ಮರಾಠಿ ಶಬ್ದಗಳ ಬಗ್ಗೆ ಅನೇಕ ಸಂಗತಿಗಳನ್ನು ಚರ್ಚಿಸುತ್ತದೆ.

೧೯೬೧ರಲ್ಲಿ ಪ್ರಕಟವಾದ ಆರ್. ಸಿ. ಹಿರೇಮಠ ಅವರ The structur of kannada ಎಂಬ ಕೃತಿಯು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ರಚನೆಗೊಂಡ ಆಧುನಿಕ ಕನ್ನಡ ವ್ಯಾಕರಣವೆಂದೇ ಗುರುತಿಸಲ್ಪಟ್ಟ ಕೃತಿಯಾಗಿದೆ. ಎಚ್.ಎಸ್.ಬಿಳಿಗಿರಿಯವರು ಈ ಕೃತಿಯ ಬಗ್ಗೆ ಬರೆಯುತ್ತ 'ಭಾರತೀಯ ವಿದ್ವಾಂಸರಿಂದ ಬರೆಯಲ್ಪಟ್ಟ ಭಾರತದ ಮೊಟ್ಟಮೊದಲ ಉಪಭಾಷಿಕ ರೂಪಗಳನ್ನು ಬಳಸಿಕೊಂಡು ಕನ್ನಡವನ್ನು ಧ್ವನಿಮಾಶಾಸ್ತ್ರ, ಆಕೃತಿಮಾಶಾಸ್ತ್ರ ಮತ್ತು ವಾಕ್ಯರಚನಾಶಾಸ್ತ್ರ ಎಂಬ ಮೂರು

ಅಧ್ಯಾಯಗಳಲ್ಲಿ ವಿಮರ್ಶಿಸಲಾಗಿದೆ" ಎಂದು ಈ ಪುಸ್ತಕದ ಮಹತ್ವವನ್ನು ಗುರುತಿಸಲಾಗಿದೆ.

ಡಾ. ಎಂ. ಚಿದಾನಂದ ಮೂರ್ತಿಯವರು ಭಾಷಾವಿಜ್ಞಾನ ಕುರಿತು ಬೇಸಿಗೆ ಶಿಬಿರದಲ್ಲಿ ಪಾಲ್ಗೊಂಡ ಫಲಿತವಾಗಿ ಭಾಷಾವಿಜ್ಞಾನದ ಮೂಲ ತತ್ವಗಳನ್ನು ಕುರಿತು ಕೃತಿಯನ್ನು ರಚಿಸಿದರು. ಭಾಷಾವಿಜ್ಞಾನದ ಮೂಲಭೂತವಾದ ತತ್ವಗಳನ್ನು ಕುರಿತು ರಚಿಸಲ್ಪಟ್ಟ ಕೃತಿಯಾಗಿದೆ. ಈಗಾಗಲೇ ಜಾಗತಿಕ ಮಟ್ಟದಲ್ಲಿ ನಡೆದ ಭಾಷಾಧ್ಯಯನದ ತತ್ವಗಳ ವಿಚಾರವನ್ನು ವಿವರಿಸುವ ಪ್ರಯತ್ನ ಈ ಕೃತಿಯದ್ದಾಗಿದೆ. ಭಾಷೆಯ ಉಗಮದ ವಿಭಿನ್ನ ಸಿದ್ಧಾಂತಗಳನ್ನು, ಭಾಷೆಯ ವರ್ಗೀಕರಣ ವಿಧಾನ ಅನೇಕ ಉದಾಹರಣೆಗಳೊಂದಿಗೆ ವಿವರಿಸುವ ಪ್ರಯತ್ನ ಮಾಡಲಾಗಿದೆ. ಭಾಷಾವ್ಯತ್ಯಾಸ, ಧ್ವನಿವ್ಯತ್ಯಾಸ, ಅರ್ಥವ್ಯತ್ಯಾಸ, ಭಾಷಾಸ್ವೀಕರಣಗಳನ್ನು ಕುರಿತು ಸಾಕಷ್ಟು ವಿವರವಾದ ಮಾಹಿತಿಯನ್ನು ಕೊಟ್ಟಿದ್ದಾರೆ. ಅಲ್ಲದೆ ಉಪಭಾಷೆ, ವ್ಯಕ್ತಿ ಭಾಷೆ, ಉಪಭಾಷಾ ಪರಿವೀಕ್ಷಣೆ ವಿಚಾರಗಳನ್ನು ಸಹ ತಿಳಿಸುತ್ತ ಧ್ವನಿ ವಿಜ್ಞಾನವನ್ನು ಕುರಿತು ಹಲವು ಪಾರಿಭಾಷಿಕ ಪದಗಳನ್ನೇ ಹುಟ್ಟುಹಾಕಿದ್ದಾರೆ. ಅವು ಇವತ್ತಿಗೂ ಭಾಷಾವಿಜ್ಞಾನದಲ್ಲಿ ಚಾಲ್ತಿಯಲ್ಲಿವೆ. ಕಠಿಣ ತಾಲು, ನಾಸಾಕುಹರ, ಜಿಹ್ವಾಗ್ರ, ಅಘೋಷ, ಘೋಷತಂತುಗಳು, ಕರಣ, ಉಚ್ಚಾರಣಾಸ್ಥಾನ, ಸಂವೃತ್ತ, ವಿವೃತ್ತ, ತಟಸ್ಥ ಸ್ವರ, ತಾಡಿತ, ಸ್ಪರ್ಶ ಮುಂತಾದವು. ಈ ಬಗೆಯ ಚಲನೆಯಿಂದಾಗಿ ಭಾಷಾವಿಜ್ಞಾನದ ಪ್ರಮುಖ ಕ್ಷೇತ್ರಗಳು ಕನ್ನಡದಲ್ಲಿ ಬೆಳೆಯಲು ಕಾರಣವಾಯಿತು. ಇಂತಹ ಪ್ರಯತ್ನವಾಗಿ ಪ್ರ. ಗೋ. ಕುಲಕರಣಿ ಅವರ ಕನ್ನಡ ಭಾಷೆಯ ಚರಿತ್ರೆ (೧೯೬೭), ಕೆ. ಎಂ. ಕೃಷ್ಣರಾವ್ ಅವರ ಕನ್ನಡ ಭಾಷೆಯ ಸ್ವರೂಪ (೧೯೬೮), ಹಂಪಾ ನಾಗರಾಜಯ್ಯ ಅವರ ಭಾಷಾವಿಜ್ಞಾನ (೧೯೬೮), ಎಚ್. ಎಸ್. ಬಿಳಿಗಿರಿಯವರ ಆಲೋಕ–೧ (೧೯೬೯), ತೆಕ್ಕುಂಜೆ ಗೋಪಾಲಕೃಷ್ಣ ಭಟ್ ರ ಕನ್ನಡ ಸಮಾಸಗಳು (೧೯೭೦), ಕೆ. ಜಿ. ಶಾಸ್ತ್ರಿಯವರ A Havyaka Dialect of North Kannada (೧೯೭೧), ಹಾ. ಮ. ನಾಯಕ ಅವರ Kannada literary and colloquial: A study of twostyles (೧೯೭೧), ಜಿ. ಎಸ್. ಕುಳ್ಳಿಯವರ ವರ್ಣನಾತ್ಮಕ ಭಾಷಾವಿಜ್ಞಾನ (೧೯೭೧), ರಾಜೇಶ್ವರಿ ಮಹೇಶ್ವರಯ್ಯ ಅವರ ಆಧುನಿಕ ವರ್ಣನಾತ್ಮಕ ಭಾಷಾವಿಜ್ಞಾನ (೧೯೮೯), ವಿಲಿಯಂ ಮಾಡ್ತರವರ ಕನ್ನಡ ಭಾಷೆಯ ರೂಪ ರೇಶೆಗಳು (೧೯೭೫), ಸಂಗಮೇಶ್ ಸವದತ್ತಿ ಮಠರವರ ಕನ್ನಡ ಭಾಷಾ ವ್ಯಾಸಂಗ (೧೯೭೯), ಕೆ. ಕೆಂಪೇಗೌಡ ಅವರ ಭಾಷೆ ಮತ್ತು ಭಾಷಾವಿಜ್ಞಾನ (೧೯೮೭), ಸಾಮಾನ್ಯ ಭಾಷಾವಿಜ್ಞಾನ (೧೯೯೬), ಕೆ. ಕುಶಾಲಪ್ಪ ಗೌಡರವರ ಭಾಷಾವಲೋಕನ (೧೯೬೮), ಡಿ. ಎನ್. ಶಂಕರ ಭಟ್ಟರ

ಕನ್ನಡ ಭಾಷೆಯ ಸಂಕ್ಷಿಪ್ತ ಚರಿತ್ರೆ (೧೯೬೯), ಎಸ್. ಎನ್. ಶ್ರೀಧರ್ ಅವರ Kannada Grammar, ಇಂದಿನ ಕನ್ನಡ : ರಚನೆ ಮತ್ತು ಬಳಕೆ ಮುಂತಾಗಿ ಭಾಷಾವಿಜ್ಞಾನ ಕ್ಷೇತ್ರವು ಸಮೃದ್ಧವಾಗಿ ಬೆಳೆದದ್ದನ್ನು ಕಾಣಬಹುದಾಗಿದೆ.

೧. ಭಾಷಾ ಶಾಸ್ತ್ರ ಅಥವಾ ವಿಜ್ಞಾನ ಮಾದರಿಯ ಅಧ್ಯಯನವು ಮತ್ತೆ ಮತ್ತೆ ಭಾಷೆಯನ್ನು ಅರ್ಥಮಾಡಿಕೊಳ್ಳುವ ಹತ್ತು ಹಲವು ಆಯಾಮಗಳ ಮೂಲಕ ನಡೆಯುತ್ತಲೇ ಇದೆ. ಇನ್ನೊಂದು ಮತ್ತೊಂದು ಸಿದ್ಧಾಂತ, ತತ್ವಗಳು ಭಾಷೆಯನ್ನು ಅಧ್ಯಯನ ಮಾಡುವ ಆಯುಧಗಳನ್ನು ದೊರಕಿಸುತ್ತಿದೆ.

೨. ಭಾಷಾವಿಜ್ಞಾನ ಮಾದರಿಯ ಅಧ್ಯಯನಕಾರರು ಅಮೇರಿಕಾ ಇಂಗ್ಲೆಂಡ್ ಮುಂತಾದ ದೇಶಗಳಿಗೆ ಹೋಗಿ ಅಲ್ಲಿ ತಾವು ಕಲಿತ ಹೊಸ ತಿಳುವಳಿಕೆ, ಭಾಷಾವಿಜ್ಞಾನದ ಮಾದರಿಗಳನ್ನು ಕನ್ನಡದಲ್ಲಿ ಹೇಳತೊಡಗಿದರು. ಮತ್ತು ಆ ಮಾದರಿಗಳ ಮೂಲಕ ಕನ್ನಡ ಭಾಷೆಯನ್ನು ವೀಕ್ಷಿಸಲು ಮುಂದಾದರು. "ವಿಶ್ವವಿದ್ಯಾಲಯಗಳಲ್ಲಿ ಕಲಿಸುತ್ತಿದ್ದ ಹಲವರು ಭಾಷಾ ಶಾಸ್ತ್ರದ ಬೇಸಿಗೆ ಶಿಬಿರಗಳಿಗೆ ಹೋಗಿ ಹೊಸ ತಿಳುವಳಿಕೆಯನ್ನು ಪಡೆಯತೊಡಗಿದರು. ಇದರಿಂದೇನಾಯಿತು? ಕನ್ನಡ ನುಡಿಯ ರಚನೆಯನ್ನು ಅರಿಯಲು ಈ ಹೊಸ ತಿಳುವಳಿಕೆಯ ನೆರವನ್ನು ಪಡೆಯಬೇಕು ಎಂಬುವವರದೊಂದು ಕಡೆಯಾದರೆ ಅಂತಹ ತಿಳಿವಿನ ನೆರವಿಲ್ಲದೆಯು ನಮ್ಮ ನುಡಿಯ ರಚನೆಯನ್ನು ಅರಿಯುವುದೇ ಸರಿ ಎಂದು ನಂಬಿದವರು ಇನ್ನೊಂದು ಕಡೆ ನಿಂತರು'[೧೦]. ಇದರಿಂದಾಗಿ ಎರಡು ಗುಂಪುಗಳು ತಿಳುವಳಿಕೆಯ ಶ್ರೇಷ್ಟತೆಯ ವ್ಯಸನ ಆವರಿಸಿದಂತೆ ಇತ್ತು. ಇದು ಅಧ್ಯಯನದ ಆಸಕ್ತಿಗಿಂತ ಬೇರೆಯದೇ ಆದ ಜಿದ್ದಿನ ಮಾರ್ಗವೇ ಮುಖ್ಯವಾಯಿತು. 'ಗಂಡ ಹೆಂಡತಿ ಜಗಳದಲ್ಲಿ ಕೂಸು ಬಡವಾಯಿತು' ಎನ್ನುವ ಮಾತಿನಂತೆ ಕನ್ನಡ ಭಾಷಾಧ್ಯಯನ ಹೊಸಮಾರ್ಗವನ್ನು ಕಂಡುಕೊಳ್ಳದೆ ನಡೆದ ದಾರಿಯಲ್ಲೇ ವಿಜ್ಞಾನ ಮಾದರಿಯು ಸಾಗಿತು. ಈ ವಿಜ್ಞಾನ ಮಾದರಿಯೇ ಮುಖ್ಯ ಎಂದು ವಾದಿಸಿ ನಡೆದ ವಿದ್ವಾಂಸರು ಸಾಕಷ್ಟು ಕನ್ನಡ ಭಾಷೆಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಇದರಲ್ಲಿ ಮುಖ್ಯವಾಗಿ ಕೆ. ವಿ ತಿರುಮಲೇಶ್, ಎಸ್. ಎನ್. ಶ್ರೀಧರ್, ಅಮೃತವಲ್ಲಿ, ಎಸ್. ಅನಂತನಾರಾಯಣ, ಎ. ಕೆ. ರಾಮಾನುಜನ್ ಮುಂತಾದವರು.

ಇನ್ನೊಂದು ನೆಲೆಯಲ್ಲಿದ್ದವರು ಭಾಷೆಯ ಒಳಗಿನಿಂದಲೇ ಆಯಾ ಭಾಷೆಯನ್ನು ಅಂದರೆ ಕನ್ನಡ ಭಾಷೆಯನ್ನು ಕನ್ನಡ ಭಾಷೆಯ ಅಂತಸ್ಥ ಜಗತ್ತಿನಿಂದಲೇ ಅರ್ಥೈಸಿಕೊಳ್ಳಬೇಕೆಂದ ಭಾಷಾಧ್ಯಯನಕಾರರೆಂದರೆ, ವಿಲಿಯಂ

ಬ್ರೈಟ್, ಜಾನ್ ಗುಂಫರ್ಜ್, ಮಾರ್ಕ್ ಅರನಾಫ್, ಕೆ. ವಿ. ನಾರಾಯಣ, ಡಿ. ಎನ್. ಶಂಕರ ಭಟ್ ಮುಂತಾದವರು.

ಭಾಷಾವಿಜ್ಞಾನ ಮಾದರಿಯೇ ಮುಖ್ಯವೆಂದ ದಾರಿಯು ಮುಂದಿನ ತಲೆಮಾರಿಗೂ ಅದು ಸಾಗುತ್ತಿದೆ. ಮತ್ತು ಇಂಗ್ಲೀಶ್‌ನ ಮೂಲಕ ಅಧ್ಯಯನ ಮಾದರಿಗಳನ್ನು ಅರ್ಥೈಸುವ ಪ್ರಕ್ರಿಯೆ ನಡೆದಿದೆ. ಇವರು ಇಂಗ್ಲೀಶ್‌ನ ನೆರಳಿನಲ್ಲಿ ಸಾಗುತ್ತಿದ್ದಾರೆ. ಆದ್ದರಿಂದಾಗಿ ಭಾಷಾ ವಿಜ್ಞಾನದ ಹೊಸ ತಿಳುವಳಿಕೆಗಳನ್ನು ಕನ್ನಡದ ಮೂಲಕ, ಕನ್ನಡದ ನೆಲೆಯಲ್ಲಿ ಬಳಕೆಯಾಗದಂತೆ ತಡೆಯುವಲ್ಲಿ ಇವೆಲ್ಲವೂ ಕಾರಣವಾಗಿವೆ.

ಈ ಮೊದಲಿನ ಸಂಸ್ಕೃತ ಮಾದರಿಯ ವ್ಯಾಕರಣದ ಚೌಕಟ್ಟು ಬದಲಾಗದೆ ಭಾಷೆಯನ್ನು ಕುರಿತು ನಡೆದ ಅಧ್ಯಯನ ಮತ್ತು ಪಾಶ್ಚಾತ್ಯರ ವಿಜ್ಞಾನ ಮಾದರಿಯ ಅಧ್ಯಯನದ ಚೌಕಟ್ಟು ಬದಲಾಗದೆ ಅದಕ್ಕೆ ಅನುಯಾಯಿಯಾಗಿ ಯಥಾವತ್ ಅನುಸರಿಸಿ ನಡೆಯುವುದು. ಇಲ್ಲೂ ಮುಂದುವರೆಯಿತು. ಭಾಷೆ ಹರಿಯುವ ತೊರೆ ಎನ್ನುತ್ತಲೇ ಅಧ್ಯಯನದ ಆಯುಧಗಳು ಮಾತ್ರ ಬದಲಾಗಲೇ ಇಲ್ಲ. ಹಾಗಾಗಿ ವ್ಯಾಕರಣ ಮಾದರಿಯ ಸನ್ನಿವೇಶದಲ್ಲಿ ಕಡೆದು ಇಟ್ಟ ಘಟ್ಟಗಳು ಮತ್ತು ಚಹರೆಗಳು ಈಗಲೂ ಅವೇ ಅವೇ ನಿದರ್ಶನಗಳಾಗಿ ಬಳಕೆಗೆ ಬಂದವು.

ಭಾಷಾವಿಜ್ಞಾನ ಮಾದರಿಯ ಅಧ್ಯಯನಕಾರರು ತಾವು ಒಪ್ಪಿರುವ ಮತ್ತು ಬಳಸುತ್ತಿರುವ ಭಾಷಾವಿಜ್ಞಾನದ ಚೌಕಟ್ಟಿಗೆ ಕನ್ನಡ ಹೊಂದುಕೊಳ್ಳುವ ಬಗೆಯನ್ನು ಕುರಿತು ವಿವರಿಸುವಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸಿದರು. ಹಾಗೆಯೇ ಒಪ್ಪಿತವಾದ ಚೌಕಟ್ಟಿಗೆ ಹೊಂದಿಕೆಯಾಗುವ ಉದಾಹರಣೆಗಳು ಕನ್ನಡದಲ್ಲಿ ಇವೆಯೇ ಎಂದು ಹುಡುಕುವ ಮತ್ತು ಹಾಗೆ ದೊರಕಿದವುಗಳನ್ನು ಅತ್ಯಂತ ಹೆಮ್ಮೆಯಿಂದ ಭಾಷಾಶಾಸ್ತ್ರದ ಚೌಕಟ್ಟಿಗೆ ಜೋಡಿಸಿ ತೋರ್ಪಡಿಸಿದರು. ಅಂತಹ ಸನ್ನಿವೇಶದಲ್ಲಿ ಕನ್ನಡದ ಉದಾಹರಣೆಗಳತ್ತ ಹೆಚ್ಚು ಆಸಕ್ತಿ ತಳೆದರು.

ಕರ್ನಾಟಕ ಏಕೀಕರಣ ಅಥವಾ ಸ್ವಾತಂತ್ರ ಚಳುವಳಿಯ ಸನ್ನಿವೇಶ ಮತ್ತು ಅನಂತರ ನಾಡು-ನುಡಿಯ ಚರಿತ್ರೆಗಳನ್ನು ದಾಖಲಿಸುವ ಜನಸಾಮಾನ್ಯರಿಗೆ ಆಸಕ್ತಿ,

ಅಭಿಮಾನ ಹುಟ್ಟುಹಾಕುವ ದೃಷ್ಟಿಯಿಂದಲೂ ಲಭ್ಯವಿದ್ದ ಮತ್ತು ಹುಡುಕಾಟ ನಡೆಸಿ ಹೆಕ್ಕಿತೆಗೆದ ಸಾಮಗ್ರಿಗಳನ್ನು ಕುರಿತು ಭಾಷೆಯ ಪ್ರಾಚೀನತೆಯನ್ನು ಸ್ಥಾಪಿಸುವ ಕುರಿತು ಸಹ ಸಾಕಷ್ಟು ಬರಹಗಳು ನಡೆದವು.

ಭಾಷಾಶಾಸ್ತ್ರದ ಸಿದ್ಧಾಂತಗಳನ್ನು ಅನ್ವಯಿಸುವ ಪ್ರಯತ್ನಗಳನ್ನು ಮಾಡಿದರು. ಮುಖ್ಯವಾಗಿ ವರ್ಣನಾತ್ಮಕ ಭಾಷಾಶಾಸ್ತ್ರ, ಚಾರಿತ್ರಿಕ ಭಾಷಾಶಾಸ್ತ್ರ ಮತ್ತು ತೌಲನಿಕ ಭಾಷಾಶಾಸ್ತ್ರದಲ್ಲಿ ಆಸಕ್ತಿ ಬೆಳೆದವು. ಇದರ ಪರಿಣಾಮವಾಗಿ ಹಲವು ಅಧ್ಯಯನಗಳು ನಡೆದಿವೆ. ವರ್ಣಣಾತ್ಮಕ ಭಾಷಾಶಾಸ್ತ್ರದ ನೆಲೆಯಲ್ಲಿ ಕನ್ನಡದ ಹಲವು ಪ್ರಬೇಧಗಳನ್ನು ವಿಶ್ಲೇಷಿಸುವ ಪ್ರಯತ್ನಗಳು ಮುಂದುವರೆದವು. ಮುಖ್ಯವಾಗಿ ಸಮಕಾಲೀನ ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಬೇಧಗಳನ್ನು ವಿವರಿಸಲು ಕೆಲವರು ಆಸಕ್ತರಾದರೆ, ಮತ್ತೆ ಕೆಲವರು ಕನ್ನಡದ ವಿವಿಧ ಚಾರಿತ್ರಿಕ ಪ್ರಬೇಧಗಳನ್ನು ವಿವರಿಸುವ ಪ್ರಯತ್ನಗಳನ್ನು ಮಾಡಿದರು. ಚಾರಿತ್ರಿಕ ಪ್ರಬೇಧಗಳನ್ನು ವಿಶ್ಲೇಷಿಸಲು ಸಾಹಿತ್ಯ ಕೃತಿಗಳನ್ನು ಮತ್ತು ಶಾಸನಗಳನ್ನು ಭಾಷಿಕ ಆಕರಗಳೆಂದು ಬಳಸಿಕೊಂಡಿದ್ದಾರೆ. ಈ ಎಲ್ಲ ಪ್ರಯತ್ನಗಳಿಂದ ಕನ್ನಡವನ್ನು ಆಧುನಿಕ ಭಾಷಾಶಾಸ್ತ್ರದ ಪರಿಕರಗಳ ಅನ್ವಯ ನೋಡುವ ಪ್ರಯತ್ನಗಳು ನೆಲೆಗೊಂಡವು. ಆದರೆ ಈ ಭಾಷಾವಿಜ್ಞಾನ ಆಡು ನುಡಿಯನ್ನು ಅಧ್ಯಯನಕ್ಕೆ ಒಳಪಡಿಸಿದೆ ಎಂಬುದು ನಿಜವಾಗಿರುವಂತೆಯೇ ಅಂತಹ ಪರಿಕರಗಳನ್ನು ಹೇಗೆ ನೋಡುತ್ತಿತ್ತು ಮತ್ತು ಯಾವ ನೆಲೆಯಲ್ಲಿ ಬಳಸಿಕೊಳ್ಳತ್ತಿತ್ತು ಎಂಬುದು ಸಹ ಮುಖ್ಯವಾಗುತ್ತದೆ.

ಶಬ್ದಮಣಿದರ್ಪಣದಲ್ಲೂ ಸಹ ಆಡು ನುಡಿಯನ್ನು ಗಮನಿಸಲಾಗಿದೆ ಎಂಬುದು ಕೇಶಿರಾಜನಿಂದ ಈವರೆಗೂ ಪ್ರಸ್ತಾಪಿಸಲಾಗುತ್ತಿದೆ. ಶಬ್ದಮಣಿ ದರ್ಪಣದಂತಹ ವ್ಯಾಕರಣ ಕೃತಿಯ ಮುಖ್ಯ ಉದ್ದೇಶ ಮತ್ತು ಯೋಚನೆಗಳನ್ನು ಸಂಸ್ಕೃತದಿಂದ ಪಡೆದದ್ದು. ಹಾಗೂ ಅದರಾಚೆಯೇ ನೋಡುವ ಪ್ರಯತ್ನವೆಂಬುದು ಸಹ ತಾನು ರೂಪಿಸಿಕೊಂಡ ನಿಯಮಗಳಿಗೆ ಹೊಂದಿಸಿಕೊಳ್ಳುವುದಾಗಿರುತ್ತದೆ. ಒಂದು ವೇಳೆ ನಿಯಮದಾಚೆಗೂ ಹೆಜ್ಜೆ ಹಾಕಿದಾಗಲೂ ಅಥವಾ ವೈಶಿಷ್ಟ್ಯಗಳನ್ನು ಗುರುತಿಸಿದಾಗಲೂ ನಿಯಮಗಳನ್ನು ಹೊಸದಾಗಿ ನಿರ್ಮಿಸುವುದಾಗಿದೆ. ಇಂತಹ ಕಾರ್ಯಕ್ಕೆ ವ್ಯಾಕರಣ ಮಾದರಿಯು ನಡೆದುಬಂದ ಒಂದು ಸಾವಿರ ವರ್ಷಗಳ ಚರಿತ್ರೆ ನಮ್ಮೆದುರು ಇದೆ. 'ಋ' ಅಕ್ಷರ ಬೇಕೊ ಬೇಡವೋ ಎಂಬ ಕುರಿತು ಈಗಲೂ ನಡೆಯುತ್ತಿರುವ ಚರ್ಚೆಯಲ್ಲಿ ಭಾಷಾಶಾಸ್ತ್ರಕಾರರು ಕೊಡುತ್ತಿರುವ ಉತ್ತರ ವ್ಯಾಕರಣಕಾರರಿಗಿಂತ ಭಿನ್ನವಾಗಿಯೇನು ಇಲ್ಲ. ಸಂಧಿ, ಸಮಾಸ, ಮಹಾಪ್ರಾಣ, ಅನುನಾಸಿಕ, ಸಂಧ್ಯಕ್ಷರ ಮುಂತಾದವುಗಳ ಕುರಿತು ನಡೆದ ಚರ್ಚೆಗಳು ಮತ್ತು

ಭಾಷಾಶಾಸ್ತ್ರಜ್ಞರ ನಿಲುವು ರೂಪಿಸಿಕೊಂಡ ಮತ್ತು ಈ ಹಿಂದಿನಿಂದ ಬಂದ ಶಾಸ್ತ್ರೀಯಕ್ಕೆ ಬದ್ಧರಾಗಿರುವುದು ಇದೆ. ಅಂದರೆ ಭಾಷಾಶಾಸ್ತ್ರಜ್ಞರು ಬರಹವನ್ನು ನೋಡುವುದಕ್ಕೂ, ಭಾಷೆ (ಮಾತು, ನುಡಿ) ಯನ್ನು ನೋಡುವುದಕ್ಕೂ ವ್ಯಾತ್ಯಾಸಗಳೇನೂ ಇಲ್ಲ.

ಭಾಷಾಶಾಸ್ತ್ರ ಅಥವಾ ಭಾಷಾವಿಜ್ಞಾನ ಮಾದರಿಯು ಈಗಲೂ ಮುಂದುವರೆದಿದೆ. ವ್ಯಾಕರಣ ಮಾದರಿಯೂ ಒಂದು ಬಗೆಯಲ್ಲಿ ಈ ವಿಜ್ಞಾನ ಮಾದರಿಯ ಹೊಳೆಯಲ್ಲಿ ಲೀನವಾಗಿದೆ. ಈ ಎರಡೂ ಮಾದರಿಗಳು ಕನ್ನಡ ಭಾಷೆಯ ಒಳಗಿನಿಂದ, ಅಂತಸ್ಥ ಜಗತ್ತನ್ನು ಒಳಗೊಂಡಂತೆ ಬೆಳೆಯದಿದ್ದರೂ ಭಾಷಾಧ್ಯಯನದ ಹಲವು ನೋಟಗಳನ್ನು ತಳ್ಳಿಹಾಕುವಂತಿಲ್ಲ. ಈಗಲೂ ಕನ್ನಡ ಭಾಷೆಯ ಅಧ್ಯಯನವೆಂದರೆ ಅದು ವ್ಯಾಕರಣ ಮತ್ತು ಭಾಷಾವಿಜ್ಞಾನ ಮಾದರಿ ಎಂದೇ ಅರ್ಥೈಸಲಾಗುತ್ತಿದೆ. ಇದಕ್ಕೆ ಕರ್ನಾಟಕದ ವಿಶ್ವವಿದ್ಯಾಲಯಗಳು ಸಹ ಭಿನ್ನವಾಗಿಯೇನು ಇಲ್ಲ.

**ಅಧ್ಯಾಯ – ೫.೩**

**ಕನ್ನಡದ್ದೇ ಭಾಷಾಧ್ಯಯನ ಮಾದರಿ**

ಹತ್ತೊಂಬತ್ತು – ಇಪ್ಪತ್ತನೆಯ ಶತಮಾನದ ಸನ್ನಿವೇಶದಿಂದ ಒಂದು ಹೊಸ ಕ್ರಾಂತಿಯೇ ಆರಂಭವಾಯಿತು. ಪ್ರಾಚೀನ ಕಾಲದಿಂದ ಒಂದು ಧಾರೆಯಂತೆ ಹರಿದು ಬಂದ ಅರಿಮೆಯ ನಡೆ ಅಥವಾ ಹಾಗೆ ಕಾಣುತ್ತಿರುವುದು ಮಾತ್ರ ಮುಖ್ಯವಾಗಿ ಕಾಣಲಾಗಿತ್ತು. ಅಂತಹ ಸಾಂಸ್ಕೃತಿಕ ಒಡ್ಡು ಹೊಡೆದು ಅಥವಾ ಹಲವು ಕೇಂದ್ರಗಳಿಂದ, ಸಮುದಾಯಗಳಿಂದ ಹೊರಟ ಭಾಷೆ, ಆಲೋಚನೆ, ಜ್ಞಾನ ಮುಂತಾದ ಪ್ರಾದೇಶಿಕ, ಸಾಮಾಜಿಕ ಹಲವು ಸ್ತರಗಳ ಒಳಗಿನ ತಿಳುವಳಿಕೆಯೂ ಮುಖ್ಯ ವೇದಿಕೆಗೆ ಲಗ್ಗೆ ಹಾಕಿರುವುದು. ಗೊತ್ತಾದ ಪ್ರದೇಶದ ಸಂಸ್ಕೃತಿ ಎನ್ನಲಾಗುವ ಜಾತಿ, ಭೌಗೋಳಿಕ ಪರಿಸರ, ಜೀವನ ಶೈಲಿ, ಇತಿಹಾಸ ಮುಂತಾದ ಸಂಗತಿಗಳ ಫಲಿತವಾಗಿ ಕಂಡುಬರುವ ವ್ಯತ್ಯಾಸಗಳನ್ನು ಲೆಕ್ಕಕ್ಕೆ ತೆಗೆದುಕೊಂಡಾಗ ಸಂಸ್ಕೃತಿಯ ಇನ್ನೆಷ್ಟೋ ನೆಲೆಗಳ ಇರುವಿಕೆಯು ನಮಗೆ ಸ್ಪಷ್ಟವಾಗಿ ಕಾಣುತ್ತದೆ. ಒಂದು ಪ್ರದೇಶದ ಭೌಗೋಳಿಕ ಲಕ್ಷಣಗಳಿಗೂ ಮತ್ತು ಅದರ ಭಾಷೆಗೂ ಇರುವ ಸಂಬಂಧಗಳನ್ನು

ಕುರಿತು ಅಧ್ಯಯನ ಮಾಡಲು ಕಳೆದ ಶತಮಾನದಿಂದೀಚೆಗೆ ಆಸಕ್ತಿಯನ್ನು ತಳೆಯಲಾಗುತ್ತಿದೆ.

ಪ್ರತಿಯೊಂದು ಪ್ರದೇಶದಲ್ಲಿಯೂ ಭಾಷೆಯು ತನ್ನದೇ ಆದ ವೈಶಿಷ್ಟತೆಯನ್ನು ರೂಪಿಸಿಕೊಂಡಿರುತ್ತದೆ. ಪಾಶ್ಚಾತ್ಯರಲ್ಲಿ ನಡೆದ ಅಧ್ಯಯನದ ಮಾದರಿಯ ಕನ್ನಡಕ ಧರಿಸಿ ಉಪಭಾಷೆಗಳೆಂದು ಕರೆದುಬಿಟ್ಟರೆ ಆಯಾ ಭಾಷಾ ಭಿನ್ನತೆಯ ಯಾವ ನಡೆಯನ್ನೂ ಹೇಳಿದಂತಾಗುವುದಿಲ್ಲ. ಏಕೆಂದರೆ ಭಾಷೆ ಎಂಬುದು ಕೇವಲ ಸಂವಹನದ ವಾಹಕವಾಗಿ ಯಂತ್ರದಂತೆ ಇರುವ ಉಪಕರಣ ಅಲ್ಲ. ಅದನ್ನು ಬಳಸುವ ಜನರ ಧರ್ಮ, ಚರಿತ್ರೆ, ಸಂಸ್ಕೃತಿ ಮತ್ತು ಬದುಕಿನ ನಾಡಿಮಿಡಿತಗಳನ್ನು ತನ್ನೊಳಗೆ ಅಡಗಿಸಿಕೊಂಡಿರುವ ಒಂದು ಅದ್ಭುತ ಪ್ರಪಂಚ. ಒಂದು ಗೊತ್ತಾದ ಮಾದರಿಯಲ್ಲಿ ಬಂದ ಬರಹದ ಚರಿತ್ರೆಯನ್ನು ವಿಶ್ಲೇಷಿಸಿ ವಿವರಿಸಿದರೆ. ಅದು ಅತ್ಯಂತ ಮಿತಿಯ ಮಾತೇ ಸರಿ ಮತ್ತು ಒಂದು ಭಾಷೆಯ ಹಲವು ವೈವಿಧ್ಯತೆಗಳನ್ನು ಹಾಳುಗೆಡವಿದಂತಾಗುತ್ತದೆ. ಬಹು ನೆಲೆಯ ಸಂಸ್ಕೃತಿಯನ್ನು ಭಾಷೆಗಳನ್ನು ಹೊಂದಿರುವ ಪ್ರದೇಶಗಳನ್ನು ಏಕನೆಲೆಯ ಸಂಸ್ಕೃತಿಯನ್ನಾಗಿ ಪ್ರತಿನಿಧಿಸುವ ಕೆಲಸವು ಅತ್ಯಂತ ತುರ್ತಿನಿಂದ ಮಾಡಲಾಗುತ್ತಿದೆ. ಹಾಗೆಯೇ ಬಹು ನೆಲೆಯ ಒಳಗಿನಿಂದ ಬರಹಗಾರರು ಬರೆಯುತ್ತಲೂ ಇದ್ದಾರೆ. ಆದರೆ ಅಂತಹ ಸಾಹಿತ್ಯವನ್ನು ಒಂದು ಕುತೂಹಲದ ಅಪರೂಪದ ಮೃಗಾಲಯದ ಪ್ರಾಣಿಯಂತೆ ಈವರೆಗಿನ ಭಾಷಾಧ್ಯಯನ ನೋಡಿದೆಯೇ ವಿನಹ, ವಿಶೇಷವಾದ ಆಸಕ್ತಿಯಿಂದ ಅಧ್ಯಯನ ಮಾಡಿಲ್ಲ. ಇಲ್ಲಿ ಎರಡು ಪ್ರಶ್ನೆಗಳಿವೆ. ಒಂದು ಈವರೆಗಿನ ಬರಹಗಾರರು ಒಂದು ಸಿದ್ದಮಾದರಿ: ಅಂದರೆ ಈಗಾಗಲೇ ಇರುವ ಮಾದರಿಯಲ್ಲಿ ಬರಹವನ್ನು ಮುಂದುವರೆಸುವುದು ಅದು ಶ್ರೇಷ್ಠ ಹಾಗೂ ಸಂಸ್ಕೃತಿಯ ಪ್ರತೀಕ. ಎರಡನೆಯದು ಭಾಷಾಧ್ಯಯನ ನೆಲೆಯದ್ದು. ಸ್ವತಹ ಭಾಷಾಧ್ಯಯನವೇ ಖಚಿತತೆಗಳನ್ನು ಕಂಡುಕೊಳ್ಳಲು ಪರದಾಡಿದ್ದು. ಒಮ್ಮೆ ಸಂಸ್ಕೃತ ಮತ್ತೊಮ್ಮೆ ಪಾಶ್ಚಾತ್ಯರ ಜೇಬಿಗೆ ಕೈಹಾಕಿ ಮುನ್ನಡೆದದ್ದು. ತನ್ನ ಜೇಬಿನಲ್ಲಿರುವ ನಿಧಿಯನ್ನು ಕಾಣಲಾಗದ್ದು. ಕನ್ನಡ ಮಾತು ಮತ್ತು ಬರಹದ ಬಗ್ಗೆ ಭಾಷೆಯ ಒಳಗಿನಿಂದಲೆ, ಭಾಷೆಯ ರಚನೆ ಮತ್ತು ವ್ಯವಹಾರದ ಎಳೆಗಳನ್ನು ಕಾಣುವುದು. ಈವರೆಗೆ ಸಾಧ್ಯವಾಗದ್ದು. ಒಂದು ಬಗೆಯಲ್ಲಿ ಬರಹ ಮತ್ತು ಭಾಷಾಧ್ಯಯನ ಸಾಂಸ್ಕೃತಿಕ ರಾಜಕಾರಣದ ಪ್ರಶ್ನೆಯಂತೆ ಹೆಗಲಿಗೆ ಹೆಗಲು ಕೊಟ್ಟು ನಡೆದಿದೆ.

ಭಾಷೆಯ ಅಧ್ಯಯನವೆಂದರೆ ಅದು ಬರಹದ ಅಧ್ಯಯನವಾಗಿದೆ. ಭಾಷೆ ಎಂದರೆ ಮಾತು ಎಂಬ ಪರಿಕಲ್ಪನೆಯೇ ಬದಲಾಯಿಸಿದೆ. ಹಾಗಾಗಿ ಮಾತಿನ

ಅಧ್ಯಯನ ಕುರಿತು ಆಸಕ್ತಿ ತಳೆದದ್ದು ತೀರಾ ತೀರಾ ಕಡಿಮೆ. ಅದು ಇಲ್ಲವೆನ್ನುವಷ್ಟು. ಧ್ವನಿ, ಧ್ವನಿಮಾ ವಿಜ್ಞಾನಗಳು ದೇಹವನ್ನು ಸೀಳುವ ಪ್ರಯೋಗಾಲಯವೇ ಪ್ರಧಾನವಾಗಿ ಹೊಂದಿರುವ ವಿಜ್ಞಾನ ಮಾದರಿ. ಮಾತಿನ ನಿಜವಾದ ಕಲಾತ್ಮಕ, ದೇಹಾತೀತವಾದ ವೈವಿಧ್ಯತೆಯನ್ನು ಕುರಿತು ಯೋಚಿಸಿಲ್ಲ. ಮಾತಿನ ನೆಲೆಯಿಂದ ನೋಡಿದಾಗ ಹತ್ತು – ಹಲವು ಉಪಭಾಷೆಗಳು ಮತ್ತು ಬೆಲೆಬಾಳುವ ಮಾಹಿತಿಗಳು ಈವರೆಗಿನ ಚರಿತ್ರೆಯ ಬಣ್ಣವನ್ನೇ ಬದಲಿಸಬಲ್ಲವು. ಕನ್ನಡ ಭಾಷೆಯ ಚರಿತ್ರೆಯನ್ನು ಮರಳಿಕಟ್ಟುವ ಹಾಗೂ ಅದರ ಮೂಲ ರೂಪವನ್ನು ಹುಡುಕಿ ತೆಗೆಯುವ ಕೆಲಸದಲ್ಲಿ ಡಿ. ಎನ್. ಶಂಕರಭಟ್, ಕೆ. ವಿ. ನಾರಾಯಣ ಮುಂತಾದ ವಿದ್ವಾಂಸರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸಂಶೋಧನೆಗಳು ಮತ್ತು ತಿಳುವಳಿಕೆಗಳು ಆಯಾ ಜಾಗಗಳೊಡಲಿನಿಂದಲೇ ಮೂಡಿಬರಬೇಕು. ಅಥವಾ ಆ ಜಾಗಕ್ಕೆ ಒಳಗಿನವರು ಮತ್ತು ಹೊರಗಿನವರ ಸಹಯೋಗದಲ್ಲಿ ನಡೆಯಬೇಕು. ಏಕೆಂದರೆ ಅನೇಕ ಸಲ ಹೊರಗಿನವರು ಬಹಳ ಕಡಿಮೆ ಸಾಕ್ಷಿಗಳಿಂದ ಬೀಸು ತೀರ್ಮಾನಗಳನ್ನು ಅಸಮರ್ಪಕ ತೀರ್ಮಾನಕ್ಕೆ ಕರೆದೊಯ್ಯುವ ಸಾಧ್ಯತೆ ಇರುತ್ತದೆ. ಮತ್ತು ಒಳಗಿನವರಿಗೆ ಭಾವುಕತೆ ಅಥವಾ ಮಾನಸಿಕ ದೂರವನ್ನು ಕಾಯ್ದುಕೊಳ್ಳುವುದು ತುಸು ಕಷ್ಟವಾಗಬಹುದು. ಅದೇನೆ ಇರಲಿ ಇವೆರಡನ್ನು ಮೀರುವ ದಾರಗಳನ್ನು ಕಂಡುಕೊಳ್ಳಬೇಕು. ಮೊದಲು ಮಾಹಿತಿಯ ಸಂಗ್ರಹಕಾರ್ಯ ಮುಖ್ಯವಾದದ್ದು. ಆದರೆ ಅವುಗಳನ್ನು ಒಂದಕ್ಕೊಂದು ಹೋಲಿಸುವ ಬಳಸಿಕೊಳ್ಳುವ ಊಹೆ, ಸಂಶೋಧನೆ ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳುವ ಕೆಲಸವು ನಡೆಯಬೇಕು. ಇದಕ್ಕೆ ಡಾ. ಡಿ. ಎನ್. ಶಂಕರ ಭಟ್ಟರ ಪುಸ್ತಕಗಳನ್ನು ಗಮನಿಸಬಹುದಾಗಿದೆ.

ಭಾಷೆಯನ್ನು ಕುರಿತ ಅಧ್ಯಯನವು ಸಾಮಾನ್ಯವಾಗಿ ಸಾಹಿತ್ಯಿಕ ಅಭಿವ್ಯಕ್ತಿಯ ಮಾಧ್ಯಮವಾದ ಭಾಷೆಯನ್ನೇ ತನ್ನ ಕೇಂದ್ರದಲ್ಲಿಟ್ಟುಕೊಂಡು ಅಧ್ಯಯನ ಮಾಡುತ್ತದೆ. ಈಗಾಗಲೇ ನಡೆದು ಬಂದ ಕನ್ನಡ ಭಾಷಾಶಾಸ್ತ್ರ ಇದಕ್ಕೆ ನಿದರ್ಶನವಾಗಿದೆ. ಹಾಗೆಯೇ ಭಾಷೆಯೇ ತನ್ನ ಮಾಧ್ಯಮವಾದ ಸಾಹಿತ್ಯವೂ ಇತರೆ ಭಾಷೆಗಳ ಪ್ರಭಾವದ ನೆಲೆಯೇ ತನ್ನತನದಂತೆ ನಡೆದು ಬಂದದ್ದನ್ನು ಗಮನಿಸಲಾಯಿತು. ಅನಂತರದಲ್ಲಿ ಹನ್ನೆರಡನೆಯ ಶತಮಾನದ ನಂತರ ಕನ್ನಡದ್ದೇ ನೆಲೆಯ ಅಥವಾ ಪೂರ್ವದ ಸಂಸ್ಕೃತದ ಸುಕ್ಕುಗಳನ್ನು ಬಿಡಿಸಿಕೊಂಡು ಸ್ವಂತಿಕೆಯ ನೆಲೆಗೆ ಅಥವಾ ಅಸ್ಮಿತೆಗೆ ತಡಕಾಡಿದರೂ ಬಿಡಿಸಿಕೊಳ್ಳಲಾಗದೆ ಮುಂದುವರೆದಿದೆ. ಆದ್ದರಿಂದ ಕನ್ನಡ ಸಾಹಿತ್ಯ ಮತ್ತು ಭಾಷಾಶಾಸ್ತ್ರದ ನಡುವೆ ಇರಬಹುದಾದ ಸಂಬಂಧವು ಭಾಷಾಶಾಸ್ತ್ರವೆಂಬ ಜ್ಞಾನ ಶಾಖೆಯ ಹುಟ್ಟಿಗಿಂತ ಎಷ್ಟೋ ನೂರುವರ್ಷಗಳಷ್ಟು ಹಿಂದೆ ಹೋಗುತ್ತದೆ. ಬರಹವೇ

ಭಾಷಾಶಾಸ್ತ್ರವು ತನ್ನ ಮಾಧ್ಯಮವಾಗಿಸಿಕೊಂಡ ನಿಮಿತ್ತವಾಗಿ ಇಲ್ಲಿ ಸಾಹಿತ್ಯ ಕೃತಿಯ ಭಾಷೆಯನ್ನು ಕುರಿತು ತುಸು ಆಲೋಚಿಸಿ ಅನಂತರ ಕನ್ನಡದ್ದೇ ಆದ ಭಾಷಾಧ್ಯಯನ ತಾತ್ವಿಕತೆಯ ಅಂಶಗಳನ್ನು ಸ್ಪಷ್ಟಪಡಿಸಿಕೊಳ್ಳಬಹುದೆಂದು ಕಾಣುತ್ತದೆ.

ಸಾಹಿತ್ಯ ಕೃತಿಯ ಭಾಷೆಯನ್ನು ಕುರಿತು ಮೂರು ಬಗೆಯ ಜನರು ಯೋಚನೆಮಾಡುತ್ತಾರೆ. ಮೊದಲನೆಯದಾಗಿ ಸೃಜನಶೀಲರಾದ ಸಾಹಿತಿಗಳು. ಎರಡನೆಯದಾಗಿ ಸಾಹಿತ್ಯದ್ದೇ ವ್ಯಾಖ್ಯಾನ ಮಾಡುವ ಹೊಣೆಹೊತ್ತ ಮೀಮಾಂಸಕರು ಅಥವಾ ವಿಮರ್ಶಕರು, ಮೂರನೆಯದಾಗಿ ಸಾಹಿತ್ಯ ಕೃತಿಗಳ ಗ್ರಾಹಕರಾದ ಓದುಗರು. ಈ ಆಲೋಚನೆಯು ಪ್ರಜ್ಞಾಪೂರ್ವಕವಾಗಿ ನಡೆಯಬಹುದು. ಅಥವಾ ಸಾಹಿತಿಯ ಒಳ ಮನಸ್ಸಿನ ಆಳಗಳಲ್ಲಿ ಅವನಿಗೆ ಅರಿವಿಲ್ಲದಂತೆ ನಡೆದಿರಬಹುದು. ಹಾಗೆಯೇ ಇದು ಅಂತಹ ವ್ಯಕ್ತಿಗಳ ಸಾಮಾಜಿಕ ಹಿನ್ನೆಲೆ, ಕಾಲ, ದೇಶ, ಸಂದರ್ಭಗಳಿಂದ ನಿಯಂತ್ರಿತವಾಗಬಹುದು. ತಾನು ಯಾರಿಗಾಗಿ, ಯಾಕೆ, ಹೇಗೆ ಬರೆಯಬೇಕು ಎಂಬುದರ ಬಗ್ಗೆ ಕವಿಯೂ ಅಥವಾ ಬರಹಗಾರನು ತೆಗೆದುಕೊಳ್ಳುವ ತೀರ್ಮಾನಗಳು ಕಂಡಿತವಾಗಿಯೂ ಅವನ ಬರಹದ ಭಾಷಿಕ ರೂಪವನ್ನು ತೀರ್ಮಾನಿಸುತ್ತವೆ. ಪಂಪ, ಕುಮಾರವ್ಯಾಸ, ಬಸವಣ್ಣ, ಅಕ್ಕಮಹಾದೇವಿ, ಕನಕದಾಸ, ಕುವೆಂಪು, ಲಂಕೇಶ್, ದೇವನೂರು ಮಹಾದೇವ, ಕುಂ. ವೀರಭದ್ರಪ್ಪ ತಮ್ಮ ಬರಹಗಳು ಭಾಷೆಯ ಸ್ವರೂಪದ ಬಗ್ಗೆ ಗಾಢವಾಗಿ ಚಿಂತಿಸಿರುವರೆಂಬುದಕ್ಕೆ ಪುರಾವೆಗಳು ಅವರ ಕೃತಿಗಳಲ್ಲಿಯೇ ದೊರೆಯುತ್ತವೆ.

ಹಾಗೆಯೇ ವಿಮರ್ಶಕರು ತಮ್ಮ ಎದುರಿಗಿರುವ ಕೃತಿಗಳ ಭಾಷೆ ಶೈಲಿಯಲ್ಲಿ ಕೆಲವನ್ನು ಸೂಕ್ತ, ಸುಂದರ ಎಂದೂ ಮತ್ತೆ ಹಲವನ್ನು ಅಸಾಧುವೆಂದು ತೀರ್ಮಾನಿಸಿರುವುದನ್ನು ಕಂಡಾಗ ಅವರನ್ನು ಭಾಷಿಕ ಸಂಗತಿಯೇ ನಿಯಂತ್ರಿಸಿರುವುದನ್ನು ಕಾಣಬಹುದಾಗಿದೆ. ಸಮುದಾಯದ ಮಾತಾದ ಪ್ರಾದೇಶಿಕ ವೈಶಿಷ್ಟ್ಯತೆಯನ್ನು ಕುರಿತಂತೆ ಇರುವ ತಾರತಮ್ಯ ಅಥವಾ ಕೀಳರಿಮೆಯ ಭಾವನೆಯು ಅಂತಹ ಪ್ರಭೇದಗಳ ಸಾಹಿತ್ಯಿಕ ವರ್ಜ್ಯ ಮತ್ತು ಪುರಸ್ಕಾರ ಎರಡನ್ನೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಗುರುತಿಸಬಹುದು. ಇಂತಹ ಮೇಲು ಕೀಳು ನೋಟಗಳು ಸಾಹಿತ್ಯಿಕ ಭಾಷೆಯ ಸಂಸ್ಕೃತಿಯ ಸ್ವರೂಪದಲ್ಲಿ ನಡೆಯುವ ಬದಲಾವಣೆ ಮತ್ತು ವಿಸ್ತರಣೆಗಳು ಮೇಲುಗೈ ಪಡೆದಿರುವ ಸಂಸ್ಕೃತಿ ಮತ್ತು ಅಧೀನ ಸಂಸ್ಕೃತಿಗಳ ನಡುವಿನ ಹೋರಾಟಕ್ಕೆ ಸಮಾನಾಂತರವಾಗಿರುತ್ತವೆ. ಪಂಪ ರನ್ನ ಜನ್ನ ವಚನಕಾರರು ದಾಸರು ಕುಮಾರವ್ಯಾಸ ಹಾಗೂ ಈ ಶತಮಾನದ ಸಾಹಿತ್ಯಿಕ ಚಳುವಳಿಗಳು ಈ ರೀತಿಯ ಬದಲಾವಣೆಯ ಮೈಲುಗಲ್ಲುಗಳಾಗಿರುತ್ತವೆ. ಸಾಹಿತ್ಯ ಭಾಷೆಯ ಅಧ್ಯಯನವೆಂದರೆ

ಪ್ರತಿಷ್ಠೆಯ, ತೋರ್ಪಡಿಕೆಯ ಒಣ ಪಾಂಡಿತ್ಯದ ಕೆಲಸವಾಗದೆ ಒಟ್ಟು ಸಂಸ್ಕೃತಿ ಮತ್ತು ಸಮುದಾಯಗಳ ಅಧ್ಯಯನವು ಆಗುತ್ತದೆ.

ಕನ್ನಡದ ಆದಿ ಕವಿ ಪಂಪನಲ್ಲಿ ಪಾಂಡಿತ್ಯದ ಪ್ರದರ್ಶನಗಳ ಸಂಘರ್ಷದೊಂದಿಗೆ ತನ್ನ ಕಾಲದ ಜನ ಭಾಷೆಯನ್ನು ಪರಿಣಾಮಕಾರಿಯಾಗಿ ಬಳಸುವುದರ ಮೂಲಕ ಪರಿಣಾಮಕಾರಿಯಾಗುವಂತೆಯೇ ಅಕ್ಷರ ಛಂದಸ್ಸಿನ ಮಾಯಾಂಗನೆಗೆ ಮೋಹಿತನಾಗಿ ಸುದೀರ್ಘವಾದ ಸಂಸ್ಕೃತ ಬಳಸುತ್ತಾನೆ.

ಒಂಬತ್ತು ಮತ್ತು ಹತ್ತನೆಯ ಶತಮಾನದ ಕೃತಿಗಳಲ್ಲಿ 'ಪುಲಿಗೆರೆಯ ತಿರುಳ್ಗನ್ನಡ' ಕನ್ನಡದ 'ದಕ್ಷಿಣೋತ್ತರ ಮಾರ್ಗಗಳು' 'ಕನ್ನಡಂಗಳ್' ಮುಂತಾದ ಮಾತುಗಳು ಪ್ರಾದೇಶಿಕ ಉಪ ಭಾಷೆಗಳ ಬಗೆಗಿನ ತಿಳುವಳಿಕೆಯನ್ನು ತೋರಿಸುತ್ತವೆ. ಹಾಗೆಯೇ ಕನ್ನಡ ವಿಮರ್ಶೆಯು ಸಾರಾಸಗಟಾಗಿ ಹಳಗನ್ನಡವೆಂದೋ, ನಡುಗನ್ನಡವೆಂದೋ ಕರೆದು ಕೈಬಿಟ್ಟಿರುವುದನ್ನೇ ಕನ್ನಡ ಭಾಷಾಶಾಸ್ತ್ರವೂ ಕರೆದು ಕಾಲದ ವ್ಯತ್ಯಾಸದಲ್ಲಿ ಕಾಣಿಸಿಕೊಂಡ ಪದಗಳನ್ನು ಹಾಗಾಗೇ ಹೇಳಿ ಕೈತೊಳೆದುಕೊಂಡಿದೆ. ಯಾಕೆ ಬದಲಾವಣೆ ಉಂಟಾಗಿದೆ ಮತ್ತು ಆದ ಬದಲಾವಣೆಯು ಅನುಸರಿಸಿದ ನಿಯಮವೆಂತಹದ್ದು ಎಂದು ಹೇಳುವ ಅಥವಾ ಆಲೋಚಿಸಿರುವುದೂ ಸಹ ಇಲ್ಲ. ಅಷ್ಟೇ ಯಾಕೆ ರಾಘವಾಂಕ–ಜನ್ನ, ಲಕ್ಷ್ಮೀಶ–ಕನಕದಾಸ, ನಾಗಚಂದ್ರ–ನಯಸೇನ ಶೈಲಿಗಳ ವ್ಯತ್ಯಾಸವು ಕೇವಲ ವ್ಯಕ್ತಿ ವಿಶಿಷ್ಟವಾದುದೋ ಅಥವಾ ಛಂದಸ್ಸನ್ನು ಅವಲಂಬಿಸಿದುದೋ ಆಗಿರದೆ ಭೌಗೋಳಿಕವೂ, ಸಾಂಸ್ಕೃತಿಕವೂ ಆಗಿರುವ ಸಂಭವವಿದೆ. ಈ ದಿಕ್ಕಿನಲ್ಲಿ ಕನ್ನಡ ಭಾಷಾಶಾಸ್ತ್ರ ಚಲಿಸಿರುವುದಿಲ್ಲ.

ಚಂಪೂ ಸಾಹಿತ್ಯ ಪ್ರಕಾರ ಕನ್ನಡದಲ್ಲಿ ವಿಜೃಂಭಿಸುತ್ತಿರುವಾಗಲೇ ಮತ್ತು ಅಂತಹದೇ ಚೌಕಟ್ಟಿನಲ್ಲಿ ನಯಸೇನ, ಆಂಡಯ್ಯರಂಥ ಕವಿಗಳು ಅನ್ಯಭಾಷಾ ಸಂಕರದ ವಿರುದ್ಧವಾದ ಪ್ರತಿಭಟನೆಯನ್ನು ಎತ್ತಿದ್ದನು. ಕನ್ನಡ ಸಂಸ್ಕೃತಗಳ ಮಿಶ್ರಣವನ್ನು ತುಪ್ಪ, ಎಣ್ಣೆಗಳ ಬೆರಕೆಗೆ ಹೋಲಿಸಿದ ನಯಸೇನ ಹಾಗೂ ಅಚ್ಚ ಕನ್ನಡದಲ್ಲೇ ಬರೆದ ಆಂಡಯ್ಯ ಎಲ್ಲೋ ಒಂದುಕಡೆ ಈ ಹಿಂದಿನ ಕವಿಗಳಿಗೆ ಪ್ರತಿಕ್ರಿಯಿಸುತ್ತಾರೆ.

ಹಾಗೆಯೇ ಸಂಸ್ಕೃತಿಯ ನೆಲೆಯಿಂದಲೂ ಆಲೋಚಿಸಬಹುದಾಗಿದೆ. ಅಂದರೆ ಭಾಷೆ ಮತ್ತು ಸಂಸ್ಕೃತಿಗಿರುವ ಸಂಬಂಧ ಒಂದನ್ನು ಬಿಟ್ಟು ಮತ್ತೊಂದು ಇರಲು ಸಾಧ್ಯವಿಲ್ಲದ್ದು. ಅದು ಚರ್ಮ ಮತ್ತು ದೇಹದ ಸಂಬಂಧ ಎನ್ನಬಹುದಾಗಿದೆ. ಸಂಸ್ಕೃತಿಯ ಕುರಿತ ವ್ಯಾಖ್ಯಾನ ಅಷ್ಟು ಸುಲಭವಾಗಿ ಇಲ್ಲ. ಆದರೆ ಸಂಸ್ಕೃತಿಯ ಒಳಗೆ

ಹಲವು ಪದರುಗಳು ಅಥವಾ ಹಲವು ಸಂಸ್ಕೃತಿಗಳೇ ಸೃಷ್ಟಿಗೊಳ್ಳುತ್ತಿವೆ. ಅದು ಸಮಾಜಗಳ, ಸಮುದಾಯಗಳ ನಡುವೆ ಅಂತರ ಎಂದಿಗಿಂತ ಇಂದು ಇನ್ನೂ ಹೆಚ್ಚು. ಹಾಗಾಗಿ ಸಂಸ್ಕೃತಿಯನ್ನೂ ಕುರಿತ ವ್ಯಾಖ್ಯಾನಗಳು ಇವತ್ತಿನ ಛಿದ್ರಗೊಳ್ಳುತ್ತಿರುವ ಸಮಾಜ ಸಮುದಾಯಗಳ ಸನ್ನಿವೇಶದಲ್ಲಿ ನಡೆಯದ ಹಳೆಯ ನಾಣ್ಯದಂತಾಗಿದೆ. ಪ್ರಧಾನತೆ ಮತ್ತು ಅಧೀನತೆಯ ತಳುಕು ಚಾಲ್ತಿಯಲ್ಲಿದೆ. ಹಾಗಾಗಿ ಸಂಸ್ಕೃತಿಯಲ್ಲಿರುವ ತರತಮ, ಅಧೀನ ಪ್ರಧಾನತೆಗಳ ಬಗೆಗೆ ಅರಿವಿನಿಂದ ಮೂಡುವ ವ್ಯಾಖ್ಯಾನಕ್ಕೂ ಮತ್ತು ಈ ಸ್ಥಿತಿಗಳ ಚೌಕಟ್ಟಿನಿಂದ ಹೊರಗೆ ನಿಂತು ಅಥವಾ ಯಾವುದೋ ಒಂದು ಪ್ರಧಾನ ನೆಲೆಯವೆಂಬ ದೇವಸ್ಥಾನವೋ, ಅಗ್ರಹಾರದಲ್ಲೋ ನಿಂತು ವಿಶ್ಲೇಷಿಸುವ ವಿಧಾನವೇ ಬೇರೆಯಾಗಿರುತ್ತದೆ. ಹಾಗೆ ಕಾಣುವ ದೃಷ್ಟಿ ಅಧಿಕೃತವೋ, ಆರೋಪಿತವೋ ಎಂಬುದು ಸಹ ಮುಖ್ಯವೇ. ಡಿ. ವಿ. ಜಿ, ಎಚ್. ತಿಪ್ಪೆರುದ್ರಸ್ವಾಮಿ, ಎಂ. ಚಿದಾನಂದ ಮೂರ್ತಿಯವರು ಸಂಸ್ಕೃತಯನ್ನು ವ್ಯಾಖ್ಯಾನಿಸಿಕೊಳ್ಳುವುದಕ್ಕೂ ಲಂಕೇಶ್, ದೇವನೂರು ಮಹಾದೇವ, ಸಿದ್ಧಲಿಂಗಯ್ಯ, ಸುಬ್ಬು ಹೊಲೆಯಾರ್, ಕೆ. ವೈ. ನಾರಾಯಣ ಸ್ವಾಮಿಯವರು ಸಂಸ್ಕೃತಿಯನ್ನು ಅರಿತುಕೊಳ್ಳುವುದಕ್ಕೂ ವ್ಯತ್ಯಾಸಗಳಿವೆ. ಈ ವ್ಯತ್ಯಸ್ಥತೆಯನ್ನು ಕೆ. ವಿ. ನಾರಾಯಣ ಅವರು ಹೀಗೆ ವಿಂಗಡಿಸುತ್ತಾರೆ.

೧. ಶತೃತ್ವದ ಸಂಬಂಧ : ಅಧೀನವಾದದ್ದು ಪ್ರಧಾನವಾದುದನ್ನು ನಿರಾಕರಿಸಿ ಪ್ರತಿಭಟಿಸಿ ತನ್ನ ಮೇಲುಗೈಯನ್ನು ಸಾಧಿಸಲು ನಡೆಸುವ ಯತ್ನ. ಈ ಬಗೆಯಲ್ಲಿ ಮುಖ್ಯವಾಗುತ್ತದೆ.

೨. ಸಹಚರ ಸಂಬಂಧ : ಪ್ರಧಾನ ಮತ್ತು ಅಧೀನಗಳ ನಡುವೆ ವಿರೋಧವಿದ್ದರೂ ಆ ವಿರೋಧವನ್ನು ಶತೃತ್ವವನ್ನಾಗಿ ಪರಿಗಣಿಸದೆ ಇರುವ ಒಪ್ಪಂದದ ಸ್ಥಿತಿ.

೩. ಅನುವರ್ತಿ ಸಂಬಂಧ : ಪ್ರಧಾನವಾದದ್ದರ ಯಜಮಾನ್ಯವನ್ನು ಒಪ್ಪಿ, ಅಧೀನಾದದ್ದು ತನ್ನ ಅಧೀನತೆಯನ್ನು ಸಮರ್ಥಿಸುವಂತೆ ಸದಾ ಪ್ರಧಾನವನ್ನು ಅನುಕರಿಸುವ, ಅನುಸರಿಸುವ ಮಾರ್ಗವನ್ನು ಹಿಡಿಯುವುದು. ನಾವು ಚರ್ಚಿಸುತ್ತಿರುವ ವ್ಯವಸ್ಥೆಯಲ್ಲಿ ಅಧೀನವಾದುವು ಹಲವು ಇರಬಹುದಾದ್ದರಿಂದ, ಅವುಗಳ ನಡುವಣ ಸಂಬಂಧದ ನೆಲೆಗಳು ಕೂಡ ಒಟ್ಟಾರೆ ಪ್ರಧಾನ ಮತ್ತು ಇತರ ಸಂಸ್ಕೃತಿಗಳ ಸಂಬಂಧವನ್ನು ಪ್ರಭಾವಿಸುತ್ತದೆ'[೧೧].

೪. ಈ ವಿಚಾರವನ್ನು ಸ್ಪಷ್ಟಪಡಿಸುತ್ತ ನಗರ ಮತ್ತು ಹಳ್ಳಿಗಳ ನಡುವೆ ಸದ್ಯ ಪ್ರಧಾನ ಮತ್ತು ಅಧೀನ ಸಂಬಂಧವಿದೆ ಎನ್ನುತ್ತಾರೆ. ವರ್ಗ, ಧರ್ಮ, ಜಾತಿ, ಸಂಪರ್ಕ ಸೌಲಭ್ಯಗಳು ತಂತ್ರಜ್ಞಾನ ಅಂತಸ್ತು, ಭಾಷೆ, ಪ್ರದೇಶ, ಪ್ರಭಾವ, ಜಾಗತೀಕರಣ ಹಲವು ಮುಖೇನ ಯೋಚಿಸಬಹುದು. ಮತ್ತು ಪ್ರಧಾನ ಅಧೀನಗಳ ಸಂಬಂಧದ ವಿವಿಧ ನೆಲೆಗಳನ್ನು ಅರಿಯಬಹುದು. 'ಸಂಸ್ಕೃತಿ ಸಂಕರಗಳ ಬಗ್ಗೆ ಚರ್ಚಿಸುವವರು ಭಾಷಿಕ ಸಂಕರಗಳ ಮಾದರಿಯನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ. ಏಕ ಭಾಷಿಕ ಪರಿಸರದ ತೀವ್ರ ಒತ್ತಾಯಗಳು ಭಾಷಿಕ ಅಲ್ಪಸಂಖ್ಯಾತರು ತಮ್ಮ ಭಾಷೆಗಳನ್ನು ಕಳೆದುಕೊಳ್ಳುವಂತೆ ಮಾಡುವ ಮಾದರಿ ಉತ್ತರ ಅಮೇರಿಕಾದ ಸಂಯುಕ್ತ ರಾಜ್ಯಗಳಲ್ಲಿದೆ. ಜಗತ್ತಿನ ಹಲವು ಭಾಷಿಕರು ಅಲ್ಲಿ ಇಂಗ್ಲೀಶಿಗರಂತಾಗುತ್ತಾರೆ. ಒಂದು ತಲೆಮಾರಿನ ಅನಂತರ ಭಾಷಾ ನಾಶ ಅನಿವಾರ್ಯವೆನ್ನಿಸುವ ಸಂದರ್ಭ ಅಲ್ಲಿ ಗಾಢವಾಗಿದೆ. ಪ್ರಧಾನವಾದುದರ ಒತ್ತಾಯಗಳು ಅಧೀನವಾದುದನ್ನೆ ನಿರ್ನಾಮ ಮಾಡುವ ಸ್ಥಿತಿ ಇದು. ಆದರೆ ಇದು ತಾತ್ಕಾಲಿಕ ಸ್ಥಿತಿ. ಅಧೀನವಾದುದು ಇಲ್ಲದಂತಾಗುವುದು ಅಸಾಧ್ಯ. ಉಳಿದುಕೊಳ್ಳುವ 'ಪ್ರಧಾನ'ದಲ್ಲೇ ಒಳವಿರೋಧಗಳು ಮೈದಳೆದು ಅವುಗಳಲ್ಲಿ ಪ್ರಧಾನ – ಅಧೀನ ಸ್ಥಿತಿ ರೂಪಗೊಳ್ಳುತ್ತದೆ. ಶಿಷ್ಟ – ಪ್ರಾದೇಶಿಕ ಉಪಭಾಷೆಗಳ ನಡುವೆ ಸಾಮಾನ್ಯವಾಗಿ ಇಂತಹದ್ದೇ ಸಂಬಂಧವಿರುವುದಷ್ಟೆ[೨].

ಈ ಪ್ರಧಾನ – ಅಧೀನ ನೆಲೆಗಳಂತೆಯೇ ಭಾಷೆಯು ಮೈದಳೆದಿರುತ್ತದೆ. ಹಾಗೆ ಮೈದಳೆದ ಪ್ರಭೇದಗಳನ್ನು ಕವಿರಾಜಮಾರ್ಗದಿಂದಲೇ ಗುರುತಿಸಲು ಮೊದಲಾಗಿದೆ. 'ಈ ಭೂಮಿಯನ್ನು ಹೊತ್ತಿರುವ ವಾಸುಕಿಗೆ ಸಾವಿರ ನಾಲಿಗೆಗಳು ಅಷ್ಟು ನಾಲಿಗೆಗಳಿರುವ ವಾಸುಕಿಗೂ ಕನ್ನಡದ ಬಗೆಗಳನ್ನು ವರ್ಣಿಸುವುದು ಬೇಸರದ, ಅಂದರೆ ಕಷ್ಟದ ಸಂಗತಿ' ಎಂದು ಆಗಲೇ ಕವಿರಾಜಮಾರ್ಗಕಾರ ಪ್ರಭೇದಗಳನ್ನು ಹೆಸರಿಸಿದ್ದಾನೆ. ಕೊಪ್ಪಳ, ಪಟ್ಟದಕಲ್ಲು, ಲಕ್ಷ್ಮೀಶ್ವರ, ಒಕ್ಕುಂದ – ಪ್ರದೇಶಗಳನ್ನು ತಿರುಳ್ಗನ್ನಡ ಎಂದು ಗುರುತಿಸಿದ್ದಾರೆ. ಅಚ್ಚರಿ ಎಂದರೆ ತನ್ನ ರಾಜ್ಯದ ರಾಜಧಾನಿಯೇ ಹೊರಗಿದೆ. "ಇನ್ನೂ ಒಂದು ಮುಖ್ಯ ಸಂಗತಿಯನ್ನು ನಾವಿಲ್ಲಿ ಗುರುತಿಸಬೇಕಾಗಿದೆ. ಜನರು ಆಡುತ್ತಿದ್ದ ಕನ್ನಡ ಮತ್ತು ಬರವಣಿಗೆಯಲ್ಲಿ ಬಳಕೆಯಾಗುತ್ತಿದ್ದ ಕನ್ನಡ ಇವೆರಡಕ್ಕೂ ಇರುವ ಅಂತರವನ್ನು ಶ್ರೀವಿಜಯನು ಗುರುತಿಸುತ್ತಾನೆ. ಮಾತು ಬರಹವಾಗುವಾಗ ಅಧಿಕಾರವನ್ನು ಪಡೆದುಕೊಳ್ಳುತ್ತದೆ. ಅಧಿಕೃತತೆಯನ್ನು ಪಡೆದುಕೊಳ್ಳುತ್ತದೆ. ಕನ್ನಡ ಮಾತು, ಕನ್ನಡ ಬರವಣಿಗೆಗೆ ಇಳಿಯುತ್ತಿದ್ದಾಗ ಈ ಇಕ್ಕಟ್ಟು ಸಹಜವಾಗಿಯೇ ಎದುರಾಗಿದೆ. ಜನರು ಆಡುವ ಭಾಷೆಯಲ್ಲಿ ಬಗೆಗಳು

ಹಲವು ಇರಬಹುದು. ಅವು ಹಾಗೇ ಇರಲಿ ಆದರೆ ಬರೆಯುವ ಭಾಷೆಯಲ್ಲಿ ಮಾತ್ರ ಈ ಭಿನ್ನ ಭಿನ್ನ ರೀತಿಗಳಿಗೆ ಅವಕಾಶವಿಲ್ಲ ಎನ್ನುವುದು 'ಕವಿರಾಜಮಾರ್ಗ'ದ ನಿಲುವು. ಈ ಮಾತಿಗೆ ಸಮರ್ಥನೆಯಾಗಿ ಆ ಕೃತಿಯ ಇನ್ನೊಂದು ವಿಚಾರವನ್ನು ನೋಡಬಹುದು. ಕಾವ್ಯಭಾಷೆಯಲ್ಲಿ ಉಂಟಾಗುವ ದೋಷಗಳನ್ನು ಕುರಿತು ಹೇಳುವಾಗ ಮೊದಲು ಶೃತಿಕಷ್ಟ (ಕೇಳಿಸಿಕೊಳ್ಳಲು ಕಷ್ಟ) ಮತ್ತು ಶೃತಿದುಷ್ಟ (ಕೇಳಿಸಿಕೊಳ್ಳಲು ಅಸಹ್ಯ)ಎಂಬ ದೋಷಗಳನ್ನು ಚರ್ಚಿಸಿದ್ದಾನೆ. ಈ ದೋಷಗಳ ಲಕ್ಷಣಗಳೇನೇ ಇರಲಿ, ಅವನು ಬರವಣಿಗೆ ಭಾಷೆಯನ್ನು ಕುರಿತು ವಿವರಿಸುತ್ತಿರುವುದು ಎಂಬುದು ನಮ್ಮ ನೆನಪಿನಲ್ಲಿರಬೇಕು'[೧೩]. ಹೀಗೆ ಕನ್ನಡತ್ವದ ನೆಲೆಗಳನ್ನು ಕುರಿತು ತಡಕಾಡಿದ್ದನ್ನು ಕಾಣಬಹುದಾಗಿದೆ. ಹಾಗೆಯೇ ಸಂಸ್ಕೃತ ಆಯಾಮಗಳನ್ನು ಅಥವಾ ಸಂಸ್ಕೃತದ ನೆರಳಿನಲ್ಲಿಯೇ ನಡೆದರು ಎಂಬುದು ವಿಷಾದ. ಭಾಷಾಶಾಸ್ತ್ರಜ್ಞರು ಕೂಡ ಈ ಕನ್ನಡತ್ವದ ನೆಲೆಗಳನ್ನು ಕಂಡುಕೊಳ್ಳುತ್ತ ಕಟ್ಟಿಕೊಳ್ಳಬೇಕಾದ ಕನ್ನಡದ್ದೇ ಆದ ಚಿಂತನೆಗಳ ಹಾಸನ್ನು ಬಹುಕಾಲ ದೂರವೇ ಇಟ್ಟರು.

ಹತ್ತೊಂಬತ್ತು – ಇಪ್ಪತ್ತನೆಯ ಶತಮಾನದಲ್ಲಿ ನಡೆದ ಸಾಂಸ್ಕೃತಿಕವಾದ ಸಂಚಲನಗಳು ಭಾಷೆಯನ್ನು ಕುರಿತ ಮತ್ತು ಭಾಷೆಯಲ್ಲೂ ಬದಲಾವಣೆಗಳು ಸಂಭವಿಸಿದವು. ಸ್ವಾತಂತ್ರ್ಯ ಚಳುವಳಿ, ಶಿಕ್ಷಣ, ಕರ್ನಾಟಕ ಏಕೀಕರಣ ಚಳುವಳಿ, ತಂತ್ರಜ್ಞಾನದ ಕ್ರಾಂತಿ ಮುಂತಾದವು. ಪ್ರಾಚೀನತೆಯ ಹುಡುಕಾಟ, ಅಸ್ತಿತ್ವದ ಸ್ಥಾಪಕತೆ, ಪಕ್ಕದ ತಮಿಳಿಗೆ ಶಾಸ್ತ್ರೀಯ ಸ್ಥಾನಮಾನ ಲಭಿಸಿದಾಗ ಕನ್ನಡಕ್ಕೂ ಬೇಕು ಎಂದು ನಡೆದ ಪ್ರಯತ್ನಗಳು ಮುಂತಾದವುಗಳ ನಿಮಿತ್ತವಾಗಿ ಲಭ್ಯವಿರುವ ಆಕರ ಸಾಮಗ್ರಿಗಳ ನಡುವೆ ಇರುವ ಸಂಬಂಧವನ್ನು ಬೇರೆ ಬೇರೆ ದಿಕ್ಕುಗಳಿಂದ ಕಾಣಲಾಯಿತು. ಹೀಗಾಗಲೇ ಸಾಕಷ್ಟು ಚರ್ಚಿಸಿರುವಂತೆ, ಹೀಗಾಗಲೇ ಲಭ್ಯವಿರುವ ಅಥವಾ ಮಾಹಿತಿಯನ್ನು ಅದರಲ್ಲೂ ಲಿಖಿತತೆಯನ್ನು ಕಲೆಹಾಕಿ ಮತ್ತೆ ಮತ್ತೆ ಪರೀಕ್ಷಿಸುವುದು. ಘಟ್ಟಗಳನ್ನಾಗಿ ರೂಪಿಸುವುದು. ಪ್ರಭೇದಗಳನ್ನು ತೋರಿಸುವುದು ಚರಿತ್ರೆ ಮತ್ತು ಭಾಷೆಯನ್ನು ಅರ್ಥಮಾಡಿಕೊಳ್ಳುವ ಉಪಾಯಗಳು ಅಷ್ಟೇ. ಯಾಕೆಂದರೆ ಕಾಲದೊಂದಿಗೆ ಬದುಕಿದ ಭಾಷೆ, ಸಂಸ್ಕೃತಿ ಹೀಗೆ ಬದಲಾಗಿದೆ ಎಂದು ಸರಳವಾಗಿ ಗೆರೆಕೊರೆದು ಹೇಳಲು ಬರುವುದಿಲ್ಲ. ಕನ್ನಡ ಸಾಹಿತ್ಯದಲ್ಲೂ ಇಂತಹ ತರ್ಕವಿದೆ. ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ, ನವ್ಯೋತ್ತರ ಎಂದು. ನವೋದಯದ ಕಾರಂತರು ಚೋಮನದುಡಿ ಕಾದಂಬರಿಯ ದಲಿತ – ಬಂಡಾಯದ ತಾತ್ವಿಕತೆಯನ್ನು ಒಳಗೊಂಡಿಲ್ಲವೇ? ಕುವೆಂಪು ಅವರ ಶೂದ್ರ ತಪಸ್ವಿ, ಸಾಲದ ಮಗು

ಇಂತಹ ಬರವಣಿಗೆಯನ್ನು ಎಲ್ಲಿ ಇಟ್ಟು ನೋಡುವುದು. ಹಾಗೆಯೇ ನಡುಗನ್ನಡದಲ್ಲಿ ಜನ್ನನ ಕಾವ್ಯ ಅಥವಾ ಈ ಕಾಲಘಟ್ಟದಲ್ಲಿ ಬಂದ ಬರಹದಲ್ಲಿ ಹಳಗನ್ನಡದ ಶೈಲಿಗಳು ಇಲ್ಲವೇ? ಕುವೆಂಪುರವರ ಶ್ರೀರಾಮಾಯಣದರ್ಶನಂ ಕಾವ್ಯವನ್ನು ಎಲ್ಲಿ ಜಾಗಕೊಡಬೇಕು? ಇಂತಹವುಗಳಿಗೆ ಶಾಸ್ತ್ರೀಯವಾದ ವಿಂಗಡಣೆಯಲ್ಲಿ ಉತ್ತರಗಳು ಲಭ್ಯವಿಲ್ಲ. ಹಾಗೆಯೇ ಒಂದು ಕಾಲಘಟ್ಟದಿಂದ ಮತ್ತೊಂದು ಕಾಲಘಟ್ಟಕ್ಕೆ ಬಂದಾಗ ಇಂತಹ ಬದಲಾವಣೆಗಳು ಆಗಿವೆ ಎಂದಾಗ, ಯಾಕೆ ಹಾಗಾದವು? ಎಂದು ಭಾಷಾಶಾಸ್ತ್ರೀಯವಾದ ಉತ್ತರ ನೀಡಲಾಗಿದೆಯೇ? "ಲಿಖಿತ ದಾಖಲೆಗಳು ನಿರ್ದಿಷ್ಟ ಕಾಲಘಟ್ಟದಲ್ಲಿ ರೂಪಗೊಂಡಿವೆ. ಎಂದು ಹೇಳಿದರೂ ಅವು ಬಳಸಿದ ಕನ್ನಡಕ್ಕೆ ಅಂತಹ ಕಾಲದ ಕಟ್ಟು ಸಾಧ್ಯವಾಗುವುದಿಲ್ಲ. ಉದಾಹರಣೆಗೆ : ಹನ್ನೆರಡು – ಹದಿಮೂರನೆಯ ಶತಮಾನಗಳಲ್ಲಿ ರಚನೆಯಾದ ದಾಖಲೆಗಳು ವಚನಗಳು. ಅದೇ ಸುಮಾರಿನಲ್ಲಿ ಮತ್ತು ಅನಂತರವೂ ರಚನೆಯಾದ ಕೃತಿಗಳಲ್ಲಿ ವಚನಗಳಿಗಿಂತ ಬೇರೆಯದೇ ಆದ ಮತ್ತು ಕಾಲದ ದೃಷ್ಟಿಯಿಂದ ಇನ್ನೂ ಹಿಂದಿನದ್ದೂ ಎಂದು ಹೇಳಬಹುದಾದ ಕನ್ನಡ ಕಾಣಿಸುತ್ತದೆ. ಅಂದರೆ ಈ ದಾಖಲೆಗಳ ಬಳಕೆಯಿಂದ ಹೇಗೆ ಭಾಷೆಯ ಕಾಲಾನುಕ್ರಮಣಿಕೆಯ ಚರಿತ್ರೆಯನ್ನು ಬರೆಯುವುದು ಸಾಧ್ಯ? ಎಲ್ಲಕ್ಕಿಂತ ಮುಖ್ಯವಾಗಿ ಈ ಚರಿತ್ರೆ ರಚನೆಯ ತರ್ಕ ಮುಂದಿಡುವ ಪ್ರಶ್ನೆ ಎಂದರೆ ಇದು ಹೀಗಿದೆ ಎಂಬ ವಿವರಣೆ ಮಾತ್ರ, ಆದರೆ ಇದು ಏಕೆ ಹೀಗಿದೆ ಎಂಬ ಪ್ರಶ್ನೆ ನಮ್ಮ ಭಾಷೆಯ ಚರಿತ್ರೆಗೆ ಮುಖ್ಯವಾಗಿಯೇ ಇಲ್ಲ. ಉದಾಹರಣೆಗೆ : ನಡುಗನ್ನಡದಲ್ಲಿ ಸಂಸ್ಕೃತ ಪದಗಳ ಪದ ಮಧ್ಯದ ವಿಜಾತೀಯ ದ್ವಿತ್ವಾಕ್ಷರಗಳ ನಡುವೆ 'ಉ' ಕಾರವನ್ನು ಸೇರಿಸಿದರು ಎಂದು ಹೇಳಿದರೆ ಅದು ವಿವರೆಣೆ. ಹಾಗೆಯೇ ಹಳೆಗನ್ನಡದ ಸಬಿಂದುಕ ಪದಗಳಲ್ಲಿ ಬಿಂದು ಲೋಪವಾಯಿತು ಎಂದು ಹೇಳಿದರೆ ಅದು ವಿವರಣೆ. ಆದರೆ ಈ ಬದಲಾವಣೆಗಳು ಏಕೆ ಉಂಟಾದವು ಎಂಬ ಪ್ರಶ್ನೆಯನ್ನು ಹಾಕಿಕೊಳ್ಳುವುದಿಲ್ಲ. ಅಂತಹ ಪ್ರಶ್ನೆಯನ್ನು ಹಾಕಿಕೊಂಡರೂ ಅದಕ್ಕೆ ಭಾಷೆಯ ನೆಲೆಯ ಉತ್ತರವನ್ನು ನೀಡುವ ಬದಲು ಭಾಷೇತರವಾದ ಉತ್ತರವನ್ನು ನೀಡಿ ಸುಮ್ಮನೆ ಇರುತ್ತಾರೆ. ಉದಾಹರಣೆಗೆ : ಸಬಿಂದುಕಗಳು ಅಬಿಂದುಕಗಳಾಗಿದ್ದು, ಉಚ್ಚಾರಣೆಯ ಸೌಲಭ್ಯಕ್ಕಾಗಿ ಎನ್ನುವ ವಿವರಣೆ ಭಾಷಿಕವಲ್ಲ. ಅದು ಭಾಷೇತರವಾದದ್ದು. ಅಲ್ಲದೆ ಈ ಸೌಲಭ್ಯ ಬೇಕೆಂಬ ಬಯಕೆ ಒಂದು ಕಾಲದ ಭಾಷಿಕರಿಗೆ ಮಾತ್ರ ಏಕೆ ಬರುತ್ತದೆ? ಈ ಪ್ರಶ್ನೆ ಕೂಡ ಮುಖ್ಯ'[೧೪]. ನಮ್ಮ ಈವರೆಗಿನ ಆದ್ಯ ಭಾಷಾ ಶಾಸ್ತ್ರ ಕಾರರು ಇಂತಹ ಪ್ರಶ್ನೆಗಳನ್ನು ಮರೆಮಾಚಿದ್ದಾರೆ ಅಥವಾ ಕೇಳಿಕೊಂಡು ಉತ್ತರಿಸುವ ಕಡೆ ಚಲಿಸಿಲ್ಲ.

ಹತ್ತೊಂಬತ್ತನೂರ ಐವತ್ತೇಳರಲ್ಲಿ ಅಮೇರಿಕಾದ ಲಿಂಗ್ವಿಸ್ಟಿಕ್ ಸೊಸೈಟಿ ಆಫ್ ಅಮೇರಿಕ ಇವರು ನಡೆಸಿದ ಭಾಷಾಶಾಸ್ತ್ರದ ಬೇಸಿಗೆ ಶಿಬಿರದಲ್ಲಿ ಭಾಗವಹಿಸಿ ಕನ್ನಡ ಭಾಷೆಯನ್ನು ವಿಶ್ಲೇಷಿಸುವ ಕೆಲವು ಮಾರ್ಗಗಳನ್ನು ಕಂಡುಕೊಂಡರು. ಆಗ ಪ್ರಚಲಿತವಿದ್ದ ಸಿದ್ಧಾಂತಗಳನ್ನು ಅನ್ವಯಿಸಲಾಯಿತು. ಮುಖ್ಯವಾಗಿ ವರ್ಣನಾತ್ಮಕ ಭಾಷಾಶಾಸ್ತ್ರ, ಚಾರಿತ್ರಿಕ ಮತ್ತು ತೌಲನಿಕ ಭಾಷಾಶಾಸ್ತ್ರದಲ್ಲಿ ಆಸಕ್ತಿಯನ್ನು ಹೊಂದಿದ್ದರು. ಈ ಎಲ್ಲಾ ಪ್ರಯತ್ನಗಳಿಂದಾಗಿ ಪ್ರಾದೇಶಿಕ ಮತ್ತು ಸಾಮಾಜಿಕ ಭಾಷಾ ಪ್ರಭೇದಗಳು ಕಾಣಲ್ಪಟ್ಟವು. ಹಾಗೆಯೇ ಭಾಷಾಶಾಸ್ತ್ರದ ಪರಿಕರಗಳ ಮೂಲಕವೇ ಸಾಹಿತ್ಯ ಕೃತಿಗಳನ್ನು, ಪ್ರಾಚೀನ ಬರಹಗಳನ್ನು ನೋಡುವ ಆಸಕ್ತಿಯೂ ಬೆಳೆಯಿತು. ಆದರೆ ಬಹು ಮುಖ್ಯವಾದ ಕಂದಕವೆಂದರೆ ಈ ಬಗೆಯ ಬಹುಪಾಲು ಅಧ್ಯಯನಗಳು ನಡೆದದ್ದು ಇಂಗ್ಲೇಶ್‌ನಲ್ಲಿ ಮತ್ತು ಇವು ಒಂದಕ್ಕೊಂದು ಅರ್ಥಗರ್ಭಿತವಾದ ಸಂವಾದವನ್ನು ಕಂಡುಕೊಳ್ಳದೆ ದೂರ ಉಳಿದದ್ದು. ಇದರಿಂದಾಗಿ ಕನ್ನಡ ಭಾಷಾಧ್ಯಯನ ಕ್ಷೇತ್ರಕ್ಕೆ ಆಸಕ್ತರಾದವರಿಗೂ ತಲುಪುವಲ್ಲಿ ಯಶಸ್ವಿಯೇನು ಆಗಲಿಲ್ಲ. ಈಗಾಗಿಯೇ ಈ ಹಿಂದಿನ ಪರಂಪರೆಯೇ ಮುಂದು ಸಾಗಿತು. ಇದರಿಂದಾಗಿ ಡಾ. ಎಚ್.ಎಸ್. ಬಿಳಿಗಿರಿಯಂತಹವರು ಆಧುನಿಕ ಭಾಷಾಶಾಸ್ತ್ರವನ್ನು ಬಲ್ಲವರು ಹದಿನಾಲ್ಕನೆಯ ಶತಮಾನದ ಶಬ್ದಮಣಿದರ್ಪಣದತ್ತ ಚಲಿಸಿ ತಾವು ಕಲಿತ ಆಧುನಿಕ ಶಾಸ್ತ್ರೀಯ ಅಂಶಗಳ ಮೂಲಕ 'ಆಲೋಕ'ದಂತಹ ಕೃತಿಯನ್ನು ರಚಿಸಿದರು. ಎಂ. ಚಿದಾನಂದ ಮೂರ್ತಿಯವರು ಭಾಷಾಶಾಸ್ತ್ರದ ತತ್ವಗಳನ್ನು ಮಾತ್ರ ಕನ್ನಡಕ್ಕೆ ತಂದುಕೊಡುವಲ್ಲೇ ಸಾಧ್ಯವಾಗಿಸಿಕೊಂಡು ಉಳಿದರು ಅಥವಾ ಬೇರೆ ಕ್ಷೇತ್ರಕ್ಕೆ ಚಲಿಸಿದರು.

ಆಧುನಿಕ ಭಾಷಾಶಾಸ್ತ್ರವನ್ನು ಅಧ್ಯಯನ ಮಾಡಿದ ಭಾಷಾಶಾಸ್ತ್ರಜ್ಞರು ಕನ್ನಡವನ್ನು ಕೇಂದ್ರವಾಗಿಟ್ಟುಕೊಂಡು ಮುಂದುವರೆಯುವುದರ ಬದಲಾಗಿ ಕನ್ನಡವನ್ನು ನಿದರ್ಶನವಾಗಿ ತೆಗೆದುಕೊಂಡು ಆ ಮೂಲಕ ಭಾಷಾಧ್ಯಯನದ ತಾತ್ವಿಕ ಸಿದ್ಧಾಂತಗಳನ್ನು ವಿಸ್ತರಿಸುವ ಪ್ರಯತ್ನವನ್ನು ಮಾಡಿದರು. ಇಂತಹ ಕಡೆ ಕನ್ನಡವೂ ಸಿದ್ಧಾಂತಗಳಿಗೆ ಬೇಕಾದ ಮಾಹಿತಿಯ ಸರಕಾಗಿ ಬಳಕೆಗೆ ಬಂದಿತು. ಅಥವಾ ಸಿದ್ಧಾಂತಗಳ ಮೂಲಕ ರೂಪಿತಗೊಂಡ ಐಡಿಯಾಗಳಿಗೆ ಪೂರಕವಾಗಿ ಬಾಗುವ ಮರದಂತೆ ಬಳಕೆಗೆ ಬಂದಿತು ಈ ಆಧುನಿಕ ಸಿದ್ಧಾಂತಗಳನ್ನು ಬಲ್ಲ ಕೆಲವರು ಆ ಸಿದ್ಧಾಂತಗಳಿಂದ ಬಿಡಿಸಿಕೊಂಡು ಮತ್ತು ಕನ್ನಡದ ಪಾರಂಪರಿಕ ಮಾದರಿಯನ್ನೂ ಬಿಡಿಸಿಕೊಂಡು ಮತ್ತು ಅವುಗಳನ್ನು ಚೆನ್ನಾಗಿ ಬಲ್ಲ ಡಾ. ಡಿ. ಎನ್. ಶಂಕರಭಟ್, ಡಾ. ಕೆ. ವಿ. ನಾರಾಯಣ ಮತ್ತು ಕನ್ನಡ ವಿಶ್ವವಿದ್ಯಾಲಯದ ಭಾಷಾಧ್ಯಯನ

ವಿಭಾಗವು ಕನ್ನಡದ ಸಂಗತಿಗಳನ್ನು, ಭಾಷಾಧ್ಯಯನ ಮಾದರಿಗಳನ್ನು ಕನ್ನಡದ ಒಳಗಿನಿಂದಲೇ ಕಟ್ಟಿಕೊಳ್ಳುವ ಜರೂರತ್ತಿನ ಕಡೆ ಚಲಿಸುತ್ತಿದ್ದಾರೆ.

ಕನ್ನಡ ಸಾಂಪ್ರದಾಯಿಕ ಅಥವಾ ಪಾರಂಪರಿಕ ಮಾದರಿಯನ್ನು ವಿಸ್ತರಿಸುತ್ತಾ ವಿವರಿಸುತ್ತಲೇ ಕನ್ನಡ ಅಸ್ತಿತ್ವದ ಮತ್ತು ಅಸ್ಮಿತೆಯ ಹುಡುಕಾಟದ ಚಡಪಡಿಕೆಯನ್ನು ಡಾ. ಡಿ. ಎನ್. ಶಂಕರ ಭಟ್‌ರವರಲ್ಲಿ 'ಕನ್ನಡ ಭಾಷೆಯ ಕಲ್ಪಿತ ಚರಿತ್ರೆ' ಕೃತಿಯಲ್ಲಿಯೇ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಪಾರಂಪರಿಕ ಮತ್ತು ಪಾಶ್ಚಾತ್ಯ ಮಾದರಿಯ ನೆಲೆಯಿಂದ ಬಿಡಿಸಿಕೊಳ್ಳಲು ಡಾ. ಡಿ. ಎನ್. ಶಂಕರ ಭಟ್ ಅವರಿಗೆ ಸುಮಾರು ಮೂವತ್ತು ವರ್ಷಗಳ ಸುದೀರ್ಘ ಪಯಣ ಬೆಳೆಸಬೇಕಾಯಿತು. " ಈ ನಿಟ್ಟಿನಲ್ಲಿ ತಮ್ಮ ಚಿಂತನೆಯನ್ನು ವಿಸ್ತರಿಸಿದ್ದಾರೆ. ಭಾಷೆಯ ಚರಿತ್ರೆಯನ್ನು ರಚಿಸುವಾಗ ಲಿಖಿತ ದಾಖಲೆಗಳನ್ನು ಮಾತ್ರ ಅವಲಂಬಿಸದೆ ಇಂದಿನ ಆಡುರೂಪಗಳನ್ನು ಕೂಡ ಪರಗಣಿಸಬೇಕೆಂದು ವಾದಿಸುತ್ತಾರೆ. ನಾವು ಪ್ರಾದೇಶಿಕ ಇಲ್ಲವೇ ಸಾಮಾಜಿಕ ಪ್ರಭೇದಗಳು ಎಂದು ಗುರುತಿಸುತ್ತಿರುವ ಕನ್ನಡದ ವಿವಿಧ ಮಾದರಿಗಳು ಈಗ ಸಮಕಾಲೀನವಾಗಿ ಒಂದೇ ಕಾಲದಲ್ಲಿ ಬಳಕೆಯಲ್ಲಿರುವಂತೆ ಕಂಡರೂ ಅವು ಬೇರೆ ಬೇರೆ ಕಾಲಘಟ್ಟದಲ್ಲಿ ರೂಪುಗೊಂಡಿರುತ್ತವೆ. ತಾವು ರೂಪುಗೊಂಡ ಕಾಲದ ಕನ್ನಡದ ಲಕ್ಷಣಗಳನ್ನು ಆಯಾ ಪ್ರಭೇದಗಳು ತಮ್ಮಲ್ಲಿ ಅಡಗಿಸಿಕೊಂಡಿರುತ್ತವೆ. ಆ ಪ್ರಭೇದಗಳನ್ನು ಸಮಕಾಲೀನ ಮಾದರಿ ಎಂದಷ್ಟೇ ವಿಶ್ಲೇಷಿಸದೇ ಅವುಗಳಲ್ಲಿ ಅಡಗಿರುವ ಚಾರಿತ್ರಿಕ ಪದರಗಳನ್ನು ಹೊರತೆಗೆಯಬೇಕು. ಆಗ ಮಾತ್ರ ಭಾಷೆ ಬೆಳೆದು ಬಂದ ರೀತಿ ನಮಗೆ ಗೊತ್ತಾಗಲು ಸಾಧ್ಯ. ಭಾಷೆಯ ಚರಿತ್ರೆಯನ್ನು ಆಡುಮಾತಿನ ಬಗೆಗಳನ್ನು ಆಧರಿಸಿಯೂ ನಿರ್ಮಿಸಬಹುದು. ಮತ್ತು ಹಾಗೆ ಮಾಡುವ ಮೂಲಕವೇ ಆ ಚರಿತ್ರೆಗೆ ಸಮಗ್ರತೆ ಸಾಧ್ಯ. ಈ ವಾದವನ್ನು ಡಾ. ಭಟ್ ಕನ್ನಡದ ನಿದರ್ಶನಗಳ ಮೂಲಕ ಸ್ಪಷ್ಟಪಡಿಸುತ್ತಾರೆ.

ಇದಲ್ಲದೆ ಈ ವ್ಯಾಖ್ಯೆಯ ಮೂಲಕ ಅವರು ಈ ಸಮಸ್ಯೆಗೆ ಬೇರೊಂದು ನೆಲೆಯನ್ನು ನೀಡಿದ್ದಾರೆ. ಈವರೆಗೆ ಕನ್ನಡ ಭಾಷೆಯು ಮೊದಲು ಉತ್ತರ ಮತ್ತು ದಕ್ಷಿಣ ಪ್ರದೇಶಗಳ ಪ್ರಭೇದವಾಗಿ ವಿಭಜನೆಗೊಂಡಿತ್ತು ಎಂದು ನಿರೂಪಿಸುತ್ತಾ ಬಂದಿದ್ದೇವೆ. ಕವಿರಾಜಮಾರ್ಗಕಾರನ ದಕ್ಷಿಣೋತ್ತರ ಮಾರ್ಗಗಳ ಚಿಂತನೆಯನ್ನು ಒಪ್ಪಿಕೊಂಡಿದ್ದೇವೆ. ಈಗಲೂ ಈ ವಿಭಜನೆ ಧ್ವನಿ ರಚನೆ ಮತ್ತು ಪದಕೋಶಗಳ ನೆಲೆಯಲ್ಲಿ ತೋರಿಕೆಗೆ ಸರಿ ಎಂದು ಅನಿಸುತ್ತದೆ. ನಡುವೆ ಹರಿಯುವ ತುಂಗ ಭದ್ರಾ

ನದಿಯು ಗಡಿ ಗೆರೆಯಾಗಿ ಕನ್ನಡದ ಎರಡು ಪ್ರಭೇದಗಳು ಮೈದಳೆದಿರುವುದನ್ನು ಒಪ್ಪಿದ್ದೇವೆ. ಆದರೆ ಈ ವಿಭಜನೆ ಆಗುವ ಮೊದಲೇ ಕನ್ನಡ ಪೂರ್ವ ಪಶ್ಚಿಮ ಪ್ರಭೇದವಾಗಿ ವಿಭಜನೆಗೊಂಡಿದೆ ಎಂಬ ಸಾಧ್ಯತೆಯನ್ನು ಡಾ. ಭಟ್ ಮುಂದಿಡುತ್ತಾರೆ. ಕನ್ನಡದ ಅತಿ ಪ್ರಾಚೀನ ಧ್ವನಿ ರೂಪಗಳು, ಪದ ರೂಪಗಳು ಕರಾವಳಿಯ ಇಂದಿನ ಕೆಲವು ಪ್ರಭೇದಗಳಲ್ಲಿ ಉಳಿದಿರುವುದನ್ನು ಅವರು ಗುರುತಿಸುತ್ತಾರೆ. ಈ ಮೂಲಕ ಕನ್ನಡ ಭಾಷಾ ಚರಿತ್ರೆಯ ಇನ್ನೊಂದು ಘಟ್ಟವನ್ನು ಅವರು ನಿರೂಪಿಸುತ್ತಾರೆ.

ಭಟ್ ಅವರ ಈ ಚರಿತ್ರೆ ಒಂದು ಕಲ್ಪಿತ ಚರಿತ್ರೆ. ಏಕೆಂದರೆ ಭಾಷಾ ಚರಿತ್ರೆಯನ್ನು ನಾವು ಪುನಾರಚಿಸುತ್ತೇವೆ. ಹೀಗೇ ಆಗಿದೆ ಎಂದು ಹೇಳಲು ನಮ್ಮಲ್ಲಿ ಆಧಾರಗಳಿರುವುದಿಲ್ಲ. ಹೀಗೆ ಆಗಿರಲು ಸಾಧ್ಯ ಎಂದು ನಾವು ಊಹಿಸುತ್ತೇವೆ. ಆದ್ದರಿಂದ ಇದು ರಚಿತ ಮತ್ತು ಕಲ್ಪಿತ. ಡಾ. ಭಟ್ ಅವರು ಕನ್ನಡ ಭಾಷಾ ಚರಿತ್ರೆಯ ಅಧ್ಯಯನಕ್ಕೆ ಈ ದೃಷ್ಟಿಯಿಂದ ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ಹೊಸ ರೂಪವನ್ನು ನೀಡಿದ್ದಾರೆ[೧೫].

ಕರ್ನಾಟಕದ ಚರಿತ್ರೆಯಲ್ಲಿ ಅಥವಾ ಭಾರತದ ಸ್ಥಿತಿಯಲ್ಲೂ ಅಕ್ಷರ ಎನ್ನುವುದು ಕೆಲವರ ಸ್ವತ್ತಾಗಿತ್ತು. ಮತ್ತು ಅವರು ರೂಪಿಸಿದ್ದು ಬರಹದಲ್ಲಿ ಆಲೋಚಿಸಿದ್ದು ಸತ್ಯವೇ ಎಂದು ನಂಬಲಾಗಿತ್ತು. ಈ ತಲತಲಾಂತರದ ಚಲನೆ ಹಲವು ಸಾಮಾಜಿಕ, ರಾಜಕೀಯ ಮುಂತಾದ ಕಾರಣಗಳಿಂದಾಗಿ ಏಕಲವ್ಯ, ಮಂಡೂಕ ಮುಂತಾದವರು ನಿಷೇಧಿಸಲ್ಪಟ್ಟವರು. ಅಕ್ಷರ ಚರಿತ್ರಾ ಕೋಶವನ್ನು ಕಲಿಯುವುದರಲ್ಲಿ ಯಶಸ್ವಿಯಾದರು. ಕಳೆದ ಶತಮಾನದಿಂದ ಶಿಕ್ಷಣ ಎನ್ನುವುದು ಎಲ್ಲರಿಗೂ ಲಭ್ಯವಾದದ್ದು ಮುಂತಾದವುಗಳ ನಿಮಿತ್ತವಾಗಿ ಇವತ್ತು ಮನುಷ್ಯ ಯಾವುದೇ ಅಭೇಧ್ಯವಾದ ಅಥವಾ ನಿಗೂಢವಾಸಿಯ ದ್ವೀಪವಾಗಿ ಉಳಿದಿಲ್ಲ. ಮನುಷ್ಯ ಮನುಷ್ಯನ ನಡುವೆ, ದೇಶ–ದೇಶಗಳ ನಡುವೆ, ಮನುಷ್ಯ ಮತ್ತು ತಂತ್ರಜ್ಞಾನ ಹಾಗೂ ಇತರ ಜ್ಞಾನ ಶಾಖೆಗಳು, ಆಧುನಿಕತೆ ಜಾಗತೀಕರಣ ಮುಂತಾದವುಗಳ ಸಂತೆಯಲ್ಲಿ ಯಾವುದು ಅನಾಮಿಕವಾಗಿ ಉಳಿದಿಲ್ಲ. ಹೀಗಾಗಿ ಭಾಷೆಯಲ್ಲಿ ಕಾಣಿಸಿಕೊಳ್ಳುವ ಸಾಂಸ್ಕೃತಿಕ ಚಲನೆಯ ಮಿತಿಗೂ ಇವತ್ತು ಕಣ್ಣೆದುರಿಗಿರುವ ಸಾಂಸ್ಕೃತಿಕ ವಿಶಾಲ ಅನನ್ಯತೆಗೂ ದೊಡ್ಡ ಕಂದಕವೊಂದು ಕಾಣಿಸಿಕೊಂಡಿದೆ. ಈ ಹಿಂದೆ ಎಂದೂ ಅಕ್ಷರ ಲೋಕದಿಂದ ವಂಚಿತರಾದವರು ಶಾಲಾ ಕಾಲೇಜುಗಳಲ್ಲಿ ಕಲಿಯಲಾರಂಬಿಸಿದ್ದು ಮುಂತಾದ ಸಂಗತಿಗಳು ಬರಹ ಮತ್ತು ಭಾಷೆ/ಮಾತು, ಬರಹದ ಚರಿತ್ರೆ ಮತ್ತು ಭಾಷಾಧ್ಯಯನದ ಚರಿತ್ರೆ ಹೀಗೆ ಹಲವು ಪಲಕುಗಳು ಕಾಣಿಸತೊಡಗಿದವು. ಈವರೆಗಿನ ಎಲ್ಲಾ ಭಾಷಾಧ್ಯಯನಗಳು ಯಾವುದನ್ನು ಗಂಭೀರವಾಗಿ ಅಧ್ಯಯನಮಾಡುವ ವಸ್ತುವೆಂದು

ಸ್ವೀಕರಿಸಲ್ಲವೋ ಅಥವಾ ಅದು ನಾವು ಹೇಳಿದ್ದೇ ಸತ್ಯೆ ಅದರಾಚೆ ಏನೂ ಇಲ್ಲ ಎನ್ನುವ ಧೋರಣೆಯಲ್ಲಿ ಇತ್ತೋ ಅದು ಈಗ ಬದಲಾಗಬೇಕಾದ ಒತ್ತಡದಲ್ಲಿದೆ. ಈ ಸನ್ನಿವೇಶದಲ್ಲೂ ಸಾಂಪ್ರದಾಯಿಕ ಮತ್ತು ಕನ್ನಡದ್ದೇ ನೆಲೆಯ ಚಿಂತಕರು ಇಬ್ಬರ ನಡುವಿನ ತಿಕ್ಕಾಟ ನಿಂತಿಲ್ಲ ಅಥವಾ ಈಗ ರಂಗೇರುತ್ತಿದೆ. ಕಳೆದ ಕೆಲವು ವರ್ಷಗಳಿಂದ ವಿವಾದವನ್ನು ಸೃಷ್ಟಿಸಿರುವ 'ಋ' ಅಕ್ಷರದ ವಿಚಾರ. "ಸಂಸ್ಕೃತ ಪದಗಳಲ್ಲಿ ಈ ಚಿಹ್ನೆಯ ಅಗತ್ಯ ಉಂಟಾದುದಕ್ಕೆ ಕಾರಣವಿದೆ. 'ರ' ಕಾರವು ಒಂದು ವ್ಯಂಜನವಾದರೂ ಪ್ರಸಂಗವಶಾತ್ ಅದು ಅಕ್ಷರ ರಚನೆಯ ಕೇಂದ್ರವಾದಾಗ ಅದಕ್ಕೆ ಸ್ವರದ ಲಕ್ಷಣ ಬರುತ್ತದೆ. ಹೀಗಾಗಿ ವ್ಯಂಜನ ಮತ್ತು 'ಋ' ಸ್ವರ ಒಂದೇ ಧ್ವನಿಯ ಎರಡು ನಿಯೋಗಳನ್ನು ಪ್ರತಿನಿಧಿಸುತ್ತದೆ. ಕನ್ನಡದಲ್ಲಿ ಅಕ್ಷರ ರಚನೆಯ ಕೇಂದ್ರವಾಗಿ 'ರ'ಕಾರ ಬರುವುದು ಸಾಧ್ಯವಿಲ್ಲವಾದ್ದರಿಂದ ಅದು ಯಾವಾಗಲೂ 'ರ್' ಎಂಬ ವ್ಯಂಜನವನ್ನು ಮಾತ್ರ ಒಪ್ಪಿಕೊಳ್ಳುತ್ತದೆ. ಸಹಜವಾಗಿಯೇ ಕನ್ನಡ ಧ್ವನಿ ರಚನೆಯಾಗಿ 'ಋ' ಎಂಬ ಸ್ವರಕ್ಕೆ ಸ್ಥಾನವಿಲ್ಲ. ಈ ವಿಶ್ಲೇಷಣೆ ನೆಲೆಯನ್ನು ಪಾರಂಪರಿಕ ವಿದ್ವಾಂಸರು ಎಷ್ಟು ಕಟುವಾಗಿ ಟೀಕಿಸಿದರೆಂದರೆ ತುಮಕೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ 'ಋ'ಕಾರವನ್ನು ಒಂದು ಲಿಪಿ ಚಿಹ್ನೆಯಾಗಿ ಕನ್ನಡದಲ್ಲಿ ಉಳಿಸಿಕೊಳ್ಳಬೇಕು ಎಂಬ ನಿರ್ಣಯವನ್ನು ಮಾಡಲಾಯಿತು'[೧೬].

ಎಂಬುದು ನೋಡಿದರೆ ಪಾರಂಪರಿಕ ನೆಲೆಯ ಚಿಂತಕರು ಕನ್ನಡ ಭಾಷೆಯ ಬೇಕು ಬೇಡಗಳನ್ನು ಕುರಿತು ರಿಫ್ರೆಶ್ ಆಗಲು ಸಿದ್ಧರಿಲ್ಲ ಎಂಬುದು ಸ್ಪಷ್ಟ. ಯಾಕೆಂದರೆ ಇವರಿಗೆ ಬರವಣಿಗೆಯೇ ಅಂತಿಮ. ಬರವಣಿಗೆಯಲ್ಲಿ ಚಾಚೂ ತಪ್ಪದೆ ಅನುಸರಿಸುತ್ತೇವೆ. ಭಾಷೆಯಲ್ಲಿ ಎರಡು ಸ್ತರ – ಒಂದು ಕಿವಿ, ಮತ್ತೊಂದು ಕಣ್ಣು. ಆದರೆ 'ಋ' ವಿಚಾರದಲ್ಲಿ ಕಿವಿ ಮತ್ತು ಕಣ್ಣಿಗೆ ಸಂಬಂಧವೇ ಇಲ್ಲದಂತಾಗಿದೆ. ಈ ಕುರಿತು ಕನ್ನಡ ಮಾತು ಅಥವಾ ಕರ್ನಾಟಕ ಓದು (ಬರಹ ಮಾತ್ರವಲ್ಲ, ಕರ್ನಾಟಕದಾದ್ಯಂತ ಜನರು ಮಾತನಾಡುವ ಬಗೆಗಳನ್ನು ಅಧ್ಯಯನಮಾಡುವುದು) ಮುಂದುವರಿಸಿರುವ ಡಾ. ಡಿ. ಎನ್. ಶಂಕರಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ಕನ್ನಡದ ಒಳಗಿನಿಂದಲೇ ಕನ್ನಡದ ಹಲವು ನಿಯಮಗಳನ್ನು ಗುರುತಿಸಿದ್ದಾರೆ ಮತ್ತು ಆ ಕೆಲಸದಲ್ಲಿ ಈಗ ಹೆಚ್ಚು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಈ ಕಾರ್ಯಕ್ಕೆ ಹೊಸ ತಲೆಮಾರಿನ ಬರಹಗಾರ, ಭಾಷಿಕ ಚಿಂತಕರು ಒಲವನ್ನು ತೋರುತ್ತಿದ್ದಾರೆ. ಮುಖ್ಯವಾಗಿ ಆರ್. ಚಲಪತಿ, ಮೇಟಿ ಮಲ್ಲಿಕಾರ್ಜುನ, ಬಸವರಾಜ್ ಕೋಡಗುಂಟಿ, ಪಾಂಡುರಂಗ ಬಾಬು, ಪಿ. ಮಹಾದೇವಯ್ಯ, ಅಶೋಕ್‌ಕುಮಾರ ರಂಜೇರೆ, ಕೆ. ವೆಂಕಟೇಶ್ ಮುಂತಾದವರು. ಕನ್ನಡ ವ್ಯಾಕರಣದಿಂದ ಕನ್ನಡ

ಭಾಷಾಧ್ಯಯನದವರೆಗಿನ ಹಂತಗಳಲ್ಲಿ ಅಥವಾ ಸಂಸ್ಕೃತ ಭಾಷೆಯ ನಿಯಮಗಳಿಗಿಂತ ಭಿನ್ನವಾಗಿ ಇಲ್ಲವೇ ಯಾವ ನಿಯಮಗಳು ಸಂಸ್ಕೃತಕ್ಕೆ ಸಲ್ಲುತ್ತವೆಯೋ ಅವು ಕನ್ನಡದಲ್ಲಿ ಇವೆಯೋ, ಇಲ್ಲವೋ; ಇದ್ದರೆ ಅವುಗಳ ಸ್ವರೂಪವೇನು ಎಂಬುದನ್ನು ಶೋಧಿಸುವ ಮಾದರಿಯನ್ನು ಅನುಸರಿಸಲಾಗುತ್ತಿದೆ. ಸಾಂಪ್ರದಾಯಿಕ ಅಥವಾ ಪಾರಂಪರಿಕ ಕನ್ನಡ ಭಾಷೆಯನ್ನು ಕುರಿತು ನಡೆದು ಬಂದ ದಾರಿಯನ್ನು ಬಿಟ್ಟು 'ಕನ್ನಡದ್ದೇ' ಆದ ದಾರಿಯನ್ನು ತುಳಿದವರು ವಿರೋಧವನ್ನು ಎದುರಿಸಬೇಕಾಯಿತು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಇವರೇ ಕನ್ನಡದ ವಿರೋಧಿಗಳು ಎನ್ನುವಂತೆ ಬಿಂಬಿಸುವ ಪ್ರಯತ್ನವೂ ನಡೆಯುತ್ತಿದೆ. ಈ ಕುರಿತು **ದೇಶ ಕಾಲ ತ್ರೈಮಾಸಿಕ ಪತ್ರಿಕೆ**ಯ ಹದಿನಾಲ್ಕು, ಹದಿನೈದನೆಯ ಸಂಚಿಕೆಗಳಲ್ಲಿ ಸ್ಪಷ್ಟವಾಗಿ ಚರ್ಚೆ ಮತ್ತು ವಿರೋಧ ಕಾಣಬಹುದಾಗಿದೆ.

ಕನ್ನಡದಲ್ಲಿ ನಾವು ಮಾಡಲೇಬೇಕಾಗಿರುವ ಕೆಲವು ಮಾರ್ಪಾಡುಗಳು ಎಂದು ಮುಖ್ಯವಾಗಿ ಕೆಲವು ಬದಲಾವಣೆಗಳನ್ನು ಸವಿಸ್ತಾರವಾಗಿ, ಕಾರಣ, ಸ್ವರೂಪವನ್ನು ಸಹ ಡಾ. ಡಿ. ಎನ್. ಶಂಕರ ಭಟ್ ಅವರು ಹೇಳುತ್ತಾರೆ.

ಸಂಸ್ಕೃತದ ಎರವಲುಗಳನ್ನು ಬೇರೆ ನುಡಿಯ ಎರವಲುಗಳ ಹಾಗೆ ಬರೆಯೋಣ. ಯಾವುದೇ ಒಂದು ಜೀವಂತ ಭಾಷೆಯು ತನ್ನ ಸಂಪರ್ಕಕ್ಕೆ ಬಂದ/ಬರುವ ಭಾಷೆಯಿಂದ ಪದಗಳನ್ನು ಎರವಲು ಪಡೆಯುವುದು ಸಹಜ. ಕನ್ನಡದ ಸನ್ನಿವೇಶದಲ್ಲಿ ಸಂಸ್ಕೃತ, ಇಂಗ್ಲೀಶ್, ಹಿಂದಿ, ಉರ್ದು ಮುಂತಾದ ಭಾಷೆಗಳಿಂದ ಎರವಲು ಪಡೆಯಲಾಗಿದೆ. ಈ ಮೇಲೆ ಸೂಚಿಸಲ್ಪಟ್ಟವುಗಳಲ್ಲಿ ಆ ಭಾಷೆಯ ಉಚ್ಚಾರಣೆಯಂತೆ ಕೆಲವು ಕಡೆ ಅರ್ಥಸಹಿತವಾಗಿಯೂ ಬಳಸದೆ ಇರುವಾಗ, ಅಂದರೆ ಕನ್ನಡದವುಗಳನ್ನಾಗಿ ಮಾರ್ಪಡಿಸಿಕೊಂಡು ಬಳಸುತ್ತೇವೆ. ಆದರೆ ಸಂಸ್ಕೃತ ಪದಗಳನ್ನು ಮಾತ್ರ ಮೂಲದಲ್ಲಿಯ ಹಾಗೇ ಬಳಸುವುದು. ಇದು ಈ "ಹಿಂದಿನ ಕಾಲದಲ್ಲಿದ್ದ ಕನ್ನಡ ವಿದ್ವಾಂಸರಿಗೆ ಸಂಸ್ಕೃತದ ಮೇಲಿದ್ದ ಪೂಜ್ಯಭಾವದಿಂದಾಗಿ ಮತ್ತು ಕನ್ನಡದ ಮೇಲಿದ್ದ ಕೀಳರಿಮೆಯಿಂದಾಗಿ ಈ ಪರಿಸ್ಥಿತಿಯುಂಟಾಗಿದೆ[೧೭]." ಇಂತಹ ಕಾರಣಗಳಿಂದಾಗಿ ಕನ್ನಡವು ಅನುಭವಿಸುತ್ತಿರುವ ಸ್ಥಿತಿಯಿಂದ ಬಿಡಿಸಬೇಕಿದೆ ಎಂಬುದು. "ಎರವಲಾಗಿ ಬಂದ ಪದಗಳ ಉಚ್ಚಾರಣೆಯಲ್ಲಿ ನಡೆಯುವ ಬದಲಾವಣೆಗಳೆಲ್ಲ ಆ ಪದಗಳು ಎರವಲು ಪಡೆದ ನುಡಿಯ ಪದ ಸ್ವರೂಪಕ್ಕೆ ಹೊಂದಿಕೆಯಾಗುವ ಹಾಗೆ ಮಾಡುವುದಕ್ಕಾಗಿ ನಡೆಯುತ್ತವೆ. ಇಂಗ್ಲೀಶ್ ಹಿಂದಿ ಮೊದಲಾದ ನುಡಿಗಳಿಂದ ಎರವಲಾಗಿ ಬಂದ ಪದಗಳ ಹಾಗೆ ಸಂಸ್ಕೃತದಿಂದ ಎರವಲಾಗಿ ಬಂದ ಪದಗಳೂ ಕನ್ನಡದ ಪದಸ್ವರೂಪಕ್ಕೆ ಹೊಂದಿಕೆಯಾಗುವ ಹಾಗೆ

ನಮ್ಮ ಉಚ್ಚಾರಣೆಯಲ್ಲಿ ಬದಲಾಗಿವೆ. ಮಹಾಪ್ರಾಣ ವ್ಯಂಜನಗಳು, ಅಲ್ಪ ಪ್ರಾಣ ವ್ಯಂಜನಗಳಾಗಿವೆ, 'ಷ'ಕಾರ 'ಶ'ಕಾರವಾಗಿದೆ. 'ಋ' ಕಾರ 'ರು' ಎಂದಾಗಿದೆ, ವಿಸರ್ಗ 'ಹ'ಕಾರವಾಗಿದೆ. ಈ ಮಾರ್ಪಾಡುಗಳನ್ನು ಬರಹದಲ್ಲಿ ಅಳವಡಿಸಿಕೊಳ್ಳದೆ ಆ ಅಕ್ಷರಗಳೆಲ್ಲ ಸಂಸ್ಕೃತ ಬರಹದಲ್ಲಿರುವ ಹಾಗೆಯೇ ಕನ್ನಡ ಬರಹದಲ್ಲೂ ಉಳಿದುಕೊಳ್ಳಬೇಕೆಂಬ ನಿಯಮವನ್ನು ಮಾಡಿರುವುದು ಕನ್ನಡಕ್ಕೆ ಮಾಡಿರುವ ಅಪಚಾರ. ಇದನ್ನು ಇವತ್ತು ಸರಿಪಡಿಸಬೇಕಾಗಿದೆ.

ಮೊನ್ನೆ ಮೊನ್ನೆಯವರೆಗೆ ಕನ್ನಡ ಬರಹ ಕೆಲವೇ ಕೆಲವು ಮಂದಿ ಮೇಲ್ವರ್ಗ ಜನರ ಸ್ವತ್ತಾಗಿತ್ತು. ಅದರಲ್ಲಿ ಹೆಚ್ಚಿನವರು ಸಂಸ್ಕೃತವನ್ನೂ ಕಲಿಯುತ್ತಿದ್ದರಾದ ಕಾರಣ ಮೇಲಿನ ನಿಯಮ ಅವರಿಗೆ ಹೆಚ್ಚಿನ ತೊಂದರೆಯನ್ನೇನೂ ಕೊಡುತ್ತಿರಲಿಲ್ಲ. ಆದರೆ ಇವತ್ತು ಕನ್ನಡ ಬರಹ ಎಲ್ಲ ವರ್ಗಗಳ ಮತ್ತು ಎಲ್ಲಾ ಕನ್ನಡಿಗರ ಸ್ವತ್ತಾಗಬೇಕಾಗಿದೆ. ಹಾಗಾಗಿ ಕನ್ನಡ ಬರಹವನ್ನು ಕಲಿಯುವ ಮತ್ತು ಬಳಸುವ ಕೆಲಸದಲ್ಲಿ ಅನಾವಶ್ಯಕವಾಗಿ ತೊಂದರೆ ಕೊಡುವಂತಹ ಈ ಮೇಲಿನ ನಿಯಮವನ್ನು ಇವತ್ತು ಬಿಟ್ಟುಕೊಡಬೇಕಾಗಿದೆ.

ಸಂಸ್ಕೃತದಿಂದ ಎರವಲಾಗಿ ಪಡೆದ ಪದಗಳನ್ನು ಇತರ ಎರವಲು ಪದಗಳ ಹಾಗೆ ಅವು ನಮ್ಮ ಉಚ್ಚಾರಣೆಯಲ್ಲಿ ಹೇಗಿವೆಯೋ ಹಾಗೆಯೇ ಬರೆಯತೊಡಗಿದೆವಾದರೆ ಕನ್ನಡದ ಅಕ್ಷರಮಾಲೆಯಲ್ಲಿ ಒಟ್ಟು ಮೂವತ್ತೊಂದು ಅಕ್ಷರಗಳಿದ್ದರೆ ಸಾಕಾಗುತ್ತದೆ. ಇವೆಲ್ಲವೂ ನಮ್ಮ ಉಚ್ಚಾರಣೆಯಲ್ಲಿ ಕಾಣಿಸುವ ಅಕ್ಷರಗಳೇ ಆದಕಾರಣ ಮಕ್ಕಳಿಗೆ ಅವನ್ನು ಕಲಿಸಲು ಕಷ್ಟವಾಗುವುದಿಲ್ಲ'[೧೮]. ಕನ್ನಡ ಬರಹವನ್ನು ನೋಡಿ ಅಕ್ಷರಗಳನ್ನು ಅಂದರೆ ವರ್ಣಮಾಲೆಯನ್ನು ರೂಪಿಸುವುದು ತಪ್ಪಾಗುತ್ತದೆ. ಏಕೆಂದರೆ ಕನ್ನಡ ಬರಹವು ಸಂಸ್ಕೃತದ ನೆರಳಿನಲ್ಲಿ ಜನಿಸಿದಂತೆ ಬೆಳೆಸಲಾಗಿದೆ. ಹಾಗಾಗಿ ಕನ್ನಡ ಬರಹ ಮತ್ತು ಮಾತಿನ ನಡುವೆ ಕಂದಕವಿದೆ. ಇದು ಕನ್ನಡದ ಕಂಟಕವೇ. ಅದೇನೇ ಇರಲಿ ವರ್ಣಮಾಲೆಯನ್ನು ರೂಪಿಸುವಾಗ ಆ ಭಾಷೆಯ ಮಾತನ್ನು ನಾವು ಗಮನಿಸಿ ತೀರ್ಮಾನಿಸಬೇಕಿರುತ್ತದೆ. ಕನ್ನಡ ಮಾತಿನಲ್ಲಿ ಇಲ್ಲದವು ಬರಹದಲ್ಲಿ ಇವೆ ಎಂಬುದನ್ನು ಡಾ. ಡಿ. ಎನ್. ಶಂಕರ ಭಟ್ ಅವರು 'ಕನ್ನಡ ನುಡಿ ನಡೆದು ಬಂದ ದಾರಿ' ಎಂಬ ಪುಸ್ತಕದಲ್ಲಿ ಸಾಕಷ್ಟು ಸುದೀರ್ಘವಾಗಿ ವಿವರಿಸಿದ್ದಾರೆ. ಈ ಬದಲಾವಣೆ ಸಾಮಾನ್ಯವಾಗಿ ಈಗಾಗಲೇ ರೂಢಿ ಇರುವುದನ್ನು ಬಿಟ್ಟುಕೊಡುವುದೆಂದರೆ ಇರಿಸು ಮುರಿಸಾಗುತ್ತದೆ. ಆದರೆ ಕ್ರಮೇಣ ಹೊಂದಾಣಿಕೆಯಾಗುತ್ತದೆ ಎಂಬುದು ಅವರ ನಂಬಿಕೆ. ಹಾಗೆಯೇ ಪರಂಪರೆಯುದ್ದಕ್ಕೂ ಸ್ವತ್ತಾಗಿಸಿಕೊಂಡ ಮಂದಿಗೂ ಇರಿಸುಮುರಿಸಾಗುವುದು ಖಚಿತ.

ಆದರೆ ಕನ್ನಡ ಹಾಗಾಗದಂತೆ, ಅನ್ಯಾಯವಾಗದಂತೆ ನೋಡಿಕೊಳ್ಳಬೇಕಿದ್ದರೆ ಈ ಮಾರ್‍ಪಾಡು ಅನಿವಾರ್‍ಯ ಎನ್ನುತ್ತಾರೆ.

ಕನ್ನಡ ವರ್‍ಣಮಾಲೆಯನ್ನು ಡಾ. ಡಿ. ಎನ್. ಶಂಕರಭಟ್ ಅವರು ವಿವರಿಸುವುದು ಹೀಗೆ :

**ಕನ್ನಡ ಸ್ವರಗಳ ಪಟ್ಟಿ :** ಕನ್ನಡದ ವೈಯಾಕರಣಿಗಳು ಸಂಸ್ಕೃತದ ಸ್ವರಗಳ ಪಟ್ಟಿಯಲ್ಲಿ ಅಲ್ಪ ಸ್ವಲ್ಪ ಬದಲಾವಣೆಗಳನ್ನು ಮಾಡಿ (ಉದ್ದ ಆ, ಈ, ಊ ಸ್ವರಗಳನ್ನು ಮತ್ತು ಗಿಡ್ಡ ಎ ಮತ್ತು ಒ ಸ್ವರಗಳನ್ನು ಅದಕ್ಕೆ ಸೇರಿಸಿ ಮತ್ತು ಐ ಸ್ವರವನ್ನು ಒ ಸ್ವರದ ಮೊದಲು ಇರಿಸಿ) ತಮ್ಮ ವ್ಯಾಕರಣಗಳಲ್ಲಿ ಬಳಸಿಕೊಂಡಿದ್ದಾರೆ.

ಆದರೆ ಸಂಸ್ಕೃತ ವೈಯಾಕರಣಿಗಳ ಹಾಗೆ ಈ ಪಟ್ಟಿಯಲ್ಲಿ ಬರುವ ಸ್ವರಗಳ ಅನುಕ್ರಮವನ್ನು ಕನ್ನಡ ವ್ಯಾಕರಣದ ಸೇರಿಕೆಯ ನಿಯಮಗಳನ್ನು ವಿವರಿಸುವಲ್ಲಿ ಬಳಸಿಕೊಳ್ಳಲು ಯಾವ ರೀತಿಯಲ್ಲೂ ಅವರಿಗೆ ಸಾಧ್ಯವಾಗಿಲ್ಲ.

ಎಂದರೆ, ಈ ಪಟ್ಟಿಯಲ್ಲಿ ಬರುವ ಸ್ವರಗಳ ಅನುಕ್ರಮ ಕನ್ನಡ ವ್ಯಾಕರಣದ ಮಟ್ಟಿಗೆ ಸಂಪೂರ್‍ಣವಾಗಿ ಅನುಪಯುಕ್ತವಾಗಿಯೇ ಉಳಿದಿದೆ. ನಿಜಕ್ಕೂ ಈ ಪಟ್ಟಿ ಕನ್ನಡ ವ್ಯಾಕರಣಕ್ಕೆ ಅನುಕೂಲವಾಗಿಲ್ಲದಿರುವುದೇ ಇದಕ್ಕೆ ಕಾರಣ.

ಉದಾಹರಣೆಗಾಗಿ, ಕನ್ನಡದಲ್ಲಿ ಅ, ಇ, ಉ ಎಂಬವುಗಳು ಮಾತ್ರವಲ್ಲದೆ ಎ, ಒ, ಎಂಬವುಗಳೂ ಗಿಡ್ಡ ಮತ್ತು ಉದ್ದ ರೂಪಗಳಲ್ಲಿ ಬರಬಲ್ಲವು. ಆದರೆ, ಐ ಮತ್ತು ಔ 'ಸ್ವರ'ಗಳಿಗೆ ಒಂದೇ ರೂಪವಿದೆ. ಹಾಗಾಗಿ, ಐ ಎಂಬುದನ್ನು ಒ ಎಂಬುದರ ಮೊದಲು ಇರಿಸಿರುವುದು ಕನ್ನಡದ ಮಟ್ಟಿಗೆ ಸರಿಯಲ್ಲ.

ಇದಲ್ಲದೆ, ಐ ಮತ್ತು ಔ ಗಳಿಗೆ ಕನ್ನಡದಲ್ಲಿ ವಿಶಿಷ್ಟವಾದ ಸ್ಥಾನವೇ ಇಲ್ಲ. ಅವು ಅಕಾರದೊಂದಿಗೆ ಯಕಾರ ಮತ್ತು ವಕಾರಗಳು ಸೇರಿದಾಗ ಉಂಟಾಗುವ ಅಯ್ ಮತ್ತು ಅವ್ ಎಂಬ ಅಕ್ಷರ ಜೋಡಿಗಳಲ್ಲದೆ, ಸಂಸ್ಕೃತದಲ್ಲಿ ಕಾಣಿಸುವ ಹಾಗೆ ವಿಶಿಷ್ಟವಾದ 'ಸಂಧಿಸ್ವರ'ಗಳಲ್ಲ.

ಸಂಸ್ಕೃತದಲ್ಲಿ ಯಕಾರ ಮತ್ತು ವಕಾರಗಳನ್ನು ಬಳಸಿರುವ ಈ ಎರಡು ಅಕ್ಷರ ಜೋಡಿಗಳು ಮಾತ್ರ ಬಳಕೆಯಲ್ಲಿವೆ. ಆದರೆ ಕನ್ನಡದಲ್ಲಿ ಇವು ಮಾತ್ರವಲ್ಲದೆ ಎಯ್, ಒಯ್, ಆಯ್, ಇವ್ ಮೊದಲಾದ ಬೇರೆಯೂ ಹಲವು ಅಂತಹವೇ ಅಕ್ಷರಜೋಡಿಗಳೂ (ಗೆಯ್ಮೆ, ಕೊಯ್ಲು, ಆಯ್ಕೆ, ಕಿವ್ಚು) ಬಳಕೆಯಲ್ಲಿವೆ. ಹಾಗಾಗಿ,

ಮೇಲಿನ ಎರಡು ಅಕ್ಷರಜೋಡಿಗಳಿಗೆ (ಅಯ್ ಮತ್ತು ಅವ್‌ಗಳಿಗೆ) ಮಾತ್ರ ಒಂದು ವಿಶಿಷ್ಟವಾದ ಸ್ಥಾನವನ್ನು ಕೊಡುವುದರಲ್ಲಿ ಕನ್ನಡದ ಮಟ್ಟಿಗೆ ಯಾವ ಔಚಿತ್ಯವೂ ಇಲ್ಲ.

ಕನ್ನಡದ ಸೇರಿಕೆಯ ನಿಯಮಗಳಲ್ಲಿ ಇಕಾರ ಮತ್ತು ಎಕಾರಗಳು ಒಂದು ರೀತಿಯಲ್ಲಿ ಕಾಣಿಸಿಕೊಳ್ಳುವುವಾದರೆ ಉಕಾರ, ಒಕಾರ ಮತ್ತು ಅಕಾರಗಳು ಇನ್ನೊಂದು ರೀತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಉದಾಹರಣೆಗಾಗಿ ಇಕಾರ ಮತ್ತು ಎಕಾರಗಳ ಅನಂತರ ಯಕಾರ ಆಗಮವಾಗಿ ಬರುವುದಾದರೆ (ಮನೆಯ), ಉಕಾರ, ಒಕಾರ ಮತ್ತು ಅಕಾರಗಳ ಅನಂತರ ವಕಾರ ಆಗಮವಾಗಿ ಬರುತ್ತದೆ (ಮಗುವಿಗೆ). ಈ ವಿಷಯದಲ್ಲೂ ಮೇಲಿನ ಸ್ವರಗಳ ಪಟ್ಟಿ ಕನ್ನಡ ವ್ಯಾಕರಣದ ಮಟ್ಟಿಗೆ ಅನುಕೂಲವಾಗಿಲ್ಲ.

ಸಂಸ್ಕೃತ ಪದಗಳಲ್ಲಿ ಕಾಣಿಸುವ ಏಕಾರ ಮತ್ತು ಓಕಾರಗಳು ನಿಜಕ್ಕೂ ಮೂಲ ಪದದಲ್ಲಿದ್ದ ಸ್ವರಗಳಲ್ಲ. ಯಾಕೆಂದರೆ, ಸಂಸ್ಕೃತದ ಮೂಲ ಭಾಷೆಯಾದ ಇಂಡೋ – ಯುರೋಪಿಯನ್‌ನಲ್ಲಿದ್ದ ಎಕಾರ – ಒಕಾರಗಳು ಸಂಸ್ಕೃತದಲ್ಲಿ ಅಕಾರವಾಗಿ ಬದಲಾಗಿವೆ ಮತ್ತು ಏಕಾರ – ಓಕಾರಗಳು ಅಕಾರವಾಗಿ ಬದಲಾಗಿವೆ.

ಅದೇ ಮೂಲಭಾಷೆಯಲ್ಲಿದ್ದ ಅಇ, ಎಇ, ಮತ್ತು ಒಇ ಸ್ವರಜೋಡಿಗಳು ಏಕಾರವಾಗಿ ಮತ್ತು ಅಉ, ಎಉ, ಮತ್ತು ಒಉ ಸ್ವರ ಜೋಡಿಗಳು ಓಕಾರವಾಗಿ ಬದಲಾದುದರಿಂದಾಗಿ ಇವತ್ತು ಸಂಸ್ಕೃತ ವೇದ, ತೇ, ಓಜಸ್ ಮೊದಲಾದ ಪದಗಳಲ್ಲಿ ಈ ಎರಡು ಸ್ವರಗಳು ಕಾಣಿಸಿಕೊಳ್ಳುತ್ತಿವೆ.

ಇದಲ್ಲದೆ ಸೇರಿಕೆಯ ನಿಯಮಗಳ ಮೂಲಕವೂ ಇವು ಸಂಸ್ಕೃತ ಪದಗಳಲ್ಲಿ ಕಾಣಿಸಿಕೊಳ್ಳುವುದಾದ ಕಾರಣ, ಸಂಸ್ಕೃತದ ವೈಯಾಕರಣಿಗಳು ಈ ಎರಡು ಸ್ವರಗಳನ್ನು ಸಂಧ್ಯಕ್ಷರಗಳೆಂದು ಕರೆಯುತ್ತಾರೆ. ಉದಾಹರಣೆಗಾಗಿ, ಅಕಾರ ಮತ್ತು ಆಕಾರಗಳು ಇಕಾರ ಮತ್ತು ಈಕಾರಗಳೊಂದಿಗೆ ಸೇರಿದಾಗ ಏಕಾರವೂ (ರಾಜ+ಇಂದ್ರ>ರಾಜೇಂದ್ರ, ಗಣ+ಈಶ>ಗಣೇಶ), ಉಕಾರ ಮತ್ತು ಊಕಾಗಳೊಂದಿಗೆ ಸೇರಿದಾಗ ಓಕಾರವೂ (ಸೂರ್ಯ+ಉದಯ>ಸೂರ್ಯೋದಯ, ಗಂಗಾ+ಉದಕ>ಗಂಗೋದಕ) ಸಂಸ್ಕೃತದಲ್ಲಿ ಆದೇಶಗಳಾಗಿ ಬರುತ್ತವೆ.

ಏಕಾರ ಮತ್ತು ಓಕಾರಗಳನ್ನು ಅಕಾರ, ಇಕಾರ ಮತ್ತು ಉಕಾರಗಳಿಂದ ಪ್ರತ್ಯೇಕಿಸಿ ಪಟ್ಟಿಮಾಡುವುದರ ಮೂಲಕ ಸಂಸ್ಕೃತದ ವೈಯಾಕರಣಿಗಳು ಈ ವಿಷಯವನ್ನು ಸೂತ್ರರೂಪದಲ್ಲಿ ವಿವರಿಸಲು ಶಕ್ತರಾಗಿದ್ದಾರೆ.

ಕನ್ನಡದ ವ್ಯಾಕರಣಕ್ಕೆ ಅದರ ಸ್ವರಗಳ ಪಟ್ಟಿ ಅನುಕೂಲವಾಗಬೇಕಾದಲ್ಲಿ ಅದರಲ್ಲಿ ಬರುವ ಸ್ವರಗಳ ಸಂಖ್ಯೆಯನ್ನು ಮಾತ್ರವಲ್ಲದೆ ಜಾಗವನ್ನೂ ಬದಲಾಯಿಸಬೇಕು. ಎಂದರೆ, ಇ, ಈ, ಎ, ಏ, ಉ, ಊ, ಒ, ಓ, ಮತ್ತು ಅ, ಆ ಎಂಬುದಾಗಿ ಇಕಾರ – ಈಕಾರಗಳನ್ನು ಎಕಾರ – ಏಕಾರಗಳೊಂದಿಗೆ ಮತ್ತು ಉಕಾರ – ಊಕಾರಗಳನ್ನು ಒಕಾರ – ಓಕಾರಗಳೊಂದಿಗೆ ಇರಿಸಿ ಪಟ್ಟಿಮಾಡಬೇಕು.

ಇದಲ್ಲದೆ, ಅಕಾರ – ಆಕಾರಗಳನ್ನು ಇಕಾರ ಮತ್ತು ಎಕಾರದೊಂದಿಗೆ ಇರಿಸುವ ಬದಲು ಉಕಾರ ಮತ್ತು ಒಕಾರದೊಂದಿಗೆ ಇರಿಸಬೇಕು.

ಹೀಗೆ ಮಾಡಿದಲ್ಲಿ, ಈ ಸ್ವರಗಳ ಪಟ್ಟಿಯನ್ನು ಬಳಸಿ ಕನ್ನಡದಲ್ಲಿ ಕಾಣಿಸುವ ಸೇರಿಕೆಯ ನಿಯಮಗಳನ್ನು ಸಂಸ್ಕೃತ ವ್ಯಾಕರಣದಲ್ಲಿರುವ ಹಾಗೆ ಸೂತ್ರರೂಪದಲ್ಲಿ ತಿಳಿಸಿ ಹೇಳಲು ಸಾಧ್ಯವಾದೀತು.

ಕನ್ನಡಕ್ಕೆ ಅವಶ್ಯವಿರುವ ಇಂತಹ ಸ್ವರಗಳ ಪಟ್ಟಿಗೆ ಉಚ್ಚಾರಣೆಯ ಆಧಾರವಿದೆ. ಇಕಾರ –ಎಕಾರಗಳು ನಾಲಿಗೆಯ ಮುಂಭಾಗದಲ್ಲಿ ಹುಟ್ಟುತ್ತವೆ ಮತ್ತು ಉಕಾರ, ಒಕಾರ ಮತ್ತು ಅಕಾರಗಳು ನಾಲಿಗೆಯ ಹಿಂಭಾಗದಲ್ಲಿ ಹುಟ್ಟುತ್ತವೆ. ( ಅಕಾರದ ಕೆಲವು ಪ್ರಭೇದಗಳು ಮಾತ್ರ ನಾಲಿಗೆಯ ನಡುಭಾಗದಲ್ಲಿ ಹುಟ್ಟುತ್ತವೆ ). ಈ ವ್ಯತ್ಯಾಸವನ್ನು ಕೆಳಗೆ ಕಾಣಿಸಿದ ಹಾಗೆ ಚಿತ್ರಿಸಲು ಸಾಧ್ಯವಿದೆ.

| **ಬಾಯಿಯ ಜಾಗ** | **ನಾಲಿಗೆಯ ಜಾಗ** | |
|---|---|---|
| | ಮುಂ(ಭಾಗ) | ಹಿಂ(ಭಾಗ) |
| ಮೇಲೆ | ಇ, ಈ | ಉ, ಊ |
| ನಡುವೆ | ಎ, ಏ | ಒ, ಓ |
| ಕೆಳಗೆ | | ಅ, ಆ[೧೯] |

ಈ ರೀತಿ ಸ್ವರಗಳ ಹುಟ್ಟನ್ನಾಧರಿಸಿ ರಚಿಸಿದ ಪಟ್ಟಿಯೇ ಕನ್ನಡದ ಮಟ್ಟಿಗೆ ಹೆಚ್ಚು 'ವೈಜ್ಞಾನಿಕ'ವಾದುದು. ಇದು ಮೇಲೆ ವಿವರಿಸಿದ ಸಂಸ್ಕೃತ ಸ್ವರಗಳ ಪಟ್ಟಿಯಿಂದ ತೀರ ಭಿನ್ನವಾಗಿದೆ ಎಂಬುದನ್ನು ಗಮನಿಸಬಹುದು.

**ವ್ಯಂಜನಗಳ ಪಟ್ಟಿ** : ಸಂಸ್ಕೃತದ ವ್ಯಂಜನಗಳನ್ನು ವರ್ಗೀಯಗಳು ( ಸ್ಪರ್ಶ ಮತ್ತು ಅನುನಾಸಿಕಗಳು ) ಮತ್ತು ಅವರ್ಗೀಯಗಳು ಎಂಬುದಾಗಿ ಎರಡು ಮುಖ್ಯ ಗುಂಪುಗಳಲ್ಲಿ ವಿಂಗಡಿಸಲಾಗಿದೆ. ಇವುಗಳಲ್ಲಿ ವರ್ಗೀಯಗಳನ್ನು ಅವುಗಳ

ಉಚ್ಚಾರಣೆಯ ಜಾಗವನ್ನು ಆಧರಿಸಿ ಐದು ವರ್ಗಗಳಲ್ಲಿ ವಿಂಗಡಿಸಲಾಗಿದ್ದು, ಅವುಗಳಲ್ಲಿ ಪ್ರತಿಯೊಂದು ವರ್ಗದಲ್ಲೂ ಅಘೋಷ –ಅಲ್ಪಪ್ರಾಣ (ಕಚಟತಪ), ಅಘೋಷ – ಮಹಾಪ್ರಾಣ (ಖಛಠಥಫ), ಘೋಷ – ಅಲ್ಪ ಪ್ರಾಣ (ಗಜಡದಬ), ಘೋಷ – ಮಹಾಪ್ರಾಣ (ಘಝಢಧಭ) ಮತ್ತು ಅನುನಾಸಿಕ (ಙಞಣನಮ) ಎಂಬುದಾಗಿ ಐದೈದು ವ್ಯಂಜನಗಳು ಕಾಣಿಸಿಕೊಳ್ಳುತ್ತವೆ. ಅವರ್ಗೀಯಗಳನ್ನು ಅಂತಸ್ಥ (ಯರಲವ) ಮತ್ತು ಊಷ್ಮ (ಸಶಷಹ) ಎಂಬುದಾಗಿ ವಿಂಗಡಿಸಲಾಗಿದೆ.

ಕನ್ನಡದ ವ್ಯಂಜನಗಳನ್ನು ಈ ರೀತಿಯಲ್ಲಿ ವಿಂಗಡಿಸುವ ಬದಲು ಬೇರೆ ರೀತಿಯಲ್ಲಿ ವಿಂಗಡಿಸುವುದರಿಂದ ಅದರ ಸೇರಿಕೆಯ ನಿಯಮಗಳನ್ನು ವಿವರಿಸುವ ಕೆಲಸ ಹೆಚ್ಚು ಸುಲಭವಾಗಬಲ್ಲದು. ಕನ್ನಡದಲ್ಲಿ ಮಹಾಪ್ರಾಣಾಕ್ಷರಗಳಿಲ್ಲ. ಇದಲ್ಲದೆ, ಣನಮಗಳೆಂಬ ಮೂರೂ ಅನುನಾಸಿಕಗಳು ಮತ್ತು ಸಶಹಗಳೆಂಬ ಮೂರು ಊಷ್ಮಗಳು ಮಾತ್ರ ಕನ್ನಡದಲ್ಲಿ ಬಳಕೆಯಲ್ಲಿವೆ.

ಈ ವ್ಯಂಜನಗಳನ್ನು ವರ್ಗೀಯ ಮತ್ತು ಅವರ್ಗೀಯಗಳೆಂದು ವಿಂಗಡಿಸುವ ಬದಲು, ಅವುಗಳ ಉಚ್ಚಾರಣೆಗಳನ್ನವಲಂಬಿಸಿ ಕೆಳಗೆ ಕೊಟ್ಟಿರುವ ಹಾಗೆ ವಿಂಗಡಿಸುವುದು ಕನ್ನಡದ ಮಟ್ಟಿಗೆ ಹೆಚ್ಚು ಅನುಕೂಲ.

ಉದಾಹರಣೆಗಾಗಿ, ಈ ಪಟ್ಟಿಯಲ್ಲಿ ಪಬಮವಗಳನ್ನು ಒಟ್ಟಾಗಿ ಕಾಲಂನಲ್ಲಿ ಹೇಳಿರುವುದರಿಂದ ಅವುಗಳ ನಡುವಿರುವ ಹತ್ತಿರದ ಸಂಬಂಧವನ್ನು ಸೂಚಿಸಲು ಸಾಧ್ಯವಾಗುತ್ತದೆ. ಇತರ ಕಾಲಂಗಳಲ್ಲಿ ಬರುವ ವ್ಯಂಜನಗಳ ನಡುವೆ ಮತ್ತು ಬೇರೆ ಬೇರೆ ಸಾಲುಗಳಲ್ಲಿ ಬರುವ ವ್ಯಂಜನಗಳ ನಡುವೆಯೂ ಇಂತಹವೇ ಹತ್ತಿರದ ಸಂಬಂಧಗಳು ಕಂಡುಬರುತ್ತವೆ.

ಈ ಸಂಬಂಧಗಳು ಕನ್ನಡದ ಚರಿತ್ರೆಯಲ್ಲಿ ನಡೆದಿರುವ ಬದಲಾವಣೆಗಳಲ್ಲಿ ಮತ್ತು ಕನ್ನಡ ಪದಗಳ ಒಳರಚನೆಯಲ್ಲಿ ಬಳಕೆಯಾಗುವ ಸೇರಿಕೆಯ ನಿಯಮಗಳಲ್ಲಿ ಕಾಣಿಸಿಕೊಳ್ಳುತ್ತವೆ.

**ಕನ್ನಡ ವ್ಯಂಜನಗಳ ಪಟ್ಟಿ**

| | | | | |
|---|---|---|---|---|
| ಪ | ತ | ಟ | ಚ | ಕ |
| ಬ | ದ | ಡ | ಜ | ಗ |

ಮ ನ ಣ

ವ ಯ

ರ

ಲ ಳ

ಸ ಶ ಹ

ಇದು ಡಾ. ಡಿ. ಎನ್. ಶಂಕರ ಭಟ್ ಅವರು ಕನ್ನಡಿಸಿರುವ ಕನ್ನಡ ವರ್ಣಮಾಲೆಯನ್ನು ಕುರಿತ 'ವೈಜ್ಞಾನಿಕ'ವಾದ ಕ್ರಮ.

ಯಾವುದೇ ಭಾಷೆಯನ್ನಾಡುವ ಜನರು ಬದುಕಿನ ಸ್ಥಿತಿ, ವ್ಯಾಪಾರ, ತಂತ್ರಜ್ಞಾನ ಮುಂತಾದವುಗಳು ಕಾಲನ ಕಟ್ಟಳೆಯಲ್ಲಿ ಹುಟ್ಟುವ ಹತ್ತು – ಹಲವು ಸಂಗತಿಗಳಿಗೆ ಯಾವುದೇ ಭಾಷೆಯಲ್ಲಿ ಮೊದಲೇ ಪದಗಳು ಸಿದ್ಧಗೊಂಡಿರುವುದಿಲ್ಲ. ಸನ್ನಿವೇಶಕ್ಕೆ ಅನುಗುಣವಾಗಿ ಹೊಸ ಪದಗಳು ಜನ್ಮ ತಳೆಯುತ್ತವೆ. ಇಲ್ಲವೇ ಬೇರೆ ಭಾಷೆಯಿಂದ ಅಥವಾ ವಸ್ತುವಿನ ಜೊತೆಯಲ್ಲಿ ಪದವನ್ನು ತೆಗೆದುಕೊಳ್ಳುತ್ತದೆ. ಮೊಬೈಲ್, ಕಂಪ್ಯೂಟರ್ ಮುಂತಾಗಿ. ಆದರೆ ಹಲವು ಕಡೆ ಸಾಮಾನ್ಯವಾಗಿ ಸಂಸ್ಕೃತದ ಪದಗಳನ್ನು ತೆಗೆದುಕೊಂಡು ಬರುವುದಕ್ಕೆ ಮುಂದಾಗುತ್ತದೆ. ಅಂತಹ ಪದಗಳು ಮೂಲಕ್ಕೂ ಹತ್ತಿರವಿರುವುದಿಲ್ಲ, ಇತ್ತ ಕನ್ನಡಕ್ಕೂ ಹತ್ತಿರವಿರುವುದಿಲ್ಲ. ಬದಲಾಗಿ ತ್ರಿಶಂಕುಗಳಾಗಿ ಕಲಿಯುವವರ ಆಸಕ್ತಿಗೆ ಪೆಟ್ಟುಕೊಡುತ್ತವೆ. ಉದಾಹರಣೆ : ಉತ್ಸರ್ಜಕತೆ (ಎಮಿಸಿವಿಟಿ), ಪರ್ಯಾಯನ (ಆಲ್ಟರ್ನೇಷನ್), ಶೈತ್ಯಜನಕ (ಕ್ರಯೋಜನಿಕ), ಆತಂಚನೀಯ (ಕೋಆಗ್ಯುವೆಲ್ಲ್) ಪುನರ್ಘನೀಕರಿಸು (ರಿಜಿಲೇಟ್) ಇಂತಹ ನರಕದ ಸೃಷ್ಟಿಯ ಬದಲಾಗಿ ಕನ್ನಡದ್ದೇ ಆಲೋಚನೆಯುಕ್ತ ಪದಗಳನ್ನು ಸೃಷ್ಟಿಸುವುದು ಯುಕ್ತ ಎನ್ನುತ್ತಾರೆ. ಕನ್ನಡ ಬರಹವನ್ನು ಸರಿ ಪಡಿಸೋಣ, ಕನ್ನಡ ನುಡಿಯ ಬಗೆಗೆ ಚಿಂತನೆ, ಕನ್ನಡಕ್ಕೆ ಕನ್ನಡದ್ದೇ ಆದ ಪದಗಳು, ಕನ್ನಡಕ್ಕೆ ಸಂಸ್ಕೃತ ಮೂಲವನ್ನಲ್ಲ. ಕನ್ನಡ ಪದಗಳ ಒಳ ರಚನೆ ಮುಂತಾದ ಬರಹಗಳಲ್ಲಿ ಈ ಕುರಿತು ಸಾಕಷ್ಟು ಚರ್ಚಿಸಿದ್ದಾರೆ.

ಯಾವುದೇ ಮಗು ಒಂದು ಭಾಷೆಯನ್ನು ಕಲಿಯಲು ಆರಂಭಿಸಿದಾಗಲೇ ಆ ಮಗುವಿನ ಮಿದುಳಿನಲ್ಲಿ ಆ ಭಾಷೆಯ ರಚನೆಗಳು ಮತ್ತು ನಿಯಮಗಳು ಸಂಗ್ರಹವಾಗುತ್ತವೆ. ಹಾಗೆ ಸಂಗ್ರಹಿತ ದತ್ತವು ಅರಿವಿಗೆ ಎಟುಕದ ಅಂಶಗಳಾಗಿರುತ್ತವೆ. ಅವುಗಳಿಂದ ಸಮರ್ಥವಾಗಿ ಮಾತಾಡಬಲ್ಲೆವು, ಆದರೆ ವಿವರಿಸಿ ಹೇಳಲಾಗುವುದಿಲ್ಲ.

ಅದು ಅರಿವಿಗೆ ಬಾರದ ಸ್ಥಿತಿಯಲ್ಲಿರುವ ವ್ಯಾಕರಣ. ಆದರೆ ಈಗಾಗಲೇ ಕನ್ನಡಿಗರೆಲ್ಲರು ಬಳಸುತ್ತ ಬಂದಿರುವ ವ್ಯಾಕರಣವು ಕನ್ನಡ ವ್ಯಾಕರಣವಲ್ಲ. ಅದು ಕನ್ನಡ ವ್ಯಾಕರಣದ ಹೆಸರಿನಲ್ಲಿ ಕಲಿಯುತ್ತಿರುವ ಸಂಸ್ಕೃತ, ಲ್ಯಾಟಿನ್ ಮತ್ತು ಇಂಗ್ಲೀಶ್ ಭಾಷೆಯ ವ್ಯಾಕರಣ ನಿಯಮಗಳನ್ನು ಹಾಗೆಯೇ ಕನ್ನಡಕ್ಕೆ ಅಳವಡಿಸಲು ಮಾಡಿರುವ ಪ್ರಯತ್ನಗಳೇ ಆಗಿವೆ. ಆದರೆ ಕನ್ನಡದ್ದೇ ಆದ ನಿಯಮಗಳನ್ನು ಈವರೆಗೆ ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಮತ್ತು ಕಂಡುಕೊಳ್ಳುವ ತುರ್ತು ಇದೆ ಎಂದು, ಅಂತಹ ಪ್ರಯತ್ನವನ್ನು ಡಾ. ಡಿ. ಎನ್. ಶಂಕರ ಭಟ್ ಅವರು ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಎಂಬ ಕೃತಿಯಲ್ಲಿ ವಿವರಿಸುತ್ತಾರೆ. ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದ್ದು?, ಕನ್ನಡ ವ್ಯಾಕರಣ ಯಾಕೆ ಬೇಕು?, ಕನ್ನಡ ಬರಹದ ಸೊಲ್ಲರಿಮೆ ಎರಡು ಸಂಪುಟಗಳಲ್ಲಿ ಈಗಾಗಲೇ ಪ್ರಕಟಿಸಿದ್ದಾರೆ. ಹಾಗೆಯೇ ಡಾ. ಕೆ. ವಿ. ನಾರಾಯಣ ಅವರು ಕನ್ನಡ ನುಡಿಯ ಸೊಲ್ಲರಿಮೆ ಭಾಗ ಒಂದನ್ನು ಪ್ರಕಟಿಸಿದ್ದಾರೆ. ಇದಲ್ಲದೆ ಈ ಇಬ್ಬರು ವಿದ್ವಾಂಸರು ಮಾತು ಮತ್ತು ಬರಹದ ನಡುವಿನ ಅಂತರ ಮತ್ತು ಸ್ವರೂಪವನ್ನು ಸಾಕಷ್ಟು ವಿವರಿಸಿದ್ದಾರೆ.

ಸಮಾನ ಮನಸ್ಕ ಮತ್ತು ಆಸಕ್ತಿಯುಳ್ಳ ಡಾ. ಕೆ. ವಿ. ನಾರಾಯಣ ಅವರು, ಡಾ. ಡಿ. ಎನ್. ಶಂಕರ ಭಟ್ ಅವರು ಕನ್ನಡ ಭಾಷಾಧ್ಯಯನವನ್ನು ಕುರಿತು ಹೀಗೆ ಹೇಳುತ್ತಾರೆ. "ಕನ್ನಡ ಭಾಷೆಯ ರಚನೆಯನ್ನು ಆ ಭಾಷೆಯ ಮೂಲಕವೇ ಕಂಡುಕೊಳ್ಳಬೇಕೆಂದು ವಾದಿಸುವ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಕೃತಿಯನ್ನು ರಚಿಸಿದರು. ಇಲ್ಲಿ ಅವರ ವಾದ ಎರಡು ನೆಲೆಯಲ್ಲಿ ಮುಂದುವರೆದಿದೆ. ಒಂದು : ಸಂಸ್ಕೃತ ವ್ಯಾಕರಣದ ನಿಯಮಗಳು ಕನ್ನಡಕ್ಕೆ ಹೊಂದುವುದಿಲ್ಲ ಎಂದು ತೋರಿಸುವುದು. ಎರಡು : ಕನ್ನಡ ಭಾಷೆಯನ್ನು ವಿಶ್ಲೇಷಿಸುವ ಮೂಲಕವೇ ಆ ಭಾಷೆಯ ರಚನೆಯನ್ನು ಗ್ರಹಿಸಲು ತೊಡಗುವುದು. ಇವೆರಡೂ ಪೂರಕ ಪ್ರಯತ್ನಗಳು. ಕನ್ನಡದಲ್ಲಿ ಇರುವ ಪದವರ್ಗಗಳು ಎಷ್ಟು? ಸಂಸ್ಕೃತದ ನಿಯಮದಂತೆ ನಾಮಪದ ಮತ್ತು ವಿಶೇಷಣಗಳನ್ನು ಒಂದೇ ಪದವರ್ಗಕ್ಕೆ ಸೇರಿಸಿದರೆ ಆಗುವ ತೊಂದರೆಗಳೇನು, ಇವೆಲ್ಲ ಪ್ರಯತ್ನಗಳನ್ನು ಭಟ್ ವಿವರಿಸುತ್ತಾರೆ. ಕನ್ನಡದಲ್ಲಿ ವಿಶೇಷಣಗಳು ನಾಮಪದದಿಂದ ಬೇರೆಯೇ ಆದ ಪದವರ್ಗವೆಂಬುದನ್ನು ತೋರಿಸಿಕೊಡುತ್ತ ಜಗತ್ತಿನ ಹಲವು ಭಾಷೆಗಳಲ್ಲಿ ಈ ಲಕ್ಷಣ ಇದೆ ಎಂಬುದನ್ನು ವಿವರಿಸಿದ್ದಾರೆ. ಹಾಗೆಯೇ ಕನ್ನಡದಲ್ಲಿ ಸಮಾಸಗಳನ್ನು ವಿವರಿಸುವಾಗ ಈಗಿರುವಂತೆ ಸಂಸ್ಕೃತದ ಸಮಾಸಗಳ ವ್ಯಾಖ್ಯೆಯನ್ನು ಬಳಸುವುದು ಸೂಕ್ತವಲ್ಲ. ಕನ್ನಡದಲ್ಲಿ ಉತ್ತರ ಪದವು ರಚನೆಯ ಕೇಂದ್ರವಾಗಿರುವುದರಿಂದ ಆ ಪದವು ಯಾವ ಪದವರ್ಗಕ್ಕೆ

ಉದಾಹರಣೆಗೆ : ನಾಮ ಪದ, ಕ್ರಿಯಾ ಪದ ಮತ್ತು ಗುಣ ಪದ ಸೇರುತ್ತವೆ ಎಂಬುದನ್ನು ಅವಲಂಬಿಸಿ ಮೂರುಬಗೆಯ ಸಮಾಸಗಳನ್ನು ಗುರುತಿಸಿದರೆ ಸಾಕು ಎಂದು ವಾದಿಸುತ್ತಾರೆ. ಅವರ ಇಂತಹ ವಾದಗಳು ಹಲವಿವೆ. ಈ ಪುಸ್ತಕ ಪ್ರಕಟವಾದಾಗ ಪಾರಂಪರಿಕ ನೆಲೆಯ ಭೋದನೆ ಮತ್ತು ಅಧ್ಯಯನಗಳಲ್ಲಿ ತೊಡಗಿದವರು ಮೊದಲನೆಯದಾಗಿ ಡಾ. ಭಟ್ ಅವರ ವಾದವನ್ನು ಒಪ್ಪುವುದು ಸಾಧ್ಯವಿಲ್ಲ. ಒಂದು ವೇಳೆ ಹಾಗೆ ಆಧುನಿಕ ಕನ್ನಡ ಸಂದರ್ಭದಲ್ಲಿ ಒಪ್ಪಿದರೂ ಹಳೆಗನ್ನಡದ ಅಧ್ಯಯನಕ್ಕೆ ಹಳಗನ್ನಡ ವ್ಯಾಕರಣಗಳೇ ಅಗತ್ಯ ಎಂದು ವಾದಿಸಿದರು. ಈ ವಾದವನ್ನು ಗಮನಿಸಿದ ಡಾ. ಭಟ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹಳೆಗನ್ನಡ ವ್ಯಾಕರಣಗಳು ಕೂಡ ಹಳೆಗನ್ನಡದ ನಿಜ ಲಕ್ಷಣಗಳನ್ನು ವಿವರಿಸುವುದಿಲ್ಲ ಎಂದು ತೋರಿಸುವ ಗ್ರಂಥ 'ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹವುದು?' (೨೦೦೫) ಅನ್ನು ಪ್ರಕಟಿಸಿದರು'[೨೦]. ಅಲ್ಲದೆ ಡಾ. ಭಟ್ ಅವರು ತಮ್ಮ ಈ ಬಗೆಯ ಚಿಂತನೆಯನ್ನು ಮುಂದುವರೆಸಿದ್ದಾರೆ. ಪಾರಂಪರಿಕರಿಂದ ಕೇಳಿಬರುವ ಪ್ರಶ್ನೆಗಳಿಗೆ ಉತ್ತರವನ್ನು ಮತ್ತು ತಮ್ಮ ಕನ್ನಡ ಚಿಂತನೆಯನ್ನು ಕನ್ನಡ ಭಾಷೆಯ ಒಳಗಿನಿಂದಲೇ ಕಂಡುಕೊಳ್ಳುತ್ತಿದ್ದಾರೆ. ಕನ್ನಡ ಬರವಣಿಗೆಯನ್ನು ಸಂಸ್ಕೃತ ಭಾಷೆ ಹಲವು ರೀತಿಯಲ್ಲಿ ನಿಯಂತ್ರಿಸುತ್ತಿರುವುದನ್ನು, ಈ ನಿಯಂತ್ರಣ ತಪ್ಪಬೇಕಾದರೆ ಮಾತು ಮತ್ತು ಬರಹದ ನಡುವಿನ ಅಂತರ ತಪ್ಪಬೇಕು ಎಂತಲೂ ಡಾ. ಭಟ್ ಅವರ ಈ ಮಾರ್ಗದಲ್ಲಿ ಇತ್ತೀಚೆಗೆ ೨೦೧೦–೧೧ರಲ್ಲಿ ಕನ್ನಡ ಸೊಲ್ಲರಿಮೆ – ೧, ೨ ಮತ್ತು ಮಾತು ಮತ್ತು ಬರಹದ ನಡುವಿನ ಗೊಂದಲ ಎಂಬ ಪುಸ್ತಕಗಳನ್ನು ಪ್ರಕಟಿಸಿದ್ದಾರೆ.

ಕನ್ನಡಕ್ಕೆ ಸಂಸ್ಕೃತವೇ ಮೂಲ. ಸಂಸ್ಕೃತದಿಂದ ವಿಕೃತಗೊಂಡು ಬೆಳೆದ ಭಾಷೆ ಕನ್ನಡವೆಂದೇ ಪಾರಂಪರಿಕರು ನೋಡುತ್ತಾ ಬಂದಿದ್ದಾರೆ. ಈಗಲೂ ಹಾಗೆಯೇ ನಂಬುವ ಒಂದು ವರ್ಗ ಇದೆ. ಆದರೆ ಕಾಲ್ಡ್‌ವೆಲ್‌ನಂತಹ ಹಲವು ಚಿಂತಕರು ಅಂತಹ ನಂಬುಗೆಯನ್ನು ಅಲುಗಾಡಿಸಿದರು. ಇದನ್ನು ಇನ್ನೂ ಸ್ಪಷ್ಟಗೊಳಿಸಿದವರು ಡಾ. ಡಿ. ಎನ್. ಶಂಕರ ಭಟ್ ಅವರು ಕನ್ನಡ ಮತ್ತು ಸಂಸ್ಕೃತ ಭಾಷೆಗಳ ನಡುವೆ ಕಾಣಿಸುವ ವ್ಯತ್ಯಾಸಗಳನ್ನೆಲ್ಲ ಕನ್ನಡದ ಇತಿಹಾಸದಲ್ಲಿ ನಡೆದ ಬದಲಾವಣೆಯ ಫಲಗಳನ್ನು ಮೊದಲು ತೋರಿಸಬೇಕು ಆ ಮೂಲಕ ಅವುಗಳನ್ನು ವಿಶ್ಲೇಷಿಸುತ್ತ ಹೋಗುವುದು ಎನ್ನುತ್ತಾರೆ. ಅಲ್ಲದೆ ಕನ್ನಡದಲ್ಲಿ ಸಂಸ್ಕೃತದ ಪದಗಳು ಕಾಣಿಸಿವೆ ನಿಜ. ಆದರೆ ಅವುಗಳೆಲ್ಲ ಒಂದು, ಒಂದುವರೆ ಸಾವಿರ ವರ್ಷಗಳ ಈಚೆಗೆ ಕನ್ನಡದಲ್ಲಿ ಎರವಲಾಗಿ ಬಂದವುಗಳಾಗಿವೆ. ಇದಕ್ಕಿಂತಲೂ ಹಿಂದೆ ಕನ್ನಡ ತನ್ನದೇ ಆದ ಪದಗಳನ್ನು ಬಳಸುತ್ತಿದ್ದಿರಬಹುದು ಎನ್ನುತ್ತಾರೆ. ಅಲ್ಲದೆ ಹಾಗೆ ಹೆಚ್ಚು ಸಂಸ್ಕೃತ

ಪದಗಳು ಕಾಣಿಸಿಕೊಳ್ಳುತ್ತಿರುವುದು ಬರಹದಲ್ಲಿ, ಮಾತಿನಲ್ಲಿ ಅಲ್ಲ. ಯಾವಾಗಲೂ ಒಂದು ಭಾಷೆಯ ಜೀವಂತಿಕೆ ಮತ್ತು ಸಮೃದ್ಧವಾದ ಮುನ್ನಡೆ ಎನ್ನುವುದು ಆಯಾ ಭಾಷಿಗರ ಮಾತನ್ನು ಅವಲಂಬಿಸಿರುತ್ತದೆ.

ಕನ್ನಡ ಭಾಷೆಯ ರಚನೆ ಮತ್ತು ಅಧ್ಯಯನಕ್ಕೆ ಮೂಲಭೂತವಾಗಿ ಕೇಳಿಕೊಳ್ಳಬೇಕಾದ ಪ್ರಶ್ನೆಗಳನ್ನಿಟ್ಟುಕೊಂಡು ಡಾ. ಡಿ. ಎನ್. ಶಂಕರ ಭಟ್ ಅವರು ಮುಂದುವರೆದಿದ್ದಾರೆ. ಆ ಹಿನ್ನೆಲೆಯಲ್ಲಿ ಪಾರಂಪರಿಕ ಭಾಷಾ ಚಿಂತಕರ ಪ್ರತಿಕ್ರಿಯೆಗಳನ್ನು ನೋಡಬಹುದಾಗಿದೆ. ಡಾ. ಎಂ. ಚಿದಾನಂದ ಮೂರ್ತಿ, ಡಾ. ಕೆ. ವಿ. ತಿರುಮಲೇಶ್, ಡಾ. ಆರ್. ಗಣೇಶ್, ಕೆ. ಎಂ. ರಾಘವ ನಂಬಿಯಾರ್ ಮುಂತಾದ ಒಂದು ವರ್ಗದ ಮೂಲದಿಂದ ಬಂದವರೆ ಎಲ್ಲರ ಕನ್ನಡವಾಗುವ ಚಿಂತನೆಯನ್ನು ವಿರೋಧಿಸುತ್ತಿದ್ದಾರೆ. ಆದರೆ ಎಲ್ಲರ ಕನ್ನಡದ ಬಗ್ಗೆ ವರ್ಗಗಳನ್ನು ಮೀರಿದ ಕನ್ನಡದ ಮನಸ್ಸುಗಳು ಸ್ಪಂದಿಸುತ್ತಿವೆ. ಡಾ. ಲಿಂಗದೇವರು ಹಳೆಮನೆ, ಡಾ. ಕೆ. ವಿ. ನಾರಾಯಣ, ಡಾ. ಎಚ್. ಎಸ್. ರಾಘವೇಂದ್ರ ರಾವ್, ಡಾ. ಚಂದ್ರಶೇಖರ ಕಂಬಾರ, ಬಾ. ರ. ಕಿರಣ, ಎಂ. ಎ. ಹೆಗಡೆ, ಡಾ. ಬಸವರಾಜ್ ಕೋಡುಗುಂಟಿ, ಡಾ. ಮೇಟಿ ಮಲ್ಲಿಕಾರ್ಜುನ, ಡಾ. ಪಾಂಡುರಂಗ ಬಾಬು, ಡಾ. ಪಿ. ಮಹದೇವಯ್ಯ, ಡಾ. ಸಾಂಬ ಮೂರ್ತಿ, ಡಾ. ಅಶೋಕಕುಮಾರ ರಂಜೇರೆ ಮುಂತಾದವರು.

ವಿರೋಧಗಳನ್ನು ವ್ಯಕ್ತವಾದ ಅಭಿಪ್ರಾಯಗಳನ್ನು ರಾಘವ ನಂಬಿಯಾರ್ ಅವರು ಸೂಚಿಸುವ ಅಂಶಗಳಲ್ಲಿ ಕಾಣಬಹುದಾಗಿದೆ.

೧. ಅಕ್ಷರಗಳು ಹೆಚ್ಚಾದವು, ಕಲಿಯಲು ಕಷ್ಟ – ಇವು ವಿದ್ಯಾಭ್ಯಾಸದ ಪ್ರಶ್ನೆಗಳಲ್ಲ. ಅದರಲ್ಲಿ ತೊಡಗಿಕೊಂಡು ವಿಫಲರಾದ ಶಿಕ್ಷಕರ ಸಮಸ್ಯೆಗಳು. ಇದು ರಳಕುಳ ಸಹಿತ ಎಲ್ಲ ಅಕ್ಷರಗಳನ್ನು ಸರಿಯಾಗಿ ಬರೆಯಲು ಮತ್ತು ಉಚ್ಚರಿಸಲು ಕಲಿಸಿದ ಶಿಕ್ಷಕರನ್ನು ಕಂಡಿದ್ದೇವೆ.

೨. ಕಲಿಯದವರಿಗಾದರೂ, ಸೂಚಿಸಿದ ಸುಧಾರಣೆಗಳು ಅನವಶ್ಯ. ಅವರು ಹೇಗೂ ಮನಬಂದಂತೆ ಮಾತಾಡಿ ಅಥವಾ ಬರೆದು ತಮ್ಮದೇ ಸಾಹಿತ್ಯ ನಿರ್ಮಿಸುತ್ತಾರೆ. ಅಂತಹವರು ವಿದ್ಯಾವಂತರನ್ನು ಕೆಲಸಕ್ಕಿಟ್ಟುಕೊಂಡು ತಮ್ಮ ತೀರ್ಮಾನಗಳಿಗೆ ವಿಧೇಯರನ್ನಾಗಿ ಮಾಡುವುದು ಇದೆ, ಇರಲಿ.

೩. ನಮ್ಮ ಎಳೆಯ ತಲೆಮಾರು ಯಾವ ಅಕ್ಷರವನ್ನೂ ಉಚ್ಚರಿಸಬಲ್ಲಷ್ಟು ಮತ್ತು ಬರೆಯಬಲ್ಲಷ್ಟು ಶ್ರವಣ ಶಕ್ತಿಯನ್ನು ದೃಷ್ಟಿ ಶಕ್ತಿಯನ್ನೂ, ಕೈಯ ಕಸುವನ್ನು

ಹೊಂದಿರುವುದರಲ್ಲಿ ಯಾವುದೇ ಸಂಶಯ ಬೇಡ. ಅವರಿಗೆ ಚೆನ್ನಾಗಿ ಕಲಿಸುವವರು ಬೇಕಾಗಿದ್ದಾರೆ.

೪. ಕಲಿಸಿಕೊಡುವಲ್ಲಿ ವ್ಯವಧಾನ, ಪ್ರಾಮಾಣಿಕತೆ, ವಿಶ್ವಾಸ ಮತ್ತು ಆಯೋಜನೆ ಇವುಗಳ ಕೊರತೆಯೇ ಸಧ್ಯದ ಸಮಸ್ಯೆ. ಇದು ಪಠ್ಯ ಪುಸ್ತಕ ನಿರ್ಮಾಪಕರು, ಶಿಕ್ಷಕರು ಮತ್ತು ಶಾಲಾ ಪಾಠ ಸಂಯೋಜಕರ ಪಾಲಿಗಿರುವ ಸವಾಲು.

೫. ಭಾಷಾ ಕಲಿಕೆ ಪರಿಪೂರ್ಣವಾಗಬೇಕಾದರೆ ಕನ್ನಡದ ಪ್ರಾಚೀನ ಕೃತಿಗಳ ಸರಾಗ ಓದು ಸಾದ್ಯವಾಗಬೇಕು. ಬಳಕೆ ತೊರೆದಿರುವ ರಳಕುಳ ಅಕ್ಷರಗಳನ್ನು ಮಾಮೂಲು ಓದಿನಲ್ಲಿ ಅಳವಡಿಸಬೇಕು. ಇದನ್ನು ಕನಿಷ್ಠ ಪಕ್ಷ ಕನ್ನಡ ಎಂ.ಎ. ಕಲಿಯುತ್ತಿರುವ ವಿದ್ಯಾರ್ಥಿಗಳಾದರೂ ಪ್ರಾಮಾಣಿಕವಾಗಿ ಮಾಡಬೇಕು.

೬. ಅಕ್ಷರ ವಿನ್ಯಾಸದಲ್ಲಿ ಪದೇ ಪದೇ ಬದಲಾವಣೆ ತರುವುದು ಒಳಿತಲ್ಲ. ಹಾಗಾಗಿ ಈ ಕುರಿತ ಸಲಹೆಗಳು ನಿರರ್ಥಕ.

೭. ಭಾಷಾಶಾಸ್ತ್ರದ ಹೆಸರು ಹೇಳಿ ತಮ್ಮ ಅಯೋಗ್ಯತೆ ಸಕಾರಣವೆಂದು ವಾದಿಸುವ ಜನರಿಂದ ರಾಜ್ಯದ ಎಳೆಯ ತಲೆಮಾರನ್ನು ಪಾರುಮಾಡುವುದು ಹೇಗೆ, ಸದ್ಯದ ನೀತಿ, ನಿರ್ಮಾಪಕರ ಕಾಳಜಿಯಾಗಬೇಕು.

೮. ಅಕ್ಷರ ಕೈಗೆ ಬರಬೇಕಾಗಿಲ್ಲ. ಕೀಲಿ ಹೊತ್ತಿದರೆ ಬೇಕಾದ ಬರಹ ಸುಂದರವಾಗಿ ಮೂಡುವುದು ಮಾತ್ರವಲ್ಲ ತಾನೇ ಗಟ್ಟಿಯಾಗಿ ಉಚ್ಚರಿಸುವ ಕಂಪ್ಯೂಟರುಗಳ ಕಾಲಬಂದಿದೆ. ಈ ಹೊತ್ತಿಗೂ ಅಕ್ಷರ ಸಂಖ್ಯೆ ಹೆಚ್ಚಾಯಿತೆಂಬ ಕೂಗು ಕೇವಲ ದೌರ್ಬಲ್ಯದ ಲಕ್ಷಣ ಎನ್ನಬೇಕಾಗಿದೆ.

೯. ರಾಜ್ಯದ ಅಭಿವೃದ್ಧಿಯಲ್ಲಿ ಸರಿಯಾಗಿ ಓದುವುದು, ಬರೆಯುವುದು ಮತ್ತು ಮಾತನಾಡುವುದು ಕೂಡ ಒಳಗೊಂಡಿರಬೇಕು.

೧೦. ಲಿಪಿಯಲ್ಲಿ ಬದಲಾವಣೆ ಅವಶ್ಯವಾದರೆ ಅದು 'ರ್ಕ' ಎನ್ನುವಲ್ಲಿನ ರೇಫವನ್ನು ಮುಂದಕ್ಕೆ ತರುವುದು, ಒತ್ತಕ್ಷರಗಳಿಗೆ ಸ್ವರ ಹಚ್ಚುವ ಸ್ಥಾನವನ್ನು ಕೊನೆಯ ವ್ಯಂಜನಕ್ಕೆ ತರುವುದು ಇತ್ಯಾದಿ ನಿಟ್ಟಿನಲ್ಲಿ ಯೋಚಿಸಬಹುದು. ಉದಾಹರಣೆಗೆ : ಅರ್ಕ (ಅರ್ಕ), ನಿರ್ದೇಶನ ಇತ್ಯಾದಿ ಹಾಗೂ ಅಚ್ಚು(ಅಚ್ಚು), ತಕ್ಕ (ತಕ್ಕ) ಇತ್ಯಾದಿ[೨೧].

ಹೀಗೆ ಬೆಳೆದ ಪಟ್ಟಿಯ ಸುತ್ತವೇ ಸುತ್ತುತ್ತಿದೆ. ಪಾರಂಪರಿಕ ಅಥವಾ ಶಾಸ್ತ್ರೀಯ ಭಾಷಾಶಾಸ್ತ್ರಕಾರರ ಚಿಂತನೆಗಳು ಅದು ಅಲ್ಲದೆ ಈ ಚಿಂತನೆಗಳು ವಿದ್ವಾಂಸರಿಗೆ ಸವಾಲು, ಇದು ಈಡೇರಿದರೆ 'ಶಾಸ್ತ್ರೀಯ ಭಾಷೆ'ಯ ಸ್ಥಾನ ಮಾನಕ್ಕಾಗಿ ವಕಾಲತ್ತು ಮಾಡುವ ಅಗತ್ಯವೇ ಬೀಳುವುದಿಲ್ಲ ಎಂದು ಹೇಳುತ್ತಾರೆ. ನಿಜಕ್ಕೂ ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ಮಂಡಿಸುತ್ತಿರುವ ಭಾಷೆಯ ಚಿಂತನೆಗಳು ಸಾಮಾಜಿಕ ಪ್ರಜ್ಞೆಯೊಂದಿಗೆ ಯೋಚಿಸಿದರೆ ಈ ಮೇಲಿನ ಅಂಶಗಳು ಎಷ್ಟು ಬಾಲಿಶ ಮತ್ತು ಅಸಂಬದ್ಧ ಎಂಬುದು ತಿಳಿಯುತ್ತದೆ. ಪಾರಂಪರಿಕ ಚಿಂತಕರಿಗೆ 'ರ್ಕ'ನ್ನು 'ಅರ್‌ಕ'ಎಂದು ಬರೆಯುವುದಕ್ಕೂ 'ಅರ್ಕ' ಎಂದು ಬರೆಯುವುದಕ್ಕೂ ವ್ಯತ್ಯಾಸಗಳೇ ಕಾಣುವುದಿಲ್ಲ. ಯಾಕೆಂದರೆ ಮಾತು ಬಲ್ಲ ಈ ಜಗತ್ತಿಗೆ ಅವರು ಕಿವಿ ಮತ್ತು ಮನಸ್ಸನ್ನು ಮುಚ್ಚಿಕೊಂಡಂತಿದೆ. ಕನ್ನಡ ಭಾಷೆಯು ಮಾತಿನ ಮೂಲಕ ಇವತ್ತಿಗೂ ಹೆಚ್ಚು ವೈವಿಧ್ಯ ಮತ್ತು ಜೀವಂತಿಕೆಯನ್ನು ಹೊಂದಿರುವ ಭಾಷೆ. ಇದು ಕಾಣದೆ ಇರುವ ಇವರ ಆಲೋಚನೆಯಿಂದ ಮತ್ತೆ ಇದು 'ಬಾಂಡಲಿಯಿಂದ ಬೆಂಕಿಗೆ ಬಿದ್ದಂತಾಗುತ್ತದೆ' ಸಂಯುಕ್ತಾಕ್ಷರಗಳೂ ಇವರಿಗೆ ದೋಷವಾಗಿ ಕಾಣುತ್ತಿರುವುದೂ ದುರಂತ.

"ಡಿ.ಎನ್.ಶಂಕರ ಭಟ್ಟರ ಬರಹಗಳು ಓದುಗರಿಗೆಹೊಸ ರೀತಿಯ ಸಂವೇದನೆಯನ್ನು ಒದಗಿಸಬಲ್ಲವು. ಬಿಳಿಗಿರಿಯವರ ಗರಡಿಯಲ್ಲಿಯೇ ಪ್ರಾರಂಭದಲ್ಲಿ ತಯಾರಾದ ಶಂಕರ ಭಟ್ಟರ ದೃಷ್ಟಿಕೋನ ಇತ್ತೀಚೆಗೆ ಬದಲಾಗಿದೆ. ಬಿಳಿಗಿರಿಯವರು ಮೂಲತಃ ಕನ್ನಡ ಎಂ. ಎ. ಮಾಡಿದವರಾದ್ದರಿಂದ ಅವರ ಭಾಷಾವಿಜ್ಞಾನದ ಬರವಣಿಗೆಯಲ್ಲಿ ಕನ್ನಡ ವ್ಯಾಕರಣದ ಜಾಯಮಾನ ತಳಹದಿಯಾಗಿರುತ್ತಿತ್ತು. ಆದರೆ ಕನ್ನಡದ ಪರಂಪರಾಗತ ವ್ಯಾಕರಣಗಳ ರೀತಿಯನ್ನು ಪ್ರಶ್ನಿಸಹೊರಟ ಶಂಕರ ಭಟ್ಟರು ಇತ್ತೀಚಿನ ಬರವಣಿಗೆಯಲ್ಲಿ ಹೊಸವ್ಯಾಕರಣದ ಬಗ್ಗೆ ಸರಿಯಾದ ತಿಳುವಳಿಕೆ ಕೊಡದೆ ಪರಂಪರೆಯನ್ನು ಪ್ರಶ್ನಿಸುವ ಅರೆಬೆಂದ ವಿಚಾರಗಳು ಕಂಡುಬರುತ್ತವೆ. ಇತ್ತೀಚೆ ಕನ್ನಡದಲ್ಲಿ ಅವರು ಬರೆದ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' 'ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದ್ದು?' ಮೊದಲಾದ ಪುಸ್ತಕಗಳಲ್ಲಿ ಅವರ ಉತ್ಸಾಹ ಮಾತ್ರ ಕಾಣುತ್ತದೆಯೇ ಹೊರತು ಅವರ ಅಭಿಪ್ರಾಯ ಒಪ್ಪಿಗೆಯಾಗುವುದಿಲ್ಲ. ಇದಕ್ಕೆ ಮುಖ್ಯಕಾರಣ ಅವರು ಪ್ರತಿಪಾದಿಸಬೇಕೆಂದಿರುವ ಹೊಸ ವ್ಯಾಕರಣದ ಶಾಸ್ತ್ರೀಯ ರೂಪ ರೇಷಗಳು ಸ್ಪಷ್ಟವಾಗಿ ಗೋಚರವಾಗದೆ ಇರುವುದು. ಅಲ್ಲದೆ ಪಾರಿಭಾಷಿಕ ಪದರಚನೆಯಲ್ಲಿ ಸಂದಿಗ್ಧತೆ, ಅವ್ಯಾಕೃತ ರೂಪ ಸೃಷ್ಟಿ, ವ್ಯಾಖ್ಯೆಯಿಲ್ಲದ ಪದಸಂಯೋಜನೆಗಳು ಮುಖ್ಯಕಾರಣವೆನ್ನಬಹುದು. ಉದಾಹರಣೆಗೆ ಅವರ

ಬರವಣಿಗೆಯಿಂದ ಎತ್ತಿಕೊಂಡ ಕೆಳಗಿನ ಉದಾಹರಣೆಯನ್ನು ಗಮನಿಸಿ. 'ಪದವೊಂದರ ಅಂಗಗಳಾಗಿ ಎರಡು ಬೇರೆ ಬೇರೆ ಪದಗಳು ಬಂದಿರಬಹುದು (ಉದಾ: ಚಿಕ್ಕ+ಅಮ್ಮ=ಚಿಕ್ಕಮ್ಮ), ಇಲ್ಲವೇ ಒಂದು ಪದ ಮತ್ತು ಒಂದು ಪ್ರತ್ಯಯ ಬಂದಿರಬಹುದು (ಉದಾ: ಎಚ್ಚರ+ಇಕೆ=ಎಚ್ಚರಿಕೆ) ಎಂಬುದನ್ನು ಮೇಲೆಯೇ ನೋಡಿರುವೆವು. ಇದಲ್ಲದೆ, ಪದವೊಂದರ ಅಂಗಗಳಾಗಿ ಎರಡು ಬೇರೆ ಬೇರೆ ಪದಗಳು ಮಾತ್ರವಲ್ಲದೆ ಮತ್ತೂ ಒಂದು ಪ್ರತ್ಯಯ ಬಂದಿರಲು ಸಾಧ್ಯವಿದೆ. (ಉದಾಹರಣೆಗೆ ಹಣೆ+ಕಣ್ಣು =ಹಣೆಗಣ್ಣು) ಆದರೆ, ಎರಡಕ್ಕಿಂತ ಜಾಸ್ತಿ ಪ್ರತ್ಯಯಗಳು ಪದವೊಂದರ ಅಂಗವಾಗಿ ಬರುವುದು ಕನ್ನಡದ ಮಟ್ಟಿಗೆ ಸ್ವಲ್ಪ ಅಪರೂಪ ಎಂದೇ ಹೇಳಬಹುದು. ಈ ಉದಾಹರಣೆಯಲ್ಲಿ 'ಪದ' ಎಂಬ ಶಬ್ದವನ್ನು (ತಮ್ಮದೇ ಆಗಲಿ) ವ್ಯಾಖ್ಯೆ ಇಲ್ಲದೆ ಬಳಸಲಾಗಿದೆ. ಪದದ ಬಗೆಗೆ ಈವರೆಗೆ ಇದ್ದ ತಿಳುವಳಿಕೆಯನ್ನು ವಾಕ್ಯವೃಂದ ಸ್ಪಷ್ಟೀಕರಿಸುತ್ತದೆ.

ಪ್ರಾತೀಪದಿಕಕ್ಕೆ (ಅಂದರೆ ನಾಮ ಅಥವಾ ಧಾತುವಿಗೆ) ಪ್ರತ್ಯಯ ಸೇರಿ ಪದವಾಗುತ್ತದೆ. ಪ್ರತ್ಯಯವು ಸುಪ್ (ಅಂದರೆ ನಾಮ ವಿಭಕ್ತಿ ಪ್ರತ್ಯಯ) ಆಗಿರಬಹುದು, ತಿಙ್ (ಅಂದರೆ ಕ್ರೀಯಾವಿಭಕ್ತಿ ಪ್ರತ್ಯಯ) ಆಗಿರಬಹುದು. (ನೋಡಿ : ಭಟ್ಟಾಕಳಂಕನ ಸುಪ್ತಿಙನ್ತಂ ಪದಂ, ಶಬ್ದಾನುಶಾಸನ ಸೂ ೧೮) ಅಂದರೆ ಯಾವುದೇ Inflexional suffix ಪ್ರಾತಿಪದಿಕಕ್ಕೆ ಸೇರಬಹುದು. ಪ್ರಾತಿಪದಿಕದಲ್ಲಿ ಮೂಲ ರೂಪದೊಡನೆ ಕೃತ್ ಅಥವಾ ತದ್ಧಿತ ಪ್ರತ್ಯಯವೂ (Derivational suffix) ಸೇರಿರಬಹುದು ಅಥವಾ ಪ್ರಾತಿಪದಿಕವು ಸಮಸ್ತ ಪದ (Compound) ಇರಬಹುದು ಇದು ನಮ್ಮ ವೈಯಾಕರಣಿಗಳು ಕೊಟ್ಟ ತಿಳುವಳಿಕೆ. ಆದರೆ ಭಟ್ಟರು Derivational suffix ಗಳನ್ನು ಪದಪ್ರತ್ಯಯ ಎಂದೂ Inflexional suffix ಗಳನ್ನು ಪದರೂಪ ಪ್ರತ್ಯಯ ಎಂದೂ ಕರೆದಿದ್ದಾರೆ. (ಕನ್ನಡ ಪದಗಳ ಒಳರಚನೆ ಪುಟ–೨೪) ಸಮರ್ಥವಾದ ಪರಿಭಾಷೆ ವ್ಯಾಕರಣದಲ್ಲಿ ಮೊದಲೇ ಇರುವಾಗ ಹೀಗೆ ಹೊಸ ಪರಿಭಾಷೆಯನ್ನು ಸೃಷ್ಟಿಸಿ ಸಂಧಿಗ್ದತೆಯನ್ನುಂಟು ಮಾಡುವ ಅನಿವಾರ್ಯತೆ ಏನಿತ್ತು? 'ಪಾರಿಭಾಷಿಕ ಪದಗಳು ಬೇಕಿದ್ದಲ್ಲಿ ಅವನ್ನು ಹೊಸದಾಗಿ ಸೃಷ್ಟಿಸಿಕೊಳ್ಳದೆ ಬೇರೆ ದಾರಿಯೇ ಇಲ್ಲ' ಎಂದು ಭಟ್ಟರು ಹೇಳುವಾಗ 'ಯಾಕೆ ಬೇಕಾಯಿತು' ಎಂಬ ಪ್ರಶ್ನೆಗೆ ಸಮರ್ಪಕವಾದ ಉತ್ತರ ಸಿಗುವವರೆಗೆ ಅವರ ವಾದವನ್ನು ಒಪ್ಪುವುದು ಕಷ್ಟವಾಗುತ್ತದೆ. ಬಳಕೆಯಲ್ಲಿದ್ದ್ ಪರಿಭಾಷೆಯ ಸೀಮಿತತೆಯನ್ನು ಅಥವಾ ಅಶಾಸ್ತ್ರೀಯತೆಯನ್ನು ಎತ್ತಿ ತೋರಿಸಿದಾಗ ಮಾತ್ರ ಹೊಸ ಪರಿಭಾಷೆಯನ್ನು ಅಗತ್ಯ ಮನದಟ್ಟಾಗುತ್ತದೆ.

ಭಟ್ಟರು 'ಎರಡಕ್ಕಿಂತ ಜಾಸ್ತಿ ಪ್ರತ್ಯಯಗಳು ಪದವೊಂದರ ಅಂಗಗಳಾಗಿ ಬರುವುದು ಕನ್ನಡದ ಮಟ್ಟಿಗೆ ಸ್ವಲ್ಪ ಅಪರೂಪ ಎಂದೇ ಹೇಳಬಹುದು' ಎನ್ನುತ್ತಾರೆ. ಆದರೆ ಒಂದು ಪ್ರತ್ಯಯದಿಂದ ಅಭೀಪ್ಸಿತ ಅರ್ಥಾಭಿವ್ಯಕ್ತಿ ಆಗಿದ್ದರೆ ಒಂದಕ್ಕಿಂತ ಹೆಚ್ಚು ಪ್ರತ್ಯಯಗಳನ್ನು ಬಳಸುವ ರೂಢಿ ಕನ್ನಡದಲ್ಲದೆ. ಉದಾ: 'ಮನೆಯೊಳಗೆ' ಎಂಬಪದದಲ್ಲಿ 'ಒಳಗೆ' ಪ್ರತ್ಯಯ ಅಧಿಕರಣ ಸೂಚಕವಾಗಿದೆ. ಅಂದರೆ ಕ್ರಿಯೆ ಎಲ್ಲಿ ನಡೆಯುತ್ತದೆ. ಎಂಬ ಸ್ಥಾನವನ್ನು ಸೂಚಿಸುತ್ತದೆ. ಆದರೆ 'ಮನೆಯೊಳಕ್ಕೆ' ಎಂಬುದಕ್ಕೆ 'ಹೊರಗಿನಿಂದ ಒಳಗೆ' 'Into' ಎಂಬ ಅರ್ಥವಿದೆ. ಇಲ್ಲಿ ಮನೆ+ಒಳಗೆ+ಕ್ಕೆ ಎಂಬ ರೂಪದಲ್ಲಿ ಸಪ್ತಮೀ ಮತ್ತು ಚತುರ್ಥೀ ಎರಡು ವಿಭಕ್ತಿ ಪ್ರತ್ಯಯಗಳಿವೆ. ಅದೇ ಪ್ರಕಾರ 'ಹೊಲದೊಳಗಿಂದ' (ಹೊಲ+ದ+ಒಳಗೆ+ಇಂದ) ಎಂಬರೂಪಕ್ಕೆ 'ಹೊಲದ ಮುಖಾಂತರ' Through The Field ಎಂಬರ್ಥವಿದೆ. ಇಲ್ಲಿ ಷಷ್ಠೀ, ಸಪ್ತಮಿ ಮತ್ತ ಪಂಚಮೀ ವಿಭಕ್ತಗಳ ಪ್ರಯೋಗವಿದೆ. ಅದೇ ಪ್ರಕಾರ 'ಗೌಡರಲ್ಲಿಗೆ' ಮೊದಲಾದ ಪ್ರಯೋಗಗಳಲ್ಲಿ ಎರಡು (ಅಥವಾ ಮೂರು ಎಂದೂ ಅನ್ನಬಹುದು) ಪ್ರತ್ಯಯಗಳ ಪ್ರಯೋಗವಿರುವುದನ್ನಿ ಅಕ್ಷಿಸಬೇಕು. ಈವರೆಗಿನ ವ್ಯಾಕರಣಗಳು ವಿವರಿಸದಿದ್ದ ಇಂಥ ಪ್ರಯೋಗಗಳು ಹೊಸ ವ್ಯಾಕರಣದಲ್ಲಿ ಸೇರಿಕೊಳ್ಳಬೇಕು[೨೨]". ಈ ಮೇಲಿನ ಮಾತುಗಳಲ್ಲಿ ಬಿ.ಬಿ.ರಾಜಪುರೋಹಿತ ಅವರು ಸಹ ಪರಂಪರೆಯ ಹೆದ್ದಾರಿಯನ್ನು ಬಿಟ್ಟು ಹೊಸ ದಾರಿ ಹೊಸ ನೆಲೆ ಅಥವಾ ಯಾವ ಭಾಷೆಯನ್ನು ಕುರಿತು ವ್ಯಾಕರಣವನ್ನು ರಚಿಸುತ್ತೇವೋ ಆಭಾಷೆಯ ಒಳಗಿನಿಂದಲೇ ನಿಯಮಗಳ ವೈವಿಧ್ಯವನ್ನು ಕಂಡುಕೊಳ್ಳುವುದರ ಬಗ್ಗೆ ಅಸಮಧಾನವಿದೆ. ಅವರು ಬಳಸುವ ಕನ್ನಡ ವ್ಯಾಕರಣದ ಜಾಯಮಾನ ಮತ್ತು ಪರಂಪರೆ ಎನ್ನುವ ಅವರ ಮಾತುಗಳೇ ಇದನ್ನು ಸ್ಪಷ್ಟಪಡಿಸುತ್ತವೆ. ಅವರ ಪ್ರಕಾರ ಪರಂರೆಯನ್ನು ಪ್ರಶ್ನಿಸಕೂಡದು. ಅವರ ಈ ಟಿಪ್ಪಣಿಯಲ್ಲ ಪ್ರಸ್ತಾಪಿತವಾಗಿವು ಭಟ್ಟಾಕಳಂಕ, ಕೇಶಿರಾಜ ಮುಂತಾದವರು ಹೇಳಿರುವುದು ಕನ್ನಡ ವ್ಯಾಕರಣಕ್ಕೆ ಅಂತಮ ಎನ್ನವಂತಿದೆ. ಹಾಗೆಯೇ ಪರಿಭಾಷೆಗಳನ್ನು ಬಳಸುವುದು ಮತ್ತು ಡಿ. ಎನ್. ಶಂಕರ ಭಟ್ ಅವರು ಆ ಕುರಿತು ಪರಂಪರೆ ಮತ್ತು ಸಂಸ್ಕೃತಿಯ ಅಂತಸ್ಥವಾದ ಜಗತ್ತಿನಿಂದಲೇ ಕಂಡುಕೊಳ್ಳುತ್ತಿದ್ದಾರೆಂಬುದೇ ಅವರಿಗೆ ಮನವರಿಕೆಯಾಗುತ್ತಿಲ್ಲ. ಉದಾ: ಈ-ಮೇಲ್ ಅನ್ನು ಮಿಂಚಂಚೆ (ಕನ್ನಡ ಭಾಷಾಧ್ಯಯನದ ಸಂದರ್ಭದಲ್ಲಿ ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ಬಳಸುತ್ತಿರುವ ಹೊಸ ಪರಿಭಾಷೆಗಳ ಪಟ್ಟಿಯನ್ನು ಈ ಅಧ್ಯಾಯದ ಕೊನೆಯಲ್ಲಿ, ಅಡಿ ಟಿಪ್ಪಣಿಯ ನಂತರ ಕೊಟ್ಟಿರುವೆ) ಎಂದು, ವ್ಯಾಕರಣವನ್ನು ಪರಂಪರೆಯ ಪಾಚಿಯಲ್ಲಿ ಮುಚ್ಚಿದ್ದನ್ನು ಹೊರೆತೆಗೆದು

ಸೊಲ್ಲರಿಮೆ ಎಂದು ಬಳಸುತ್ತಿದ್ದಾರೆ. ಹಾಗಾಗಿ ಕನ್ನಡ ವ್ಯಾಕರಣದ ಪರಂಪರೆ ಮತ್ತು ಪ್ರಸ್ತುತ ಕಾಣುವ ನಮ್ಮ ದೃಷ್ಟಿ ಮತ್ತು ವಿವೇಚನೆಯ ನೆಲೆಯಲ್ಲಿ ತುಸು ತಾಳ್ಮೆ, ವಿವೇಚನೆಗೆ ಅವಕಾಶಕೊಟ್ಟು ಯೋಚಿಸಬೇಕೆದೆ. ಪರಂಪರೆ ಎಂದ ತಕ್ಷಣ ಎಲ್ಲವೂ ಸುಂದರವಾಗಿರಲಿಲ್ಲ. ವೈವಿಧ್ಯತೆ ಮತ್ತು ಜಾತಿ, ಧರ್ಮ ಮೇಲು ಕೀಳು ಮುಂತಾದ ಪರಂಪರೆಯ ರೋಗಗಳನ್ನು ಈಗಲಾದರು ತೊಡೆದಾಕಲು ಸಾಧ್ಯವಿಲ್ಲವೆನ್ನುವುದಾದರೆ ಈ ಅಕ್ಷರ ಜಗತ್ತಿನ ಬಗ್ಗೆ ನಂಬಿಕೆಯೇ ಉಳಿಯುವುದಿಲ್ಲ.

**ಅಡಿ ಟಿಪ್ಪಣಿಗಳು**

೧. ಡಾ. ಡಿ.ಎನ್.ಶಂಕರ ಭಟ್. – ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ೨೦೦೧, ಪುಟ : ೧೮–೧೯

೨. ಭಾಷೆ ವಿಶ್ವಕೋಶ ಪುಟ–೮೧

೩. ಭಾಷೆ ವಿಶ್ವಕೋಶ ಪುಟ–೮೧

೪. ಸಾಮಾನ್ಯ ಭಾಷಾ ವಿಜ್ಞಾನ, ಡಾ. ಕೆ. ಕೆಂಪೆಗೌಡ ೧೯೯೬ ಪುಟ – ೨೬೮–೨೬೯

೫. ಭಾಷಾವಿಜ್ಞಾನ, ಡಾ. ಹಂಪ ನಾಗರಾಜಯ್ಯ ೧೯೬೮ ಪುಟ – ೨೪೨

೬. ಭಾಷಾವಿಜ್ಞಾನ, ಡಾ. ಹಂಪ ನಾಗರಾಜಯ್ಯ ೧೯೬೮ ಪುಟ – ೨೭೦

೭. ಸಂಕಥನ, ಕೇಶವ ಮಳಗಿ ೨೦೧೧ ಪುಟ – ೬೦–೬೧

೮. ಭಾಷಾವಿಜ್ಞಾನಿಗಳು, ಡಾ. ಹಂಪ ನಾಗರಾಜಯ್ಯ ಪುಟ – ೩೬೫–೩೬೬

೯. ಅರುಹುಕುರುಹು ಜನೆವರಿ–ಮಾರ್ಚ (ತ್ರೈಮಾಸಿಕ) ೨೦೧೧ಪುಟ–೩೧

ಡಾ. ಆರ್. ಸಿ. ಹಿರೇಮಠ್ ಅವರ The structure of Kannada ಎಂಬುದು ಭಾಷಾವಿಜ್ಞಾನದ ತಾತ್ವಿಕ ಹಿನ್ನೆಲೆಯಲ್ಲಿ ರಚಿತವಾ ಕೃತಿಯಾಗಿದೆ. "ಧಾರವಾಡ ಕನ್ನಡದ ಆಡುನುಡಿಯಲ್ಲಿ ಕಂಡುಬರುವ ಉನ್ನತಾವನತ, ಆವೃತ್ತ ಪೂರ್ವ, ಸ್ವರ ನಡುಮಧ್ಯ, ಆವೃತ್ತ ಸ್ವರ ಮತ್ತು ಅವನತ ಮಧ್ಯ ಸವೃತ್ತ ಪಶ್ಚ ಸ್ವರಗಳನ್ನು ಗುರುತಿಸಲಾಗಿದೆ. ಅಲ್ಲದೆ ಅನ್ಯ ಭಾಷೆಗಳ ಪ್ರಭಾವದಿಂದ ಕನ್ನಡದಲ್ಲಿ ಸೇರಿಕೊಂಡಿರುವ F.V.Z. ಧ್ವನಿಗಳು ಹಾಗೂ ಅವಿಭಾಜಕ ಧ್ವನಿಗಳನ್ನು ಗುರುತಿಸುವ ಪ್ರಯತ್ನಮಾಡಲಾಗಿದೆ'. ಎಂಬುದನ್ನು ಡಾ. ಎಚ್. ಎಂ. ಮಹೇಶ್ವರಯ್ಯ ಅವರ 'ಕನ್ನಡದಲ್ಲಿ ಭಾಷಾವಿಜ್ಞಾನದ ತಾತ್ವಿಕ ಬರಹಗಳು' ಎಂಬ ಲೇಖನದಲ್ಲಿ ಪ್ರಸ್ತಾಪಿಸುತ್ತಾರೆ.

೧೦. ಅರುಹುಕುರುವು. ಜನೆವರಿ–ಮಾರ್ಚ ತ್ರೈಮಾಸಿಕ ಪುಟ–೦೯

"ಕನ್ನಡ ಭಾಷೆಯ ರಚನೆಯನ್ನು ಅರಿಯುವ ಕೆಲಸ ಮೊದಲಾಗಿ ಸಾವಿರದಿನ್ನೂರು ವರ್ಷಗಳೇ ಸಂದಿವೆ. ಈ ನುಡಿಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸಿ ಮತ್ತೆ ಮತ್ತೆ ನುಡಿಯ ಕಟ್ಟೋಣವನ್ನು ತಿಳಿಯುವ ಕೆಲಸವನ್ನು ಮಾಡುತ್ತಲೇ ಬರಲಾಗಿದೆ. ಸುಮಾರು ಅರವತ್ತು ವರ್ಷಗಳ ಹಿಂದೆ ಅರಿಮೆಯ ವಲಯಕ್ಕೆ ಭಾಷಾಶಾಸ್ತ್ರ ಬರತೊಡಗಿತು. ಇಲ್ಲಿನ ನುಡಿಯರಿಗರು ಅಮೇರಿಕ, ಇಂಗ್ಲೇಂಡ್ ಮುಂತಾದ ದೇಶಗಳಿಗೆ ಹೋಗಿ ಅಲ್ಲಿ ತಾವು ಕಲಿತ ಹೊಸ ತಿಳಿವಳಿಕೆಯನ್ನು ಕನ್ನಡದಲ್ಲಿ ಹೇಳತೊಡಗಿದರು. ವಿಶ್ವವಿದ್ಯಾಲಯಗಳಲ್ಲಿ ಕಲಿಸುತ್ತಿದ್ದ ಹಲವರು ಭಾಷಾಶಾಸ್ತ್ರದ ಬೇಸಿಗೆ ಶಿಬಿರಗಳಿಗೆ ಹೋಗಿ ಹೊಸ ತಿಳುವಳಿಕೆಯನ್ನು ಪಡೆಯತೊಡಗಿದರು. ಇದರಿಂದೇನಾಯಿತು? ಕನ್ನಡ ನುಡಿಯ ರಚನೆಯನ್ನು ಅರಿಯಲು ಈ ಹೊಸ ತಿಳುವಳಿಕೆಯ ನೆರವನ್ನು ಪಡೆಯಬೇಕು ಎಂಬುವವರದೊಂದು ಕಡೆಯಾದರೆ ಅಂತಹ ತಿಳಿವಿನ ನೆರವಿಲ್ಲದೆಯೂ ನಮ್ಮ ನುಡಿಯ ರಚನೆಯನ್ನು ಅರಿಯುವುದೇ ಸರಿ ಎಂದು ನಂಬಿದವರು ಇನ್ನೊಂದು ಕಡೆ ನಿಂತರು. ಈ ಎರಡೂ ಗುಂಪುಗಳ ನಡುವೆ ಈ ಐವತ್ತು ವರ್ಷಗಳಲ್ಲಿ ಹಲವಾರು ಮುಖಾಬಿಲೆಗಳಾಗಿವೆ. ಯಾರು ಗೆದ್ದರು ಎನ್ನುವುದಕ್ಕಿಂತ ಇದರಿಂದ ಭಾಷಾಧ್ಯಯನ ಎಂಬುದು ಕನ್ನಡದಲ್ಲಿ ಹೊಸ ಹಾದಿಯಲ್ಲಿ ಸಾಗುವುದಕ್ಕೆ ಇದರಿಂದ ಅಡ್ಡಿಗಳಾದವು ಎನ್ನುವುದು ನೋವಿನ ಸಂಗತಿಯಾಗಿದೆ. ತಮಿಳು, ತೆಲುಗು ಮತ್ತು ಮಲೆಯಾಳಂ ನುಡಿಗಳಲ್ಲಿ ಕೂಡ ಇಂತಹ ಜಗಳಗಳು ನಡೆದಿವೆಯಾದರೂ ಅಲ್ಲೆಲ್ಲ ಹೊಸ ದಿಕ್ಕಿನಲ್ಲಿ ಸಾಗಿರುವುದನ್ನು ನೋಡುತ್ತಿದ್ದೇವೆ. ಆದರೆ ಕನ್ನಡದಲ್ಲಿ ಹಾಗಾಗಲಿಲ್ಲ." ಎಂದು ಡಾ. ಕೆ. ವಿ. ನಾರಾಯಣ ಅವರು 'ಕನ್ನಡ ಭಾಷಾಧ್ಯಯನ ಈವರೆಗೆ ಮತ್ತು ಮುಂದೆ' ಎಂಬ ಲೇಖನದಲ್ಲಿ ವಿವರಿಸಿದ್ದಾರೆ.

೧೧. ಡಾ. ಕೆ. ವಿ. ನಾರಾಯಣ ತೊಂಡುಮೇವು–ಕಂತೆ,–ಎರಡು, ಪುಟ–೨೭

೧೨. ಡಾ. ಕೆ. ವಿ. ನಾರಾಯಣ ತೊಂಡುಮೇವು–ಕಂತೆ,–ಎರಡು, ಪುಟ–೨೮

೧೩. ಡಾ. ಕೆ. ವಿ. ನಾರಾಯಣ ತೊಂಡುಮೇವು–ಕಂತೆ,–ಎರಡು, ಪುಟ–೩೬

೧೪. ಡಾ. ಕೆ. ವಿ. ನಾರಾಯಣ ಕನ್ನಡ ಜಗತ್ತು : ಅರ್ಧಶತಮಾನ ಪುಟ–೨೮೬.

೧೫. ಡಾ. ಕೆ. ವಿ. ನಾರಾಯಣ ಕನ್ನಡ ಜಗತ್ತು : ಅರ್ಧಶತಮಾನ ಪುಟ–೨೮೬.

೧೬. ಡಾ. ಕೆ. ವಿ. ನಾರಾಯಣ ಕನ್ನಡ ಜಗತ್ತು : ಅರ್ಧಶತಮಾನ ಪುಟ–೨೯೦

೧೭. ದೇಶ ಕಾಲ ಸಂಚಿಕೆ - ೧೪ ಪುಟ–೮೮

೧೮. ದೇಶ ಕಾಲ ಸಂಚಿಕೆ - ೧೪ ಪುಟ–೮೮

೧೯. ಡಾ. ಡಿ. ಎನ್. ಶಂಕರ ಭಟ್ ಕನ್ನಡ ನುಡಿಯ ಬಗೆಗೆ ಚಿಂತನೆ ಪುಟ - ೧೭–೨೧

೨೦. ಡಾ. ಕೆ. ವಿ. ನಾರಾಯಣ ಕನ್ನಡ ಜಗತ್ತು : ಅರ್ಧಶತಮಾನ ಪುಟ–೨೯೨

೨೧. ದೇಶ ಕಾಲ ಸಂಚಿಕೆ - ೧೫ ಪುಟ–೯೭–೯೮

೨೨. ಡಾ. ಬಿ. ಬಿ. ರಾಜಪುರೋಹಿತ ವ್ಯಾಸಾನುಭಾವ ಪುಟ– ೮೯

**ಕನ್ನಡ ಭಾಷಾಧ್ಯಯನದ ಸಂದರ್ಭದಲ್ಲಿ ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ಬಳಸುತ್ತಿರುವ ಹೊಸ ಪರಿಭಾಷೆಗಳ ಪಟ್ಟಿ**

| ಅರಿಮೆಯ ಪದ | ಪಾರಿಭಾಷಿಕ ಪದ |
|---|---|
| ಇಟ್ಟಳ | ರಚನೆ |
| ಈಪೊತ್ತು | ವರ್ತಮಾನಕಾಲ |
| ಉಲಿ | ಧ್ವನಿ |
| ಉಲಿಪು | ಉಚ್ಚಾರಣೆ |
| ಎತ್ತುಗೆ | ಉದಾಹರಣೆ |
| ಎಸಕಪದ | ಕ್ರಿಯಾಪದ |
| ಒಟ್ಟು | ಪ್ರತ್ಯಯ |
| ಒಯ್ಯುಗೆ | ಮಾಧ್ಯಮ |
| ಓರಣ | ಕ್ರಮ |
| ಕುರುಳು | ವಾಕ್ಯಪರಿಚ್ಛೇದ |
| ಕೇಳ್ವಿ | ಪ್ರಶ್ನೆ |
| ತಡೆಗುರುತು | ಕಾಮ (,) |
| ತೆರೆಯುಲಿ | ಸ್ವರ |
| ಪತ್ತುಗೆ | ಸಂಬಂಧ |
| ಪದನೆರಕೆ | ಪದಕೋಶ |
| ಪರಿಚೆ | ಸ್ವರೂಪ |
| ಪರಿಚೆಪದ | ವಿಶೇಷಣಪದ |
| ಪಸುಗೆ | ಅಧ್ಯಾಯ |
| ಪಾಂಗು | ಪಾತ್ರ |
| ಬರಿಗೆ | ಅಕ್ಷರ |
| ಬರಿಗೆಪಟ್ಟಿ | ವರ್ಣಮಾಲೆ |
| ಬೆರಗು | ಆಶ್ಚರ್ಯ |
| ಮುಚ್ಚುಲಿ | ವ್ಯಂಜನ |
| ಮುಂಬೊತ್ತು | ಭವಿಷ್ಯತ್ಕಾಲ |

| | |
|---|---|
| ಸಿಕ್ಕಲು | ಸಂಕೀರ್ಣ |
| ಸೊಲ್ಲರಿಮೆ | ವ್ಯಾಕರಣ |
| ಹಿಂಬೊತ್ತು | ಭೂತಕಾಲ |
| ಹುರುಳು | ಅರ್ಥ |
| ಹೆಸರುಪದ | ನಾಮಪದ |
| ಜೋಡುಪದ | ಸಮಾಸ |
| ಹೊರಪಡಿಕೆ | ಅಪವಾದ |
| ಬೇರು | ಧಾತು |
| ಅರಿಕೆರೂಪ | ಆಜ್ಞಾರ್ಥಕ |
| ಆಡುಗ | ಉತ್ತಮ |
| ಕೇಳುಗ | ಮಧ್ಯಮ |
| ಹೆರತು | ಪ್ರಥಮ |
| ಎಸಕಪತ್ತುಗೆ | ವಿಭಕ್ತಿ |
| ಹೆಸರುಪತ್ತುಗೆ | ಷಷ್ಠೀವಿಭಕ್ತಿ |
| ಉಜ್ಜುಲಿ | ಊಷ್ಮ |
| ಮೂಗುಲಿ | ಅನುನಾಸಿಕ |
| ತಡೆಯುಲಿ | ಸ್ಪರ್ಷ |
| ಮಡಚುಲಿ | ಮೂರ್ಧನ್ಯ |
| ಹೊಡೆಯುಲಿ | ರೇಫ |
| ಗುನುಗುನಿಸುವ | ಘೋಷ |
| ಊದುಲಿ | ಮಹಾಪ್ರಾಣ |
| ಇಪ್ಪುರುಳು | ಅರ್ಥಸಂಧಿಗ್ಧತೆ |
| ಒಳನುಡಿತ | ವಿಗ್ರಹವಾಕ್ಯ |
| ಎಸಕಪರಿಚೆ | ಕ್ರಿಯಾವಿಶೇಷಣ |
| ಹೆಸರುಪರಿಚೆ | ನಾಮವಿಶೇಷಣ |
| ಗುರುತಿನ ಒಟ್ಟು | ಆಖ್ಯಾತ ಪ್ರತ್ಯಯ |
| ಒರೆಣಿಕೆ | ಏಕವಚನ |
| ಹಲವೆಣಿಕೆ | ಬಹುವಚನ |
| ಗಂಡುಗುರ್ತ | ಪುಲ್ಲಿಂಗ |

| | |
|---|---|
| ಹೆಣ್ಣುಗುರ್ತ | ಸ್ತ್ರೀಲಿಂಗ |
| ಉಳಿಕೆಗುರ್ತ | ನಪುಂಸಕಲಿಂಗ |
| ಅಲ್ಲಗಳಿಕೆ | ನಿಷೇದಾರ್ಥಕ |
| ಅರಿಕೆರೂಪ | ವಿಧ್ಯರ್ಥಕ |
| ಆರಯ್ಗ | ತಾರ್ಕಿಕ |
| ಇಮ್ಮಡಿರೂಪ | ದ್ವರುಕ್ತಿ |
| ಈಡು | ಕರ್ಮ |
| ಎದುರುಹುರುಳು | ವಿರುದ್ದಾರ್ಥಕ |
| ಎಸಕಪರಿಚೆ | ಕ್ರಿಯಾವಿಶೇಷಣ |
| ಗುರ್ತ | ಲಿಂಗ |
| ಗುರಿ | ಅಪಾದನ |
| ತಕ್ಕುಮೆ | ಗೌರವ |
| ಪರಿಜು | ರೂಪ |
| ಪಸುಗೆ | ಅಧ್ಯಾಯ |
| ಪಾಂಗು | ಪಾತ್ರ |
| ಪುರಾವೆ | ಸಾಕ್ಷಿ |
| ಮುಚ್ಚುಲಿ | ವ್ಯಂಜನ |
| ಸೇರಿಸುವಪದ | ಆತ್ಮಾರ್ಥಕ |
| ಸೊಲ್ಲು | ವಾಕ್ಯ |
| ಹುರುಳು | ಅರ್ಥ |
| ಹೊತ್ತಿನ ಪತ್ತುಗೆ | ಕಾಲ |
| ಹೋಲಿಕೆಯ | ತುಲನಾತ್ಮಕ |
| ಅರಕೆ | ಸಂಶೋಧನೆ |
| ಅರಿಮೆ | ವಿಜ್ಞಾನ |
| ಅರಿಗ | ವಿಜ್ಞಾನಿ |
| ಆರಯ್ಯು | ಪರೀಕ್ಷಿಸು |
| ಇಟ್ಟಳ | ರಚನೆ |
| ಇನ್ನುಡಿಹ | ಪುನರುಕ್ತಿ |
| ಇಪ್ಪುರುಳು | ಅರ್ತಸಂದಿಗ್ದತೆ |

| | |
|---|---|
| ಇರ್ನುಡಿಗ | ದ್ವಿಭಾಷಿ |
| ಈಡುನುಡಿ | ಉದ್ದೇಶಿತ ಭಾಷೆ |
| ಉಲಿಪು | ಉಚ್ಚಾರಣೆ |
| ಎಣ್ಣುಕ | ಗಣಕ |
| ಎತ್ತುಗೆಯ ಗುರುತು | ಉದ್ಧರಣ ಚಿಹ್ನೆ |
| ಒಡ್ಡವ | ಶೈಲಿ |
| ಒಯ್ಯುಗೆ | ಮಾಧ್ಯಮ |
| ಒರೆದುನೋಡು | ಪರಾಮರ್ಶಿಸು |
| ಒರ್ನ್ನುಳು | ಏಕೋಕ್ತಿ |
| ಒಳೊಕ್ಕಣೆ | ಉಪಶೀರ್ಷಿಕೆ |
| ಓರಣ | ಕ್ರಮ |
| ಕುರುಳು | ವಾಕ್ಯಪರಿಚ್ಛೇದ |
| ಕುಳ್ಳಿಹ | ಸಂದರ್ಭ |
| ಕೂಡುಗ | ಸಮುಚ್ಚಯ |
| ಕೇಳ್ವಿಗುರುತು | ಪ್ರಶ್ನಾರ್ಥಕ ಚಿಹ್ನೆ |
| ಕೊಗೆತ | ವಿವರಣ ಚಿಹ್ನೆ |
| ಚಳಕ | ಕೌಶಲ್ಯ |
| ತಿಣ್ಮೆ | ಸಾಂದ್ರತೆ |
| ನಲ್ಬರಹ | ಸಾಹಿತ್ಯ |
| ನುಡಿಮಾರು | ಭಾಷಾಂತರಿಸು |
| ನೇರ ಎತ್ತುಗೆ | ಪ್ರತ್ಯಕ್ಷ ಉದ್ದರಣ |
| ಬರಹದ ಗುರುತು | ವಿರಾಮ ಚಿಹ್ನೆ |
| ಬೆರಗು ಗುರುತು | ಆಶ್ಚರ್ಯ ಸೂಚಕ ಚಿಹ್ನೆ |
| ಮಂದಿಯಾಳ್ವಿಕೆ | ಪ್ರಜಾಪ್ರಭುತ್ವ |
| ಮರುನೋಟ | ಪುನರ್ವಿಮರ್ಶೆ |
| ಮಾರೆಡೆ | ಹಸ್ತಾಂತರ |
| ಮಾರ್ಪುರುಳು | ರೂಪಕ |
| ಮಿಣ್ಣನೆ | ಮೌನವಾಗು |
| ಮುಚ್ಚುಲಿ | ವ್ಯಂಜನ |

| | |
|---|---|
| ಸನ್ನೆನುಡಿ | |
| ಸರಿತೆರಪಿನ ಇಟ್ಟಳ | ಸಮಾಂತರ ರಚನೆ |
| ಸಿಕ್ಕಲು ಸೊಲ್ಲು | ಸಂಕೀರ್ಣ ವಾಕ್ಯ |
| ಸುಳು | ಸುಲಭ |
| ಸೂಳುನುಡಿ | ಸಂಭಾಷಣೆ |
| ಹಮ್ಮುಗೆ | ಯೋಜನೆ |
| ಹೊಲಬು | ವಿಧಾನ |
| ಗಿಡ್ಡ ತೆರೆದ ಉಲಿ | ರಸ್ವ ಸ್ವರ |
| ಉದ್ದ ತೆರೆದ ಉಲಿ | ದೀರ್ಘ ಸ್ವರ |
| ಕಲಿಕೆಯರಿಮೆ | ಶಿಕ್ಷಣಶಾಸ್ತ್ರ |
| ಕಾಡರಿಮೆ | ಅರಣ್ಯಶಾಸ್ತ್ರ |
| ಸೊಮ್ಮರಿಮೆ | ಅರ್ಥಶಾಸ್ತ್ರ |
| ನಡೆದ | ಸಂಭವಿಸಿದ |
| ಅರಿಮೆ | ಶಾಸ್ತ್ರ |

# ಅಧ್ಯಾಯ : ೬

# ಸಮಾರೋಪ

## ೧

ಈ ಸಮಾರೋಪ ಭಾಗವನ್ನು ಒಂದು ಊರಿನ ಚಿತ್ರಣದ ಮೂಲಕ ವಿವರಿಸಲು ಪ್ರಯತ್ನಿಸುವೆ. ಡಾ. ಡಿ. ಎನ್. ಶಂಕರ ಭಟ್ ಅವರು 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಕೃತಿಯಲ್ಲಿ ದಾರಿ ಹೇಳುವ ಕ್ರಮ ಭಾಗ ನೆನಪಾದರೆ ತಪ್ಪೇನಿಲ್ಲ ಅಥವಾ ಈ ಸಮಾರೋಪವನ್ನು ಹೀಗೆ ಬರೆಯಲು ಅದೂ ಕಾರಣವಾಗಿರಬಹುದು. ಇಲ್ಲಿ ಹೇಳುವ ಚಿತ್ರಣಕ್ಕೆ ಕೇವಲ ಏಕಮುಖವಾದ ಒಂದು ಅರ್ಥದ ನೆಲೆಯಲ್ಲಿ ಮಿತಿಗೊಳಿಸದೆ ಅದನ್ನು ಈ ಅಧ್ಯಯನ, ಭಾಷಾಧ್ಯಯನ ಪರಂಪರೆ, ಭಾರತದ ಗ್ರಾಮೀಣ ಅಥವ ಸಾಂಸ್ಕೃತಿಕ ಪರಿಸ್ಥಿತಿ, ಭಾಷಾ ವೈವಿಧ್ಯತೆ ಮುಂತಾದ ಹಲವು ನೆಲೆಯ ಮೂಲಕ ಆಲೋಚಿಸಲು ಸಾಧ್ಯಮಾಡಿಕೊಡುತ್ತದೆಂಬ ನಂಬುಗೆ ನನ್ನದು.

ಊರು ಒಂದು ಹಳ್ಳಿ. ಸುಮಾರು ಮುನ್ನೂರರಿಂದ ಐದುನೂರರಷ್ಟು ಮನೆಗಳಿರಬಹುದು. ಜನಸಂಖ್ಯೆ ಎರಡು ಸಾವಿರದಿಂದ ಎರಡೂವರೆ ಸಾವಿರದಷ್ಟು ಇರಬಹುದು. ಊರ ನಡು ಮಧ್ಯದಲ್ಲಿ ನಿಂತರೆ ಉತ್ತರದಲ್ಲಿ ಬೇಡ ಜನಾಂಗದವರ ಮನೆಗಳು, ನೈರುತ್ಯದಲ್ಲಿ ಕಬ್ಬಲಿಗರ ಮನೆಗಳು, ಪೂರ್ವದಿಂದ ವಾಯುವ್ಯದವರೆಗೆ ಅರ್ಧ ಚಂದ್ರಾಕೃತಿಯಲ್ಲಿ ಕುರುಬರ ಮನೆಗಳು. ಪೂರ್ವ ಈಶಾನ್ಯದಲ್ಲಿ ಮಾದಿಗರ ಮತ್ತು ಉತ್ತರ ಈಶಾನ್ಯದಲ್ಲಿ ಹೊಲೆಯರ ಮನೆಗಳು ಇವೆ. ಈಡಿಗರ ಮನೆ ಎರಡು. ಮುಸ್ಲಿಂ ಮನೆಗಳು ಮೂರು. ನಾಯಂದರ ಮನೆ ಒಂದು. ಬಡಿಗತನ ಮತ್ತು ಕಂಬಾರಿಕೆ ಮಾಡುವ ಪಂಚಾಳರ ಮನೆ ನಾಲ್ಕು. ಹೀಗೆ ಜಾತಿಯ ವರ್ಗೀಕರಣಗೊಂಡು ನಿಂತಿದೆ ಊರು. ಶಿಲುಬೆಯಾಕಾರದಲ್ಲಿ ಊರನ್ನು ಸೀಳಿರುವ ತುಸು ಆಧುನಿಕವಾದ ರಸ್ತೆ. ಇದಲ್ಲದೆ ಊರ ಮೈತುಂಬ ಸಂದಿ – ಗೊಂದಿಗಳನ್ನು ಆವರಿಸಿರುವ ಮೈಯ ನರ – ನಾಡಿಗಳಂತೆ ಇರುವ ಇಕ್ಕಟ್ಟಾದ ದಾರಿಗಳು. ಒಂದು ಮಠ ಉಂಟು. ಪೂಜೆಗೆ ಇಲ್ಲದ ಅಯ್ಯನವರನ್ನು ಬೇರೆ ಊರಿನಿಂದ ಬರಮಾಡಿಕೊಂಡು ಬದುಕಿಗೆ ನೆರವಾದ ಊರ ಜನ. ಪುರಾತನ ಕಾಲದಿಂದ ನಿಂತ ಅರಳಿ ಮರವನ್ನು ಇವರ ವಾಸಕ್ಕೆ ಸ್ಥಳಬೇಕಾಗಿ ಮತ್ತ ಮಠ ದೊಡ್ಡದು ಮಾಡಬೇಕೆಂಬ ಪ್ರತಿಷ್ಠೆಯಿಂದ ಕಡಿಯಲಾಯಿತು. ಇಲ್ಲಿ ಬೆಳಿಗ್ಗೆ ಐದು ಗಂಟೆಗೆ ಮತ್ತು

ವಿದ್ಯುತ್ ಇದ್ದರೆ ಸಂಜೆಗೂ ಮೈಕ್ ದೇವರ ಹಾಡುಗಳನ್ನು ಇಡೀ ಊರಿನ ಮನೆ ಮನೆಗೂ ತಾಗುವಂತೆ ಧ್ವನಿಸುರುಳಿಗಳನ್ನು ಭಿತ್ತರಿಸಲಾಗುತ್ತದೆ.

ಪಶ್ಚಿಮದಲ್ಲಿ ಹನುಮಂತನ ಗುಡಿ, ಹಾಗೇ ಪೂರ್ವಕ್ಕೆ ಚಲಿಸಿದಂತೆ ದ್ಯಾಮ, ಮರೆಮ್ಮ ಮತ್ತು ಚಾವಡಿ ಕಾಣಿಸುತ್ತವೆ. ಈಶಾನ್ಯದಲ್ಲಿ ಪಿಲ್ಲಮ್ಮ, ವಾಯವ್ಯದಲ್ಲಿ ಹುಲಿಗೆಮ್ಮ ಅಲ್ಲದೆ ಮಲ್ಲಯ್ಯ, ಅರಿಕೇರೆಪ್ಪ, ಗಾಳೆಮ್ಮ, ಪರಪ್ಪ, ಕೊರ್ರಮ್ಮ ಮುಂತಾದ ದೇವರುಗಳು ಅಮವಾಸ್ಯೆ, ಹುಣ್ಣಿವೆಗೆ ಕಾಯಿ, ವಾರದ ಕೆಲದಿನಗಳಲ್ಲಿ ಎಣ್ಣೆ, ಬತ್ತಿ ಮತ್ತು ಹಲವರ ಭಕ್ತಿಯನ್ನು ಪಡೆದು ತಣ್ಣಗೆ ವಾಸಿಸುತ್ತಿದ್ದಾರೆ. ದ್ಯಾಮ, ಪಿಲ್ಲಮ್ಮ, ಹುಲಿಗೆಮ್ಮ ದೇವತೆಗಳು ಎರಡು ವರ್ಷಗಳಿಗೊಮ್ಮೆ ಕುರಿ, ಮೇಕೆ ರಕ್ತ ಕುಡಿಯುತ್ತಾರೆ. ಜನಗಳಿಗೆ ಜಾತಿಯ ಜಗಳ ಅಂಟಿಸಿಲ್ಲದಿದ್ದರೂ, ಅದಾವುದೊ ಗಳಿಗೆಯಲ್ಲಿ ನಡೆದಿರಬಹುದಾದ ಗದ್ದಲ ಜಾತ್ರೆಯ ಸನ್ನವೇಶದಲ್ಲಿ ವಿಪರೀತಕ್ಕೆ ಹೋಗುವುದುಂಟು ಮತ್ತು ಯಥಾಸ್ಥಿತಿಯನ್ನು ಕಾಪಾಡುವಲ್ಲಿ ಊರನ್ನು ಹಾಗೇ ಮುಂದುವರೆಸುವುದನ್ನು ಜನರ ಮನಸ್ಸಿನಲ್ಲಿ ಭಯ ಭಕ್ತಿಯನ್ನು ಬಿತ್ತರಿಸುತ್ತ ನಡೆದಿದೆ.

ಊರ ಹೊರಗೆ ಒಂದು ಊರ ಬಾವಿ. ಅದರಿಂದ ಹರಿಜನರನ್ನು ಬಿಟ್ಟು ಉಳಿದ ಎಲ್ಲಾ ಜಾತಿಯವರು ಮುಟ್ಟಿ ಬಳಸಲು ಅವಕಾಶ ಉಂಟು. ಊರಲ್ಲಿರುವ ಜಟ್ಟಿ ಅಥವಾ ಜಾಗೀರದಾರರ ಒಂದೆರಡು ಮನೆಗಳೇ ಇಡೀ ಊರನ್ನು ಆಳುತ್ತಿರುವಂತೆ ಮೊನ್ನೆ ಮೊನ್ನೆಯ ವರೆಗೆ ಉಂಟು. ಇವರು ಹೈದ್ರಾಬಾದ್‌ನ ನಿಜಾಮರಿಂದ ಇಂತಹ ಗತ್ತನ್ನು ದತ್ತು ತೆಗೆದುಕೊಂಡವರು. ಊರಿಗೆ ನೀರಾವರಿ ಮತ್ತು ಶಿಕ್ಷಣ ಮುಂತಾದ ಕಾರಣಗಳಿಂದಾಗಿ ಚಹರೆಯೇ ಬದಲಾಗಿದೆ. ಹಣ, ಹೆಂಡ, ಧಿಮಾಕು, ಶೋಕಿ, ಇನ್ನೊಂದು ಮತ್ತೊಂದು ಪ್ರದೇಶದ ಗಾಳಿ – ಬೆಳಕು ಮುಂತಾದವು ಹಲವು ಸಂಚಲನಗಳನ್ನು ಸೃಷ್ಟಿಸಿದೆ. ಅರ್ಧಕ್ಕಿಂತ ಹೆಚ್ಚು ಜನ ಹೊಲಗಳಲ್ಲಿ ವಾಸಮಾಡತೊಡಗಿದರು. ಅವರ ಮಕ್ಕಳು ಶಿಕ್ಷಣಕ್ಕಾಗಿ ದೂರದ ನಗರಗಳಲ್ಲಿ ಬೆಳೆಯತೊಡಗಿದರು. ವಯಸ್ಸಾದವರು ಊರಲ್ಲಿ ವಾಸಿಸುತ್ತಿದ್ದಾರೆ. ಹೀಗೆ ಮೂರು ಹಂತದ ತಲೆಮಾರುಗಳ ನಡೆ ನುಡಿಯಲ್ಲಿ ತನ್ನದೇ ಆದ ಸ್ವರೂಪದಲ್ಲಿವೆ. ವಯಸ್ಸಾದವರ ಉಡುಪು ಧೋತ್ರ, ಕಮೀಜಂಗಿ ದೊಡ್ಡ ರುಮಾಲು. ಎರಡನೆಯವರದ್ದೂ ಅಂತಹದ್ದೇ ತೊಡುಗೆಯಾದರೂ ರುಮಾಲಿಗೆ ಬದಲಾಗಿ ಟವೆಲ್ (ಶೆಲ್ಲೆ) ಧರಿಸುತ್ತಾರೆ. ಇನ್ನ ಮೂರನೆಯ ತಲೆಮಾರು ಈ ಜಗತ್ತಿನ ಯಾವುದೇ ಪ್ರದೇಶದ್ದಾಗಿರಬಹುದಾದ ಬಗೆಯ ತೊಡುಗೆ, ಮಾತು, ನಡೆ. ಇವರನ್ನು ಪಿತೃ ಹತ್ಯೆಗಾರರು ಎಂದು ಕರೆದರೂ ಆದೀತು. ಯಾಕೆಂದರೆ ಹಿಂದಿನದಕ್ಕೆ ಅಂಟಿಕೊಳ್ಳುವುದಕ್ಕಿಂತ, ಬಿಡಿಸಿಕೊಳ್ಳುವುದರಲ್ಲಿಯೇ ಹೆಚ್ಚು ಆಸಕ್ತರು.

ಸಾಂಸ್ಕೃತಿಕವಾಗಿರುವಂತಹ ಸ್ಥಳೀಯ ಚಹರೆ ಇವರಿಗೆ ಅಲರ್ಜಿ ಎಂದರೆ ತಪ್ಪಾಗಲಾರದು.

ಈಗ ಎಲ್ಲರನ್ನು ಆಧುನಿಕ ಸಲಕರಣೆಗಳು ಅಂಟು ರೋಗದಂತೆ ಆವರಿಸಿದ್ದಂತೆ ಸತ್ಯೆ. ಮೊಬೈಲ್, ಟಿ. ವಿ, ಸಿನೆಮಾ ಮಾಧ್ಯಮ, ಇವೆಲ್ಲದರ ಉತ್ಸಾಹ ಇರುವುದು ಸ್ಥಳೀಯತೆಯಿಂದ ಹೊರನಡೆವ ಮತ್ತು ವಿಶ್ವವನ್ನು ಒಂದು ಚಹರೆಗೆ ತರುವ ಧಾವಂತ. ಇದನ್ನು ವ್ಯಕ್ತಿಯ ವರ್ತನೆಯಿಂದ ಒಂದು ಸಂಸ್ಕೃತಿಯ ಪಲ್ಲಟನೆಯವರೆಗೂ ಗಮನಿಸಬಹುದು.

ಹಳೆಕಾಲದ ಬಾವಿಗಳು ಈಗ ನಿರ್ಲಕ್ಷಿತಗೊಂಡು ಊರ ವಾಯುವ್ಯಕ್ಕೆ ಎತ್ತರದಲ್ಲಿ ತಲೆಯೆತ್ತಿ ನಿಂತ ವಾಟರ್ ಟ್ಯಾಂಕ್. ಒಂದೊಂದು ಜಾತಿಯ ಓಣಿಗೂ, ಮನೆಗಳಿಗೂ ನೀರನ್ನು ಪೂರೈಸುತ್ತಿದೆ. ಹೊಲಗಳಲ್ಲಿ ವಾಸಿಸುವವರಿಗೆ ಅಲ್ಲಲ್ಲಿಯೇ 'ದ್ರೋಣಾಚಾರ್ಯರ' ಮೂರ್ತಿಯಂತೆ ಊರ ದೇವರು ಪ್ರತಿಕೃತಿಗೊಂಡು ನಿಂತಿವೆ. ಊರಲ್ಲಿ ಕೆಲವು ಜಾತಿಯ ಸಂಘಟನೆಗಳು ತಲೆಯೆತ್ತಿವೆ. ಎಲೆಕ್ಷನ್, ಜಾತಿಯ ಸಮಾರಂಭ ಮುಂತಾದ ಗುಂಪುಗಾರಿಕೆಗಳಲ್ಲಿ ಬುಸುಗುಟ್ಟುವ ಹಾವಿನಂತೆ ವಾತಾವರಣವನ್ನು ಕಂಪನಗೊಳಿಸುತ್ತದೆ. ಇವೆಲ್ಲದರ ಮಧ್ಯೆ ಶಾಲೆ ದೊಡ್ಡದಾಗುತ್ತಿದೆ.

೨

ಇಂದಿನ ಕನ್ನಡ ಭಾಷಾಧ್ಯಯನ ಸ್ವರೂಪವು ಹಿಂದಿನ ಮತ್ತು ಇಂದಿನ ಭಾಷಾಧ್ಯಯನವನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡ ಹಾಗೆ ಆವಾಹಿಸಿಕೊಂಡು ಪರಿಶೀಲಿಸುವುದರಲ್ಲಿ ನನ್ನ ಆಸಕ್ತಿ. ಏಕೆಂದರೆ ಸಾವಿರಾರು ವರ್ಷಗಳ ಸಮಾಜಾವಲಂಬಿಯಾದ ವಿಕಾಸ ಕ್ರಮವನ್ನು ಹೊಂದಿರುವ ಹಲವು ಭಿನ್ನ ನೆಲೆಗಳನ್ನು ಗ್ರಹಿಸುತ್ತಲೇ ಎರಡು ವಿಭಿನ್ನ ಭಾಷಾಧ್ಯಯನದ ನೆಲೆಗಳನ್ನು ಪ್ರಸ್ತುತದಲ್ಲಿ ಮನಗಾಣಬಹುದು. ಭಾಷೆಯ ಈ ಬಗೆಯ ವಿಭಿನ್ನ ನೆಲೆಗಳು ಅಂದಂದಿನ ತುರ್ತುಗಳಿಗೆ ಅನುಗುಣವಾಗಿ ರೂಪಾಂತರಗೊಂಡಿರುತ್ತದೆ. ಪಾರಂಪರಿಕವಾದ ಸಂಸ್ಕೃತದ ಮಾದರಿಯಲ್ಲಿ ರೂಪಿತಗೊಂಡ ಮಾದರಿ ಮತ್ತು ಇದನ್ನು ಮೀರಿ 'ತನ್ನದೇ' ಆದ ನೆಲೆಯ ಹುಡುಕಾಟದ ಮಾದರಿಯೂ ಇಂದಿನ ಜನ ಬಳಕೆಯ ಪದರನ್ನು ಸಂಪೂರ್ಣವಾಗಿ ಕಂಡುಕೊಂಡಿವೆ. ಎಂದು ಹೇಳಲಾಗುವುದಿಲ್ಲ.

ಪಾರಂಪರಿಕ ಮಾದರಿಯ ವ್ಯಾಕರಣ, ಸಿದ್ದಾಂತ, ಪಾಶ್ಚಾತ್ಯ ಬೇರೆ ಬೇರೆ ಗ್ರಹಿಕೆಯನ್ನು ಹೊಂದಿದ್ದರೂ ಅದು 'ಭಾರತೀಯ'ದಾಗಿತ್ತು ವಿನಹ, 'ಕನ್ನಡದ್ದು' ಆಗಿರಲಿಲ್ಲ. ಈ ಮಾತಿಗೆ ಪ್ರಾಚೀನ ಕಾಲದಿಂದ ಈಗಲೂ ಬೆಳೆಯುತ್ತಿರುವ ಹಳೆ ಮರದ ಹತ್ತಾರು ಟೊಂಗೆಗಳು, ಇನ್ನೂ ಚಿಗುರುತ್ತಲೇ ಇವೆ.

ಕನ್ನಡದ್ದೇ ಮಾದರಿಯೂ ತನ್ನಲ್ಲಿ ಒಂದು ಸ್ಪಷ್ಟತೆಯನ್ನು ರೂಪಿಸಿಕೊಂಡದ್ದೇನೋ ಸರಿ. ಆದರೆ ಅದು ಸಮಾಜದ ಹಲವು ನೆಲೆಗಳನ್ನು ಜಾತಿ, ಧರ್ಮ, ಶೋಷಣೆಯ ನೆಲೆಗಳು ಮುಂತಾದವುಗಳನ್ನು ಬಹಳ ಪ್ರೀತಿಯಿಂದ ನೋಡುತ್ತಿದೆ. ಹಾಗೆ ಇರುವ ನೋಟದಲ್ಲಿ ಆಲೋಚನೆಯಲ್ಲಿ ದಲಿತ ಮಗುವನ್ನು, ಬ್ರಾಹ್ಮಣ ಮಗುವನ್ನೂ ಒಂದೇ ಜೊತೆಯಲ್ಲಿ ಕೂಡಿಸಿ ನೋಡಲು ಮತ್ತು ನಾಳೆ ಎಂಬ ಭವಿಷತ್ತಿನಲ್ಲಾದರೂ ಭೂತಕಾಲದ ಭ್ರೂಣ ಗೂಡುಗಳಿಂದ ಬಿಡಿಸಿಕೊಂಡು ಬೆಳೆಸುವುದರಲ್ಲಿ ಕನ್ನಡದ್ದೇ ಭಾಷಿಕ ಕಸುವನ್ನು ತುಂಬುವ ಯತ್ನಮಾಡುತ್ತಿದೆ. ಈ ಮೇಲೆ ಸೂಚಿಸಿದ ಗ್ರಾಮದ ಅಮೇಧ್ಯೆದಲ್ಲಿ ಅಥವಾ ವೈವಿಧ್ಯತೆಯಲ್ಲಿ ಈ ಇಬ್ಬರನ್ನೂ ಅರ್ಥಮಾಡಿಕೊಳ್ಳುವುದು ಕಷ್ಟವೇ. ಏಕೆಂದರೆ ಒಬ್ಬರು ಕೇರಿ ಕೇರಿಗಳನ್ನು ತಿರುಗುವ ವಚನಕಾರರಂತೆಯೂ, ದಾಸರಂತೆಯೂ ಕಾಣಿಸುತ್ತಿದ್ದರೆ, ಮೊದಲನೆಯವರು ಇದನ್ನು ಮಹಾ ಪುರುಷನ ದೇಹದಿಂದ ಜನಿಸಿದ ಕಥೆಯನ್ನು ಶತ – ಶತಮಾನದಿಂದ ನಂಬಿಸಿಕೊಂಡು ಬಂದಿರುವ ಹಾಗೆಯೇ ಸಂಸ್ಕೃತ, ಶುದ್ಧ – ಅಶುದ್ಧ, ದೇವಸ್ಥಾನ, ಕೇರಿಗಳು, ಅಗ್ರಹಾರಗಳು, ಊರುಗಳು ಎಲ್ಲವನ್ನು ಸ್ಥಾಪಿಸಿ, ಹೊಸಕಾಲದ ಹಸಿವುಗಳಲ್ಲೂ ಹೇಗೆ ಬೇಕೋ ಹಾಗೆ 'ಜಾತಿ ಪಂಥಗಳು ಕೆರಳುತ್ತಿವೆ ಮನದ ಮರೆಯಲಿ' ಎನ್ನುವ ಬೇಂದ್ರೆಯ ಮಾತಿನಂತೆ ಕಾಪಾಡಿಕೊಂಡು ಹೋಗುತ್ತವೆ. ಇದರಲ್ಲಿ ಅನುಮಾನವಿಲ್ಲ. ಯಾಕೆಂದರೆ ಅದು ಒಂದು ವ್ರತದಂತೆ ಕಾಪಿಡುತ್ತದೆ.

೨

ಈಗಾಗಲೆ 'ಕನ್ನಡದ್ದೇ' ಅಧ್ಯಯನ ಮಾದರಿ ಎಂಬ ಭಾಗದಲ್ಲಿ ಚರ್ಚಿಸಿರುವ ಹಾಗೆ ಕನ್ನಡ ವರ್ಣಮಾಲೆಯಿಂದಲೇ ಆರಂಭಗೊಂಡು ವ್ಯಾಕರಣದ ಹಲವು ಆಯಾಮಗಳಲ್ಲಿ ಜಾಗ ಪಡೆದಿರುವ ಮತ್ತು ಕನ್ನಡವೆಂದು ಓದುತ್ತಿರುವ ಸಂಸ್ಕೃತದ ಮಾದರಿಯನ್ನು ಬಿಡಬೇಕಿದೆ. ಸುಮಾರು ಎರಡೂವರೆ ಶತಮಾನಗಳಿಂದಲಾದರೂ ಅತ್ಯಂತಿಕವೇ ಆಗಿ ನಡೆದುಕೊಂಡು ಬಂದ ಮಾದರಿಯೂ ರೂಪಿಸಿದ ಹೆದ್ದಾರಿ ಬಿಡುವುದು ಭಾಷೆಯನ್ನು ಬಳಸುವವರೂ, ಅಧ್ಯಯನಕಾರರೂ ಕನ್ನಡದ್ದೇ

ಮಾದರಿಯೆಂದು ಹಾಗೆ ಬಿಟ್ಟು ಹೋಗುವುದು ಕಷ್ಟ. ಯಾಕೆಂದರೆ ಈಗ 'ಕನ್ನಡದ್ದೇ' ಮಾದರಿಯೆಂದು ಹೇಳುವ ಅಧ್ಯಯನ ನೆಲೆಯಲ್ಲಿ ಯೋಚಿಸಿದಾಗ ಅಲ್ಲಿ ಬೀಳುಬಿದ್ದ ನೆಲದಲ್ಲಿ ಏನೇನೋ ಮುಳ್ಳು ಕಸ ಕಂಟಿ ಇತ್ಯಾದಿ ಬೆಳೆದಿದೆ ಭಯ ಹುಟ್ಟಿಸುವಷ್ಟು. ಇನ್ನು ಮೌಖಿಕರಿಗೆ ಈ ಎರಡೂ ಮಾರ್ಗ ಅವರಿಗೆ ಮುಖ್ಯವೇ ಅಲ್ಲವೆಂದು ನುಡಿದು ನಡೆಯುವವರು.

ಬರವಣಿಗೆ ಅಧಿಕೃತ ಮತ್ತು ಈಗಾಗಲೇ ನಡೆದು ಬಂದದ್ದೇ ಶ್ರೇಷ್ಠವೆಂದು ಪಾರಂಪರಿಕರು ನಂಬಿಸಿದ್ದಾರೆ. ಈ ನಂಬಿಕೆಯ ಎದುರು ಉಳಿದೆಲ್ಲವೂ ಒಳ ದಾರಿಗಳು, ಬಿಡುಗಡೆಯ ಮಾರ್ಗಗಳೂ ನೇಣು, ಬಾವಿ, ಕಾಡು ದಾರಿಯ ತಲ್ಲಣಗಳಾಗಿ ಗೋಚರಿಸುತ್ತಿದೆ. ಹಾಗಾಗಿ ಮೌಖಿಕತೆಯನ್ನೂ ಪರಿಗಣಿಸುವ ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಮುಂತಾದವರ ಮಾರ್ಗವು ರುಚಿಸುತ್ತಿಲ್ಲ. ಅಷ್ಟೇ ಏಕೆ ಇದನ್ನು ಒಪ್ಪುವವರ ಮಧ್ಯೆಯೇ ಕೆಲವು ಗೊಂದಲಗಳೂ ಇವೆ. ಅಥವಾ ಇದು ಇನ್ನೂ ಆರಂಭ ನಡೆಯಬೇಕಾದ, ಹಿಂದಿರುಗಿ ನೋಡಬೇಕಾದ ದಾರಿಯೂ ಬಹಳವಿದೆ. ಎನ್ನಬೇಕೆ?

೪

'ಭಾಷೆ ನಿಂತ ನೀರಲ್ಲ, ಹರಿಯುವ ತೊರೆ' ಎಂಬುದು ಈಗಾಗಲೆ ಹೆಚ್ಚು ಜನಪ್ರಿಯಗೊಂಡ ವಾಕ್ಯವೇ. ಎಲ್ಲೆಲ್ಲೋ ಬೀಳುವ ಮಳೆಯ ಹನಿ ಝರಿ ಜಿನುಗು ಮುಂತಾದವುಗಳು ಸೇರಿ ಹರಿಯುವುದು. ಹಾಗೆ ಹರಿಯುವ ನೀರು ಪ್ರತಿಯೊಂದು ಜೀವಕ್ಕೂ ಜೀವ. ಹಾಗೆಯೇ ಭಾಷೆಯೂ ಸಹ ಮನುಷ್ಯನಿಗೆ ನೀರಿನಷ್ಟೇ ಮುಖ್ಯವಾಗಿದೆ. ಹಾಗೆ ಚಲಿಸುವ ಜೀವಂತ ಭಾಷೆಯೂ ಅನುಕೂಲಕರ ಮಾರ್ಗದಲ್ಲಿ ತನ್ನಿಂದ ತಾನೆ ಘಟಿಸಿದಂತೆ ಸಹಜವಾಗಿ ಪರಿವರ್ತಿತವಾಗುತ್ತಿರುತ್ತದೆ. ಭಾಷಾಧ್ಯಯನಕಾರರು ಅದನ್ನು ಕಾಣುವ ಚಕ್ಷುಮಾತ್ರ ಹೊಂದಬೇಕು ಅಷ್ಟೆ. ಹೀಗೆ ಎಂದಾಗ ಎರಡು ಮಾರ್ಗಗಳನ್ನು ತಾಗುವ ಮಾತೇ ಆಗುತ್ತದೆ. ಪರಂಪರೆಯಲ್ಲೂ ದೋಷಗಳಿವೆ. ಈ ಹಿಂದಿನ ಅಧ್ಯಾಯದಲ್ಲಿ ಹೇಳಿರುವೆ ಮತ್ತು ಆ ಕುರಿತು ಡಾ. ಡಿ. ಎನ್. ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ಸಾಕಷ್ಟು ವಿವರಿಸಿದ್ದಾರೆ. ಅಥವಾ ಆಯಾ ಕಾಲದ ಅನಿವಾರ್ಯತೆ ಮತ್ತು ತುರ್ತು ಹಾಗೆ ಅಧ್ಯಯನಕ್ಕೆ ಒಳಪಡಿಸಲೂ ಕಾರಣವಾಗಿದೆ ಎಂದು ಕಾಣುತ್ತದೆ. ಆದರೆ ಮಾತು ಮತ್ತು ಬರಹವನ್ನು ಅಭ್ಯಸಿಸಿ ಹಾಗೂ ಎರಡರ ನಡುವಿನ ಅಂತರವನ್ನು ಸಾಮಾಜಿಕ ತಾರತಮ್ಯಗಳನ್ನು ನಿವಾರಿಸಲು ಪ್ರಯತ್ನಿಸುವ 'ಕನ್ನಡದ್ದೇ' ಮಾದರಿಯೂ ಕೆಲವು

ಗೊಂದಲಗಳನ್ನು, ಅಂದರೆ ಅದು ಬಳಸುವ ಪಾರಿಭಾಷಿಕ ಪದಗಳ ನೆಲೆಯಲ್ಲಿ ಉಂಟುಮಾಡುತ್ತಿದೆ ಎಂದು ಕಾಣುತ್ತದೆ.

ಉದಾಹರಣೆಗೆ :- ಕಂಪ್ಯೂಟರ್ : ಎಣ್ಣುಕ, ಉದಾಹರಣೆಗೆ : ಎತ್ತುಗೆ, ಶಿಕ್ಷಣಶಾಸ್ತ್ರ : ಕಲಿಕೆಯರಿಮೆ, ಅರಣ್ಯಶಾಸ್ತ್ರ : ಕಾಡರಿಮೆ, ಶಾಸ್ತ್ರ : ಅರಿಮೆ, ಅರ್ಥಶಾಸ್ತ್ರ : ಸೊಮ್ಮರಿಮೆ, ವಿಜ್ಞಾನ : ವಿಜ್ನಾನ, ಕೃತಜ್ಞ : ಕ್ರುತಜ್ನ, ಬೃಹತ್ : ದೊಡ್ಡ, ಪುಷ್ಪ : ಹೂವು, ಸಂಭವಿಸಿದ : ನಡೆದ, ವೈಜ್ಞಾನಿಕತೆ, ವಯ್‌ಜ್ನಾನಿಕತೆ, ಬಹುಶಃ ಬಹುಶಹ ಮುಂತಾಗಿ. ಇಂತಹ ಕೆಲವು ಪಾರಿಭಾಷಿಕಗಳಲ್ಲಿ ಅರ್ಥಸ್ಪಷ್ಟತೆ, ವಸ್ತು ಮತ್ತು ಕಾರ್ಯ ಸೂಚಕಗಳು ಸೋಲುವಂತೆ ಅಥವಾ ಬದಲಾದ ಪದಗಳನ್ನು ಬಳಸುವುದು ಸರಳತೆಯ ಬದಲು ಕ್ಲಿಷ್ಟವೆನಿಸುತ್ತದೆ. ಎಣ್ಣುಕ ಪದವು ಕಂಪ್ಯೂಟರ್ ಎಂದಾಗ ಹೊಳೆಯುವ ಸ್ವರೂಪ ಸೋಲುತ್ತದೆ. ಹಾಗಾಗಿ ಇಂತಹ ಕಡೆ ಕನ್ನಡ ನಿಘಂಟುವಿಗೆ ಪದಗಳು ಸೇರಿದಂತಾಯಿತೇ ವಿನಹ ಬಳಕೆಗೆ ಬಂದೀತೆಂದು ಹೇಳಲಾಗದು. ಕೃತಜ್ಞ : ಕ್ರುತಜ್ನ, ವಿಜ್ಞಾನ : ವಿಜ್ನಾನ, ವೈಜ್ಞಾನಿಕತೆ : ವಯ್‌ಜ್ನಾನಿಕತೆ ಇವು ಮತ್ತೊಂದು ಬಗೆಯಲ್ಲಿ ಮೂಲವನ್ನು ಅನುಕರಿಸುವ ಸಡಿಲಿಕೆಯಲ್ಲಿಯೇ ಇವೆ.

ಮಹಾಪ್ರಾಣ ಕನ್ನಡದಲ್ಲಿ ಇಲ್ಲ ಎಂಬುದು ಸತ್ಯ. ಆದರೆ ಪ್ರಾದೇಶಿಕ ಕನ್ನಡದಲ್ಲಿ ಇದು ಬಳಕೆಗೆ ಅಲ್ಲಲ್ಲಿ ವೈಶಿಷ್ಟ್ಯವಾಗಿ ಬರುವುದಿದೆ. ಇಂತಹ ಕಡೆ ಇನ್ನಷ್ಟು ಅಧ್ಯಯನ ನಡೆಯಬೇಕಿದೆ ಎಂದು ಕಾಣುತ್ತದೆ. ಉದಾಹರಣೆಗೆ : ಖತ್ತಿ, ಖೋಡಿ, ಖಟ್ಟಿ, ಖಂಡ ಇತ್ಯಾದಿ. ಯಂತ್ರಗಳು, ಆಧುನಿಕತೆಯ ಸೌಲಭ್ಯಗಳು ಮುಂತಾದವುಗಳು ಇಂದು ನಾಳೆಯಲ್ಲಿ ಇನ್ನಷ್ಟು ಬಲವಾಗಿ ಬಾಳುವ ಬಲಿಷ್ಟ ಕನ್ನಡವಾಗಿ ಮಾಡಬೇಕೆಂದರೆ ಈ ಕನ್ನಡದ್ದೇ ಆದ ಆಯಾಮಗಳನ್ನು ನಾವೆಲ್ಲರು ಅರಿಯಬೇಕಿದೆ. ಆದರೆ ಇಂತಹ ಕೆಲವು ಶಬ್ದಗಳ ಗೊಂದಲವನ್ನು ನಿವಾರಿಸಬೇಕಿದೆ. ಡಾ. ಡಿ. ಎನ್.ಶಂಕರ ಭಟ್ ಅವರ ಅಧ್ಯಯನವನ್ನು ಒಪ್ಪಿರುವ ಎಲ್ಲರೂ  ಅವರು ಸೂಚಿಸುವ 'ಹೊಸ ಬರಹ'ವನ್ನು ಬಳಸುತ್ತಿಲ್ಲ. ಡಾ. ಚಲಪತಿ, ಡಾ. ಕೆ. ವಿ. ನಾರಾಯಣ, ಬಾ. ರ. ಕಿರಣ ಇವರು ಸಹ ಅವರ ಕೆಲವು ಮಾರ್ಪಾಡುಗಳನ್ನು ಮಾತ್ರ ಬಳಸುತ್ತಿದ್ದಾರೆ.

ಈ ಮೇಲೆ ವಿವರಿಸಲಾದ ಹಳ್ಳಿಯೊಂದರ ಚಿತ್ರಣ ಮತ್ತು ಹೊಸ ದಿಕ್ಕಿನತ್ತ ಚಲಿಸುತ್ತಿರುವ ಕನ್ನಡ ಭಾಷಾಧ್ಯಯನವನ್ನು ಕುರಿತು ಇನ್ನಷ್ಟು ಸೂಕ್ಷ್ಮವಾಗಿ ಯೋಚಿಸಬೇಕಿದೆ. ನಮ್ಮ ಪರಂಪರೆಯಲ್ಲಿ ಈ ಮೇಲೆ ಸೂಚಿಸಲಾದ ಹಳ್ಳಿಯ ನಿಬಿಡತೆಯನ್ನು ತುಂಬಿಕೊಂಡು ಮುಂದೆ ಮುಂದೆ ಬಂದದ್ದಾಗಿದೆ. ಜಾತಿ ಧರ್ಮ ಮೇಲು ಕೀಳು ದೇವರು, ಮುಟ್ಟುವ ಮುಟ್ಟದಿರುವ ಮನುಷ್ಯ ಸಂಬಂಧಗಳು ಹೀಗೆ

ಪಟ್ಟಿಬೆಳೆಯುತ್ತದೆ. ಕೆಲವರಿಗೆ ಅಕ್ಷರ, ಕೆಲವರಿಗೆ ಅದು ಅಸಾಧ್ಯ. ಈ ಸಂಗತಿಗಳನ್ನು ಹೊತ್ತ ಪರಂಪರೆಯನ್ನು ಇವತ್ತು ಅಂತಹ ಸಂಗತಿಗಳಿಂದ ಬಿಡಿಸಿಕೊಳ್ಳುವುದು ಕೂಡ ಅಪರಾಧವಾಗಿ ಕಾಣುವುದು ನಿಜಕ್ಕೂ ವಿಪರ್ಯಾಸ. ಎಲ್ಲರಿಗೂ ಬೇಕಾದ ಕನ್ನಡಕ್ಕಾಗಿ ಕೆಲಸಮಾಡುತ್ತಿರುವ ಡಿ. ಎನ್. ಶಂಕರಭಟ್, ಕೆ.ವಿ.ನಾರಾಯಣ ಮುಂತಾದವರ ಕುರಿತು ಎದ್ದ ಪ್ರಶ್ನೆಗಳಲ್ಲಿ ಈ ಪರಂಪರೆಯ ಮಲಿನತೆ ಅಡಗಿದೆ. ಈಗಾಗಲೇ ನಡೆದೂ ನಡೆದು ದಾರಿ ಮತ್ತು ಮನಸ್ಸುಗಳು ಮರಗಟ್ಟಿವೆ ಹಾಗಾಗಿ ಸಹಜತೆಯೂ ಅಸಹಜವಾಗಿಯೇ ಕಾಣುತ್ತಿದೆ. ಗೋವಿಂದ ಪೈ ಅವರಿಗೆ ಕನ್ನಡ ಕವಿತೆ ರಚನೆಯಲ್ಲಿ ಪ್ರಾಸ ಬಿಡುವುದು ಅಸಾದ್ಯವೇ ಆಗಿತ್ತು. ಅದೊಂದು ಕಾವ್ಯದ ಕೊಲೆ ಮತು ಹಾಗೆ ಬರೆಯುವವನು ಕೊಲೆಗಡುಕ ಎಂಬಂತೆ ಕನ್ನಡ ಸಾರಸ್ವತ ಲೋಕ ಕಂಡದ್ದು ಇದೆ. ಇವತ್ತು ನಾನೊಬ್ಬನೆ ನಡೆಯುವ ದಾರಿ ನಾಳೆ ಹೆದ್ದಾರಿಯಾದೀತು ಎಂಬ ನಂಬಿಕೆಯಿಂದ ಪ್ರಾಸವನ್ನು ತ್ಯಾಜಿಸಿದ ಪೈ. ಅವರು ಅಂದುಕೊಂಡಂತೆಯೇ ನಿಜಕ್ಕೂ ಇವತ್ತು ಎಲ್ಲರೂ ನಡೆಯುವ ದಾರಿಯಾಗಿದೆ. ಹಾಗೆಯೇ 'ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ' ಎಂಬ ಎಲ್ಲರ ಕನ್ನಡದ ಪ್ರೀತಿಯಿಂದ ಕೆಲಸಮಾಡುತ್ತಿರುವ ಡಿ.ಎನ್.ಎಸ್, ಕೆ.ವಿ.ಎನ್. ಆರ್. ಚಲಪತಿ ಮುಂತಾದವರ ನಡೆ ನಿಧಾನಕ್ಕೆ ವಿಸ್ತರಿಸುತ್ತದೆ ಎಂಬುದಕ್ಕೆ ನುಡಿನಾಡು ಪತ್ರಿಕೆ ಮತ್ತು ಕನ್ನಡ ವಿ.ವಿ. ಬಾಷಾಧ್ಯಯನ ವಿಭಾಗದ ಕೆಲಸಗಳು ಮುಂತಾದವು ಸೂಚನೆಗಳಾಗಿವೆ. ಈ ಹೊಸ ಬಗೆಯ ಬರಹಗಳ ಕುರಿತು ಚರ್ಚೆ ಆರಂಭವಾಗಿತ್ತಿದೆ.

## ಈ ಅಧ್ಯಯನದ ಫಲಿತಗಳು

೧. ಕನ್ನಡ ಭಾಷಾಧ್ಯಯನಕಾರರ ಚಿಂತನೆಯು ವೈದಿಕ ನೆಲೆಯ ಸಂಸ್ಕೃತ, ವೇದ, ಶಾಸ್ತ್ರ, ಪುರಾಣ ದ್ವೈತ-ಅದ್ವೈತದ ಉದರದಲ್ಲಿ ಜನಿಸಿದ ಚಿಂತನೆಗಳಾಗಿವೆ. ಅವು ಕನ್ನಡ ಭಾಷಾಧ್ಯಯನದ ಆರಂಭದ ಹಂತದಲ್ಲಿ ಅಗತ್ಯ ಚಿಂತನೆಗಳಾಗಿದ್ದೇನೋ ನಿಜ. ಮುಂದುವರೆದು ನಂತರದಲ್ಲಿ ಅವುಗಳೇ ಪ್ರಧಾನ ಧಾರೆಯಾಗಿ ರೂಪುಗೊಂಡಿದ್ದರಿಂದ ಕನ್ನಡದ ಹಲವು ಪ್ರಭೇಧಗಳನ್ನು ನಿರ್ಲಕ್ಷ್ಯಕ್ಕೆ ತಳ್ಳಲ್ಪಟ್ಟವು. ಅಲ್ಲದೆ ಸಂಸ್ಕೃತ ಪ್ರಣೀತ ಪ್ರಭೇಧವನ್ನು ಪ್ರಧಾನ ಧಾರೆಯ ಮೂಲಕವೇ ನೋಡುವಂತಾಯಿತು. ಕೆ. ವಿ. ತಿರುಮಲೇಶ್, ಅಜಕ್ಕಳ ಗಿರೀಶ ಭಟ್, ಸಂಗಮೇಶ್ ಸವದತ್ತಿ ಮಠ ಮುಂತಾದವರು. ಅಷ್ಟೇ ಯಾಕೆ ಪರಂಪರೆಯ ವಿಶ್ಲೇಷಣಾ ಕ್ರಮಗಳ

ಹಿಂದೆ ಪಾಣಿನಿ ಪ್ರಣೀತ ಸಂಸ್ಕೃತ ಮಾದರಿಯ ಚಿಂತನಾ ಧಾರೆಯ ಪ್ರಭಾವವಿರುವುದನ್ನು ಗುರುತಿಸಬಹುದು. ಸಂಸ್ಕೃತ ಮತ್ತು ಕನ್ನಡದ ಮೂಲವೇ ಬೇರೆಯಾದರೂ ಒಂದೇ ಬಗೆಯ ವಿವೇಚನೆಯನ್ನು ಮಾಡಲಾಯಿತು. ಹೀಗಾಗಿ ಕನ್ನಡದ ಹಲವು ವೈವಿಧ್ಯತೆಯನ್ನು ಸಹ ಕನ್ನಡದ್ದೇ ಆದ ನೆಲೆಯಲ್ಲಿ ಕಾಣಲಾಗಲಿಲ್ಲ. ಅಂದರೆ ಕನ್ನಡ ಪರಂಪರೆಯನ್ನು ಗ್ರಹಿಸುವಲ್ಲಿ ಮುಖ್ಯ ತೊಡಕಾಗಿ ಹಲವು ಪ್ರವೇಶಗಳನ್ನು ರದ್ದುಗೊಳಿಸಿ ಒಂದು ರಾಜ ಮಾರ್ಗವನ್ನು ನಿರ್ಮಿಸಲಾಯಿತು.

೨. ಸಂಸ್ಕೃತ ಮಾದರಿ ವ್ಯಾಕರಣಗಳು ಕವಿರಾಜಮಾರ್ಗ, ಶಬ್ದಮಣಿದರ್ಪಣ, ಶಬ್ದಸ್ಮೃತಿ, ಶಬ್ದಾನುಶಾಸನ, ಕರ್ನಾಟಕ ಭಾಷಾಭೂಷಣ, ಮುಂತಾಗಿ, ಹಾಗೆಯೇ ಕ್ರಿಶ್ಚಿಯನ್ ಮಿಷಿನರಿಗಳು ರೂಪಿಸಿದ ಪಾಶ್ಚಾತ್ಯಮಾದರಿ ವ್ಯಾಕರಣಗಳು. ಡಾ. ವಿಲಿಯಂ ಕಾರಿ, ಜಾನ್ ಮೆಕೆರೆಲ್, ಥಾಮಸ್ ಹಡ್ಸನ್, ರೆವೆರೆಂಡ್ ಎಫ್ ಝಿಗ್ಲರ್ ಮುಂತಾದವರು ರೂಪಿಸಿದ ವ್ಯಾಕರಣ ಅಧ್ಯಯನದ ನೆಲೆಯಾಗಿ ಒಪ್ಪಿದ್ದು. ಈ ಎರಡೂ ಮಾದರಿಗಳು ಕನ್ನಡ ಭಾಷೆಯನ್ನು ಕುರಿತು ಅಧ್ಯಯನಮಾಡುತ್ತವೆ ಎಂದು ನಂಬಲಾಯಿತು ಮತ್ತು ನಂಬಿಸುವ ವಾತಾವರಣ ನಿರ್ಮಾಣವಾಯಿತು. ಪಶ್ಚಿಮದ ಭಾಷಾಧ್ಯಯನದ ಕ್ರಮಗಳ ನೇರಪ್ರಭಾವದಿಂದ ಕನ್ನಡ ಭಾಷಾಧ್ಯಯನದಲ್ಲಿ ಒಂದು ಬಗೆಯ ಕೃತಕತೆ ಸೃಷ್ಟಿಯಾಯಿತು. ಅಥವಾ ಕನ್ನಡದ ಭಾಷಾಸೂಕ್ಷ್ಮತೆಗಳನ್ನು ಕಂಡುಕೊಳ್ಳಲಾಗದೆ ಕೆಲವು ಈಗಾಗಲೆ ರೂಪಿತಗೊಂಡಿದ್ದ ಮತ್ತು ಜನಪ್ರಿಯ ಲಕ್ಷಣಗಳನ್ನು ಗುರುತಿಸಿ ಅದುವೇ ಕನ್ನಡ ಭಾಷೆಯ ಲಕ್ಷಣ ಎಂದು ಹೇಳಲಾಯಿತು.

೩. ಸ್ವಾತಂತ್ರ್ಯ, ಶಿಕ್ಷಣ, ಕನ್ನಡ–ಕರ್ನಾಟಕ ಏಕೀಕರಣ, ಹಲವು ಸಮುದಾಯಗಳ ಅಸ್ತಿತ್ವದ ಪ್ರಶ್ನೆ ಮುಂತಾದವುಗಳು ಬೇರೆ ಬೇರೆ ಚಿಂತನೆಗಳಿಗೆ ಎಡೆಮಾಡಿಕೊಟ್ಟದ್ದು ಮತ್ತು ಜಗತ್ತಿನ ಹಲವು ಕಡೆ ನಡೆದ ಭಾಷಾವಿಜ್ಞಾನದ ಹತ್ತು ಹಲವು ಸಂಗತಿಗಳನ್ನು ಸಿದ್ಧಾಂತಗಳನ್ನು ಕಂಡುಕೊಂಡದ್ದು ಮತ್ತು ಕನ್ನಡವನ್ನು ಆ ಸಿದ್ಧಾಂತಗಳ ಹಿನ್ನೆಲೆಯಲ್ಲಿಯೇ ಕಾಣಲು ಪ್ರಯತ್ನಿಸಿದರು. ಹಾಗಾಗಿ ಕನ್ನಡದಲ್ಲಿ ಹಲವು ಪ್ರಭೇಧಗಳು ಕಾಣಿಸಿಕೊಂಡವು. ತೌಲನಿಕ, ಚಾರಿತ್ರಿಕ,

ವಿವರಣಾತ್ಮಕ, ವಿಶ್ಲೇಷಣಾತ್ಮಕ, ಪ್ರಾಯೋಗಿಕ ಹಂತಗಳಲ್ಲಿ ಅಧ್ಯಯನವನ್ನು ಸಹ ನಡೆಸಲಾಯಿತು.

೪. 'ಕನ್ನಡದ್ದೇ ಚಿಂತನೆ' ಅಥವಾ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ ಎಂಬ ವ್ಯಾಪಕಾರ್ಥದ ಆಲೋಚನೆ ಇಪ್ಪತ್ತೊಂದನೆ ಶತಮಾನದವರೆಗೆ ಗಟ್ಟಿಗೊಳ್ಳಲೇ ಇಲ್ಲ. ಅಂತಹದೊಂದು ತಾತ್ವಿಕ ಚಿಂತನೆಯನ್ನು ಕನ್ನಡದಿಂದಲೇ ಕಂಡುಕೊಳ್ಳುವುದು ಕೆಲ ಮನಸ್ಸುಗಳಿಗೆ ಅನರ್ಥ ವಿರೋಧವೇ ಆಗಿತ್ತು. ಕನ್ನಡ ಭಾಷೆಯನ್ನು ಕಲಿಯುವವರು ಹಾಗೂ ಕಲಿಸುವವರು ಇಬ್ಬರೂ ಆಧುನಿಕವಾದ ಚಿಂತನೆಗಳನ್ನು ಗ್ರಹಿಸುವ ಆಸಕ್ತಿಯನ್ನು ತೋರಿಸುತ್ತಿಲ್ಲ. ಕೆಲವು ಪ್ರಮುಖವಾದ ಭಾಷಾಶಾಸ್ತ್ರಜ್ಞರು ಕರ್ನಾಟಕದ ಆಚೆಗೆ ಕೆಲಸಮಾಡಿದ್ದು ಇದಕ್ಕೆ ಒಂದು ಕಾರಣ ಇರುವಂತೆ ಕಾಣುತ್ತದೆ. ಎಚ್. ಎಸ್. ಬಿಳಿಗಿರಿ, ಎಸ್. ಎನ್. ಶ್ರೀದರ, ಎಚ್. ಎಸ್. ಅನಂತನಾರಾಯಣ ಮುಂತಾದವರು. ಹಾಗೆಯೇ ತೀನಂಶ್ರೀ. ಆರ್. ಸಿ. ಹಿರೇಮಠ, ಹಾ. ಮ. ನಾಯಕ, ಎಂ. ಚಿದಾನಂದ ಮೂರ್ತಿ ಮುಂತಾದ ಹಿರಿಯರು ಭಾಷಾಶಾಸ್ತ್ರದಲ್ಲಿ ಮೊದ ಮೊದಲು ತೋರಿಸಿದ ಆಸಕ್ತಿಯನ್ನು ನಂತರದ ವರ್ಷಗಳಲ್ಲಿ ಇತರ ಅಧ್ಯಯನ ಕ್ಷೇತ್ರಗಳ ಕಡೆಗೆ ಆಸಕ್ತಿವಹಿಸಿದ್ದು ಇನ್ನೊಂದು ಕಾರಣ. ಸಂಸ್ಕೃತ ಮೂಲದ ವೈಯಾಕರಣಿಗಳು, ಕನ್ನಡ ಭಾಷಾಧ್ಯಯನಕಾರರು ಹಾಗೂ ಭಾಷಾಶಿಕ್ಷಣವನ್ನು ನಿರ್ದೇಶಿಸುತ್ತಿರುವ ವಿದ್ವಾಂಸರ ನಡುವೆ ಅರ್ಥಪೂರ್ಣವಾದ ಸಂವಾದಗಳ ಬದಲಾಗಿ ಅಬ್ಬರದ ವಾಗ್ವಾದಗಳೇ ನಡೆದಿರುವುದು ಮತ್ತು ನಡೆಯುತ್ತಿರುವುದು ಮತ್ತೊಂದು ಕಾರಣ. ಭಾಷೆ ವಿಚಾರದಲ್ಲಿ ತಜ್ಞರ ಅಭಿಪ್ರಾಯಗಳಿಗೂ ಭಾವುಕವಾದ ಅನಿಸಿಕೆಗಳಿಗೂ ಇರುವ ಗಡಿ ಗೆರೆಗಳೇ ಅಳಿಸಿಹೋಗಿವೆ. ಡಾ. ಡಿ. ಎನ್. ಶಂಕರ ಭಟ್ ಅವರ ಭಾಷಾಧ್ಯಯನಕ್ಕೆ ಬಂದಿರುವ ವಿರೋಧಗಳನ್ನು ಇಲ್ಲಿ ಗಮನಿಸಬಹುದು.

೫. ಕನ್ನಡ ಭಾಷಾಧ್ಯಯನಕ್ಕೆ ಬರವಣಿಗೆಯೇ ಅಂತಿಮವೆಂದುಕೊಂಡದ್ದು. ಹಾಗಾಗಿ ಭಾಷಾಧ್ಯಯನಕ್ಕೆ ಬರಹವನ್ನೇ ಅಂತಿಮ ಸರಕಾಗಿಸಿಕೊಂಡದ್ದು. ಭಾಷೆಯ ಮೂಲಭೂತ ನೆಲೆಯಾದ ಮಾತು (ಮೌಖಿಕ ನೆಲೆ)ನ್ನು ಗಣನೆಗೆ ತೆಗೆದುಕೊಳ್ಳದೆ ಹೋದದ್ದು ಒಂದು ಕಾರಣವಾಗಿದೆ.

೬. ಕನ್ನಡ ಭಾಷಾಧ್ಯಯನವೆಂಬುದು ಹಲವು 'ಕನ್ನಡಂಗಳ್' ಹೆದ್ದಾರಿಯಾಗಿದೆ. ಆ ಎಲ್ಲ ವೈವಿಧ್ಯಗಳನ್ನು ಒಂದೇ ಎಂದು ಪ್ರತಿಪಾಧಿಸಲಾಗುತ್ತಿದೆ. ಇದರಿಂದ ಜನಭಾಷೆ ಮತ್ತು ಅಧ್ಯಯನ ಎರಡೂ ಬೇರೆ ಬೇರೆಯಾಗಿ ನಿಂತಿವೆ. ಅವೆರಡನ್ನೂ ಅರ್ಥಪೂರ್ಣವಾಗಿ ಮುಖಾಮುಖಿಯಾಗಿಸುವ ಅಥವಾ ನಿಜವಾದ ವೈವಿಧ್ಯತೆಯನ್ನು ಗುರುತಿಸುವ/ವಿಮರ್ಶಿಸುವ ಅಧ್ಯಯನಗಳ ಈವರೆಗೆ ನಡೆದಿಲ್ಲ. ಕುತೂಹಲದಿಂದ ಕಂಡು ವಿಶ್ಲೇಷಿಸುವ ಬದಲು ರಿಮೋಟ್‌ನಂತೆ ನಿಯಂತ್ರಿಸುವ ನೆಲೆಯಲ್ಲಿ ವರ್ತಿಸಲಾಗಿದೆ. ಇದಕ್ಕೆ ಅಪವಾದವೆನ್ನುವಂತೆ ಬಿಡಿ ಬಿಡಿ ಚಿಂತನೆಗಳು ಇವೆಯಾದರೂ ಒಂದು ಚಿಂತನಮಾದರಿಯಾಗಿ ಇನ್ನೂ ಪ್ರಭಾವಿಸಬೇಕಿದೆ.

೭. ಕಾಲ ಕಾಲಕ್ಕೆ ಭಾಷಾಧ್ಯಯನದಲ್ಲಿ ವ್ಯತ್ಯಾಸಗಳು ಕಂಡುಬಂದರೂ ಅದರ ಸ್ಥಾಯಿ ಗುಣವಾದ ಸಂಸ್ಕೃತದ ನೆರಳಿನಲ್ಲಿ ರೂಪಸಿಕೊಂಡ ಅಧ್ಯಯನದ ಮಾದರಿಯಲ್ಲಿ ಬದಲಾವಣೆಯಾಗಿಲ್ಲ. ಆದರೆ ಪ್ರಾದೇಶಿಕ ಅತವಾ ತಳಮಟ್ಟದಿಂದ 'ಕನ್ನಡಂಗಳ್' ನೆಲೆಯಿಂದ ಅಧ್ಯಯನವನ್ನು ಆರಂಭಿಸಬೇಕಿದೆ.

೮. ಹೆದ್ದಾರಿಯನ್ನು ಬಿಡಿಸಿಕೊಂಡು ಒಳದಾರಿಗಳ ಕಡೆ ನಡೆಯಬೇಕಿದೆ. 'ಬೆತ್ತಲಾಗದೆ ಬಯಲುಸಿಕ್ಕದು' ಎನ್ನುವ ಅಲ್ಲಮನ ಮಾತಿನಂತೆ ಈಗಾಗಲೆ ನೆಚ್ಚಿದ ಪರಕರಗಳನ್ನು ಬಿಟ್ಟು ನಡೆಯಬೇಕಿದೆ.

೯. ಕನ್ನಡ ವರ್ಣಮಾಲೆಗಳು ಎಷ್ಟು ಎಂಬ ವಿಚಾರದಲ್ಲೇ ಒಮ್ಮತದ ಅಭಿಪ್ರಾಯವಿಲ್ಲ. ಮತ್ತು ಕನ್ನಡಕ್ಕೆ ಅಗತ್ಯವಿರುವ, ಇಲ್ಲದಿರುವ ಬಗ್ಗೆ ಖಚಿತವಾದ ವೈಜ್ಞಾನಿಕವಾದ ಸಮರ್ಪಕ ಉತ್ತರ ಕಂಡುಕೊಂಡಿಲ್ಲ. ಆದರೆ ಆ ಕಾರ್ಯವನ್ನು ಮಾಡುತ್ತಿರುವ ಡಿ. ಎನ್. ಶಂಕರ ಭಟ್ ಅವರು ರೂಪಿಸಿದ ಕನ್ನಡದ ಅಗತ್ಯವಾದ ವರ್ಣಮಾಲೆ ಕುರಿತು ಗಂಭೀರ ಚಿಂತನೆಯ ನಡೆಯುವ ಬದಲಾಗಿ ಭಾವುಕ ಆರೋಪಗಳಲ್ಲಿಯೇ ಕಾಲಕಳೆಯಲಾಗುತ್ತಿದೆ.

೧೦. ಸಂಸ್ಕೃತದ ಮಾದರಿಯಲ್ಲಿ ರಚಿಸಲ್ಪಟ್ಟ ಆರಂಭದ ಕನ್ನಡ ವ್ಯಾಕರಣಗಳು ಕಟ್ಟಿಕೊಟ್ಟ ವರ್ಣಮಾಲೆಯನ್ನು ಮುಂದುವರೆಸಿದ್ದೇವೆ. ಆದರೆ ಇಂದು ಅದರ ಅಗತ್ಯತೆ ನಮಗೆ ತಲೆದೋರುತ್ತಿಲ್ಲ. ಹಾಗಾಗಿ ಡಾ. ಡಿ. ಎನ್.

ಶಂಕರ ಭಟ್ ಮತ್ತು ಡಾ. ಕೆ. ವಿ. ನಾರಾಯಣ ಅವರು ವರ್ಣಮಾಲೆಯನ್ನು ಕುರಿತು ಹೇಳುವ ವೈಜ್ಞಾನಿಕ ಚಿಂತನೆಯನ್ನು ಗಂಭೀರವಾಗಿ ಪರಿಗಣಿಸಬೇಕಿದೆ. ಅಲ್ಲದೆ ಇಂದು ಕನ್ನಡಕ್ಕೆ ಮಹಾಪ್ರಾಣಗಳ ಅಗತ್ಯವಿಲ್ಲ ಎಂದಾಗ ಅನಕ್ಷರಸ್ತರ, ಗ್ರಾಮೀಣರ, ಮತ್ತು ಕೆಳ ಜಾತಿಯವರ, ಶೂದ್ರರ ಮತ್ತು ಸಹಜವಾಗಿ ಕನ್ನಡ ಮಾತನಾಡುವ ಸಂದರ್ಭಗಳಲ್ಲಿ ಮಹಾಪ್ರಾಣಗಳ ಅಗತ್ಯವಿಲ್ಲ. ಮಹಾಪ್ರಾಣಗಳ ಬಳಕೆ ಕೇವಲ ಭಾಷಾಲಕ್ಷಣವಾಗಿ ಕಾಣುತ್ತದೆಯೇ ಹೊರತು ಭಾಷಾಚಿಂತನೆಯ ನೆಲೆಯಲ್ಲಿ ಕಾಣುತ್ತಿಲ್ಲ. ಆದ್ದರಿಂದ ಕನ್ನಡ ಭಾಷಾಶಾಸ್ತ್ರವು ಸಾಮಾಜಿಕ ಸಂದರ್ಭವನ್ನು ಗಮನಿಸಿ ತನ್ನನ್ನು ತಾನು ಮರು ರೂಪಿಸಿಕೊಳ್ಳಬೇಕಿದೆ. ಏಕೆಂದರೆ ಜನರು ತಾವುಮಾತನಾಡುವ ಭಾಷೆಗೂ ತಾವು ಓದುವ ಅಥವ ಕಲಿಯುವ ಭಾಷೆಗೂ ಅಂತರವಿರುವುದರಿಂದ ಗೊಂದಲಕ್ಕೊಳಗಾಗುತ್ತಾರೆ. ಈ ಅಂತರ ಕೇವಲ ವ್ಯತ್ಯಾಸ ಮಾತ್ರವಲ್ಲ ತಾರತಮ್ಯವೂ ಹೌದು. ಹಾಗಾಗಿಯೇ ಬರವಣಿಗೆ ಉತ್ತಮ ಮಾತು ಅಧಮ ಎಂದು ಗ್ರಹಿಸಲಾಗುತ್ತದೆ.

೧೧. ನಾಗವರ್ಮ, ಕೇಶಿರಾಜ ಮತ್ತು ಭಟ್ಟಾಕಳಂಕ ಇವರು ರಚಿಸಿದ ಕನ್ನಡ ಭಾಷೆಯ ವ್ಯಾಕರಣಗಳನ್ನು ನೋಡಿದರೆ ಅಲ್ಲಿ ಶಿಷ್ಟ ಪ್ರಭೇದದ ಪರವಾದ ನಿಲುವುಗಳು ಕಾಣಬರುತ್ತವೆ. ಮೊದ ಮೊದಲು ವ್ಯಾಕರಣಗಳನ್ನು ಬರೆದವರು ಆಯಾ ಭಾಷೆಯ ಸ್ವರೂಪವನ್ನು ಸೂತ್ರೀಕರಿಸಲು ಯತ್ನಿಸಿದರು ಯಾವ ಪ್ರಯೋಗ ಸರಿ, ಯಾವುದು. ತಪ್ಪು ಎಂಬ ವಿವಾದಗಳಲ್ಲಿ ನಿರ್ಣಯಗಳನ್ನು ನೀಡಲು ಸಿದ್ಧರಾಗುತ್ತಾರೆ. ತಪ್ಪುಗಳಿಗೆ ಪರ್ಯಾಯವಾಗಿ ಸರಿಯಾದ ಪ್ರಯೋಗಗಳನ್ನು ಸೂಚಿಸುತ್ತಾರೆ. ಹೀಗೆ ತಪ್ಪುಗಳನ್ನು ತಿದ್ದಿಕೊಂಡಾಗ ಭಾಷೆಯ ಬಳಕೆ ಶುದ್ಧವಾಗುತ್ತದೆ ಎಂದು ನಿರ್ಣಯಿಸುತ್ತಾರೆ. ವ್ಯಾಕರಣದ ಸೂತ್ರಗಳು ಭಾಷಾ ಬಳಕೆಯನ್ನು ನಿರ್ದೇಶಿಸುವ ನಿಯಮಗಳಾಗುತ್ತವೆ. ಈ ಬಗೆಯ ಆಲೋಚನೆಯೇ ಮುಂದುವರಿಕೆಯಾಗಿ ಇವತ್ತೂ ಸಹ 'ಋ', ಸಂಧಿ, ಸಮಾಸ ಮುಂತಾದ ಸಂಗತಿಗಳನ್ನು ಕುರಿತು ನಿರ್ದೇಶನ ಮಾಡುತ್ತಿವೆ. ಕನ್ನಡ ವ್ಯಾಕರಣವೆಂದರೆ ಶಬ್ದಮಣಿದರ್ಪಣವೇ ಅಂತಿಮ ಎನ್ನುವ ಭಾವನೆ ಇವತ್ತೂ ಬಲವಾಗಿದೆ. ಭಾಷೆಯ ವೈವಿಧ್ಯತೆಯನ್ನು ಒಪ್ಪಿಕೊಳ್ಳುತ್ತಲೇ ಪ್ರಮಾಣ ಭಾಷೆಯ ಉಪಯುಕ್ತತೆಯ ಕಡೆಗೆ ಒಲವನ್ನು ಹೊಂದಲಾಗಿದೆ.

೧೨. ಕಳೆದ ಶತಮಾನದ ಆರಂಭದಲ್ಲೇ ಕನ್ನಡ ಭಾಷೆಯ ಪ್ರಾಚೀನತೆಯನ್ನು ಅಧ್ಯಯನಮಾಡುವ ಆಸಕ್ತಿ ಬೇರೂರಿದೆ. ಸ್ವಾತಂತ್ರ್ಯ ಚಳುವಳಿ, ಏಕೀಕರಣ ಹೋರಾಟ ಮುಂತಾದವುಗಳ ನಿಮಿತ್ತವಾಗಿ ಕಂಡುಬರುತ್ತದೆ. ಆದರೆ ಇಂತಹ ಚಾರಿತ್ರಿಕತೆಯನ್ನು ಕಟ್ಟಿಕೊಳ್ಳುವಾಗ ಸಹಜವಾಗಿಯೇ ಲಿಖಿತ ದಾಖಲೆಗಳನ್ನು ನೆಚ್ಚಿಕೊಂಡು ಕಟ್ಟಿಕೊಳ್ಳುವ ಪ್ರಯತ್ನವಾಗಿದೆ. ಹಾಗಾಗಿ ನಡುಗನ್ನಡ, ಹೊಸಗನ್ನಡ, ಹಳೆಗನ್ನಡ ಎಂದು ಹೆಸರಿಸುತ್ತ ವಿವರಣೆಯನ್ನು ಮಾತ್ರ ನೀಡಲಾಗಿದೆ. ಯಾಕೆ ವ್ಯತ್ಯಾಸಗಳು ಕಾಣಿಸಿಕೊಂಡಿವೆ, ಕಾರಣಗಳೇನು? ಎಂಬ ಪ್ರಶ್ನೆಯನ್ನು ಕೇಳಿಕೊಂಡಿಲ್ಲ. ಈ ಸಂಗತಿಗೆ ಡಾ. ಡಿ. ಎನ್. ಶಂಕರ ಭಟ್ ಅವರು ಅಪವಾದ. ಅವರು ಭಾಷೆಯ ಚರಿತ್ರೆಯನ್ನು ಕಟ್ಟುವಾಗ ಲಿಖಿತ ದಾಖಲೆಗಳನ್ನು ಮಾತ್ರವೇ ಅವಲಂಬಿಸದೆ ಇಂದಿನ ಆಡುರೂಪಗಳನ್ನು ಕೂಡ ಪರಿಗಣಸಬೇಕೆಂದು ವಾದಿಸುತ್ತಾರೆ. ಆ ಕಾರಣಕ್ಕಾಗಿಯೇ ಅವರು ಕನ್ನಡ ಭಾಷೆಯ ಕಲ್ಪಿತ ಚರಿತ್ರೆಯನ್ನೂ ರೂಪಿಸಿದ್ದಾರೆ.

೧೩. ಆಧುನಿಕ ಭಾಷಾಶಾಸ್ತ್ರವನ್ನು ಅಧ್ಯಯನಮಾಡಿದ ಹಲವು ಭಾಷಾತಜ್ಞರು ಜಗತ್ತಿನ ಹಲವು ಭಾಷಾಶಾಸ್ತ್ರದ ಸಿದ್ಧಾಂತಗಳ ನೆಲೆಯಲ್ಲೂ ಕನ್ನಡವನ್ನು ಅಧ್ಯಯನಮಾಡಿದ್ದಾರೆ. ಕನ್ನಡದ ಹಲವು ನೆಲೆಯ ಪ್ರಭೇದಗಳನ್ನೂ ವಿಶ್ಲೇಷಿಸುವ ಪ್ರಯತ್ನಗಳು ಮುಂದುವರೆದಿವೆ. ಸಮಕಾಲೀನ ಪ್ರಾದೇಶಿಕ ಮತ್ತು ಸಾಮಾಜಿಕ ಪ್ರಭೇದಗಳನ್ನು ಕೆಲವರು ವಿವರಿಸಿದರೆ ಮತ್ತೆ ಕೆಲವರು ಕನ್ನಡದ ವಿವಿಧ ಚಾರಿತ್ರಿಕ ಪ್ರಭೇದಗಳನ್ನು ವಿವರಿಸಿದ್ದಾರೆ. ಈಗಾಗಲೇ ಹೇಳಿದಂತೆ ಈ ಚಾರಿತ್ರಿಕ ವಿವರಣೆಕಾರರು ಸಾಹಿತ್ಯ ಕೃತಿಗಳನ್ನು ಮತ್ತು ಶಾಸನಗಳನ್ನು ಭಾಷಿಕ ಆಕರಗಳೆಂದು ಬಳಸಿಕೊಂಡಿದ್ದಾರೆ. ಇಂತಹ ಪ್ರಯತ್ನಗಳಿಂದ ಭಾಷಾಧ್ಯಯನವು ಇನ್ನಷ್ಟು ಬೆಳೆದರೂ ಸಹ ಈ ಎರಡು ಬಗೆಯ ಅಧ್ಯಯನಕಾರರ ನಡುವೆ ಒಂದು ಅರ್ಥಪೂರ್ಣ ಸಂವಾದ ನಡೆದಿಲ್ಲ. ಆಧುನಿಕ ಭಾಷಾಶಾಸ್ತ್ರವನ್ನು ಬಲ್ಲವರು ಇಂಗ್ಲೀಷ್ ಭಾಷೆಯಲ್ಲಿ ತಮ್ಮ ಆಲೋಚನೆಗಳನ್ನು ಮಂಡಿಸಿದರು. ಇವರ ಚಿಂತನೆ ಕನ್ನಡದ ಆಸಕ್ತ ವಲಯದಿಂದ ಹೊರಗೆ ಉಳಿಯಿತು. ಇಂತಹ ಎಲ್ಲ ಬಾಹ್ಯ ಕಾರಣಗಳಿಂದಾಗಿಯೇ ಹಳೆಯ ಪರಂಪರೆಯೊಂದು ಯಾವ ಅಡೆ ತಡೆಯಿಲ್ಲದೆ ಮುಂದುವರೆಯುತ್ತಾ ಹೋಯಿತು.

೧೪. ಸಂಸ್ಕೃತ ವ್ಯಾಕರಣದ ಚೌಕಟ್ಟಿಗೆ ಹೊಂದಿಸಲು ಕನ್ನಡ ಭಾಷೆಯಲ್ಲಿ ಇಲ್ಲದಿರುವ ರಾಚನಿಕ ನಿಯಮಗಳನ್ನು ಕಂಡುಕೊಳ್ಳುವ ವ್ಯರ್ಥಪ್ರಯತ್ನಮಾಡಲಾಗಿದೆ. ಇದರಿಂದಾಗಿ ಕನ್ನಡ ಭಾಷೆಯ ನಿಜವಾದ ಸ್ವರೂಪ ತಿಳಿಯುತ್ತಿಲ್ಲ. ಹತ್ತೊಂಬತ್ತನೆಯ ಶತಮಾನದಲ್ಲಿ ಕನ್ನಡಕ್ಕೆ ವ್ಯಾಕರಣ ರಚಿಸಿದ ಕ್ರಿಶ್ಚಿಯನ್ ಮಿಷನರಿಗಳು ಲ್ಯಾಟಿನ್ ಭಾಷೆಯ ನಿಯಮಗಳನ್ನು, ರಚನೆಯ ಸ್ವರೂಪವನ್ನು ಕನ್ನಡದಲ್ಲಿ ಗುರುತಿಸಲು ಪ್ರಯತ್ನಿಸಿದರು. ಇಲ್ಲಿಯೂ ಕನ್ನಡದ ನಿಜಸ್ವರೂಪ ಪ್ರಕಟವಾಗುವ ಅವಕಾಶ ತಪ್ಪಿಹೋಯಿತು. ಡಾ. ಡಿ. ಎನ್. ಶಂಕರ ಭಟ್ ಅವರು ಈ ಪರಿಸ್ಥಿತಿಯನ್ನು ಮನಗಂಡು ಕನ್ನಡ ಭಾಷೆಯ ರಚನೆಯನ್ನು ಆ ಭಾಷೆಯ ಮೂಲಕವೆ ಕಂಡುಕೊಳ್ಳಬೇಕೆಂದು ವಾದಿಸುವ ಮತ್ತು ಅಂತಹ ಸಹಜ ಕನ್ನಡದ ಚಿಂತನೆಯನ್ನು ಕಟ್ಟಿಕೊಡುತ್ತಿದ್ದಾರೆ. ಮತ್ತು ಅವರು ಎರಡು ನೆಲೆಯಲ್ಲಿ ಮುಂದುವರೆದಿದ್ದಾರೆ. ಒಂದು ಸಂಸ್ಕೃತ ವ್ಯಾಕರಣದ ನಿಯಮಗಳು ಕನ್ನಡಕ್ಕೆ ಹೊಂದುವುದಿಲ್ಲ ಎಂದು ತೋರಿಸುವುದು. ಎರಡು ಕನ್ನಡ ಭಾಷೆಯನ್ನು ವಿಶ್ಲೇಷಿಸುವ ಮೂಲಕವೇ ಕನ್ನಡ ಭಾಷೆಯ ರಚನೆಯನ್ನು ಗ್ರಹಿಸುವುದು ಎಂಬುದು. ಈ ನೆಲೆಯಲ್ಲಿಯೇ ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ನಿಜಕ್ಕೂ ಹಳೆಗನ್ನಡ ವ್ಯಾಕರಣ ಎಂತಹದ್ದು?, ಕನ್ನಡ ಬರಹವನ್ನು ಸರಿಪಡಿಸೋಣ!, ಕನ್ನಡ ನುಡಿ ನಡೆದು ಬಂದ ಬಗೆ, ಸೊಲ್ಲರಿಮೆ ಮುಂತಾದ ಕೃತಿಗಳಾಗಿವೆ.

೧೫. ಕೆ. ವಿ. ಎನ್ ಮತ್ತು ಡಿ. ಎನ್. ಶಂಕರ ಭಟ್ ಅವರು ಕನ್ನಡ ಭಾಷೆಯ ಚಿಂತನೆ ಚರಿತ್ರೆಯನ್ನು ಮತ್ತು ಪಾಶ್ಚಾತ್ಯದ ಹಲವು ಚಿಂತನೆಯ ಮಾದರಿಗಳನ್ನು ಚೆನ್ನಾಗಿ ಅಭ್ಯಾಸಮಾಡಿದವರಾಗಿದ್ದಾರೆ. ಯಾವುದೇ ಒಂದು ಭಾಷೆಯ ನಿಯಮಗಳನ್ನು ಆ ಭಾಷೆಯ ಜನಜೀವನ ಮತ್ತು ಸಂಸ್ಕೃತಿಯನ್ನು ಅವಲಂಬಿತ ಭಾಗವಾಗಿಯೇ ಅವರು ಕಾಣುತ್ತಾರೆ. ಹಾಗಾಗಿ ಕನ್ನಡ ಭಾಷೆಯ ಸೊಲ್ಲರಿಮೆಯನ್ನು ಕಂಡುಕೊಳ್ಳಲು ಅವರು ಕೇವಲ ಶಾಸನ, ಕೃತಿಗಳನ್ನು ಮಾತ್ರ ಆಶ್ರಯಿಸುವುದಿಲ್ಲ. ಜನಬಳಕೆಯ ಭಾಷೆಯನ್ನು ಪರೀಕ್ಷಿಸುವುದರ ಮೂಲಕ ಕನ್ನಡದ್ದೇ ಆದ ವ್ಯಾಕರಣ, ಭಾಷಾ ಚಿಂತನೆಯನ್ನು ಕಟ್ಟುವ ಜೊತೆ ಜೊತೆಗೆಯ್ತೇ ಅಗತ್ಯವಿದ್ದ ಕಡೆ ಹೊಸ ಪದಗಳನ್ನು ಕಟ್ಟಿಕೊಡುತ್ತಿದ್ದಾರೆ.

೧೬. ಸಂಸ್ಕೃತ ಇಂಗ್ಲೀಶ್ ಅಧ್ಯಯನ ಮಾದರಿಯಿಂದ ರೂಪಗೊಂಡಿರುವ ಕನ್ನಡ ಭಾಷಾಧ್ಯಯನ ಪರಂಪರೆಯು 'ಕನ್ನಡದ್ದೇ ಆದ' ಭಾಷಾಧ್ಯಯನ, ವ್ಯಾಕರಣ, ಸಾಹಿತ್ಯಮೀಮಾಂಸೆ ಅಧ್ಯಯನದ ಪರಂಪರೆಯೊಂದನ್ನು ಕಟ್ಟಿಕೊಳ್ಳಬೇಕಿದೆ. ಆ ದಿಸೆಯಲ್ಲಿ ಹೆಚ್ಚಿನ ಸಂಶೋಧನೆಗಳು ನಡೆಯಬೇಕಿದೆ.

ಈ ಅಧ್ಯಯನದ ನೆರವಿಗೆ ಬಳಸಿಕೊಳ್ಳಲಾದ ಕೃತಿ ಮತ್ತು ಪತ್ರಿಕೆಗಳನ್ನು ಆಯಾ ಅಧ್ಯಾಯದ ಕೊನೆಯಲ್ಲಿ ಅಡಿ ಟಿಪ್ಪಣಿಯನ್ನು ಕೊಡಲಾಗಿದೆ. ಅಲ್ಲದೆ ಕೊನೆಯಲ್ಲಿ ಪರಾಮರ್ಶನ ಪುಸ್ತಕಗಳು ಮತ್ತು ಪತ್ರಿಕೆಗಳನ್ನು ಅನುಕ್ರಮವಾಗಿ ಪಟ್ಟಿಯನ್ನು ಸಹ ಕೊಟ್ಟಿರುವೆ.

# ಪರಾಮರ್ಶನ ಪುಸ್ತಕಗಳು ಮತ್ತು ಪತ್ರಿಕೆಗಳು


| | | |
|---|---|---|
| 1. ಅಂಗಡಿ ಎಸ್.ಎಸ್. ಸಂ | 2004 | ಸರಳ ಶಬ್ದಮಣಿದರ್ಪಣ ಪ್ರಸಾರಾಂಗ,<br>ಕನ್ನಡ ವಿಶ್ವವಿದ್ಯಾಲಯ,ಹಂಪಿ |
| 2. ಅಮರೇಶ ನುಗಡೋಣಿ ಸಂ: | 2008 | ಕನ್ನಡ ಸಂಶೋಧನೆ ವೈಧಾನಿಕತೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 3. ಅಶೋಕಕುಮಾರ ರಂಜೇರೆ | 2005 | ಭಾಷೆ ಮತ್ತು ಶಿಕ್ಷಣ<br>ನಿಧಿ ಪ್ರಕಾಶನ ಹೊಸಪೇಟೆ |
| 4. ಅಶೋಕಕುಮಾರ ರಂಜೇರೆ | 2011 | ಭಾಷೆ ಸಮಾಜ ಶಿಕ್ಷಣ<br>ಪಲ್ಲವ ಪ್ರಕಾಶನ ಚೆನ್ನಪಟ್ಟಣ |
| 5. ಅನಂತರಂಗಾಚಾರ ಎನ್. | 1970 | ಸಾಹಿತ್ಯ ಭಾರತಿ<br>ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು |
| 6. ಅನಂತರಾಮು ಕೆ. | 2010 | ಕನ್ನಡ ವ್ಯಾಕರಣಗಳು<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ<br>ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು |
| 7. ಅನಂತರಾಮು ಕೆ. | 2010 | ಕನ್ನಡ–ಸಂಸ್ಕೃತ ಸಂಬಂಧ<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ<br>ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು |
| 8. ಆರ್ವಿಯಸ್ ಸುಂದರಂ | 2009 | ಶಾಸ್ತ್ರೀಯ ಕನ್ನಡ ಭಾಷೆ<br>ಅಭಿರುಚಿ ಪ್ರಕಾಶನ ಮೈಸೂರು |

| | | |
|---|---|---|
| 9. ಕಲ್ಬುರ್ಗಿ ಎಂ.ಎಂ. | 1973 | ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ<br>ಸ್ನೇಹ ಪ್ರಕಾಶನ ಬೆಂಗಳೂರು |
| 10. ಕಾಡದೇವರ ಮಠ ಎಲ್ ಎಸ್. | 1996 | ಕನ್ನಡ ಭಾಷಾ ಅಧ್ಯಯನ<br>ವಿದ್ಯಾನಿಧಿ ಪ್ರಕಾಶನ ಗದಗ |
| 11. ಕುಶಾಲಪ್ಪಗೌಡ ಕೆ. | 2008 | ಕನ್ನಡ ಭಾಷೆ ಮತ್ತು ವ್ಯಾಕರಣಗಳ ಒಂದು<br>ಸಮೀಕ್ಷೆ<br>ಕಾರ್ತಿಕ್ ಎಂಟರ್ ಪ್ರೈಸಸ್ ನಂ.114,<br>4ನೇ ಅಡ್ಡ ರಸ್ತೆ ಬಿಸಿಸಿ ಬಡಾವಣೆ<br>ಅತ್ತಿಗುಪ್ಪೆ ವಿಜಯನಗರ 2ನೇ ಹಂತ<br>ಬೆಂಗಳೂರು |
| 12. ಕುಲಕರಣಿ ಪ್ರಗೋ. | 1967 | ಕನ್ನಡ ಭಾಷೆಯ ಚರಿತ್ರೆ<br>ಪಿ.ಗಿ.ಕುಲಕರ್ಣಿ 200/33 ಹಿದವಾಡಿ,<br>ಬೆಳಗಾಮ್ |
| 13. ಕೆಂಪೇಗೌಡ ಕೆ. | 1996 | ಸಾಮಾನ್ಯ ಭಾಷಾ ವಿಜ್ಞಾನ<br>ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು |
| 14 ಕೆಂಪೇಗೌಡ ಕೆ. | 1997 | ಕನ್ನಡ ಭಾಷಾ ಸ್ವರೂಪ<br>ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸ<br>ಗಂಗೋತ್ರಿ ಮೈಸೂರು–06 |
| 15 ಕೇಶವ ಮಳಗಿ | 2011 | ಸಂಕಥನ<br>ಕಥನ ಪ್ರಕಾಶನ ನಾಗರಭಾವಿ ಬೆಂಗಳೂರು |
| 16 ಕೃಷ್ಣಯ್ಯ ಎಚ್.ಎಂ. | 1999 | ಕನ್ನಡ ಭಾಷಾಯ ಸಂಕ್ಷಿಪ್ತ ಚರಿತ್ರೆ |

| | | |
|---|---|---|
| | | ಅಂಕಿತ ಪುಸ್ತಕ 53 ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್<br>ಗಾಂಧಿ ಬಜಾರ್ ಮುಖ್ಯ ರಸ್ತೆ, ಬಸವನಗುಡಿ<br>ಬೆಂಗಳೂರು–04 |
| 17. ಕೃಷ್ಣ ಮೂರ್ತಿ ಹನೂರು | 2010 | ಕನ್ನಡದಲ್ಲಿ ಅನ್ಯದೇಶ್ಯ ಪದಗಳು<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ<br>ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು |
| 18 ಗಣೇಶ್ ಆರ್ | 2005 | ಭಾಷಾ ಭೃಂಗದ ಬೆನ್ನೇರಿ...<br>ವಸಂತ ಪ್ರಕಾಶನ, ನಂ. 10 ತುಳಸೀವನ<br>ಬೆಂಗಳೂರು. |
| 19 ಗುರುಪಾದ ಕೆ. ಹೆಗಡೆ | 2002 | ಸಂಸ್ಕೃತ ವ್ಯಾಕರಣ ದೀಪಿಕೆ<br>ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು |
| 20 ಗೀತಾಚಾರ್ಯ ನಾ ಸಂ: | 1999 | ಅಂತರ್ ಶಿಸ್ತೀಯ ಸಂಶೋಧನಾ<br>ವಿಧಿವಿಧಾನಗಳು<br>ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು.19 |
| 21 ಗೊರವರ ಬ.ಸೋ. | 2008 | ಕನ್ನಡ : ರಚನಾತ್ಮಕ ಮತ್ತು<br>ಸಮಾಜೋಭಾಷಿಕ ಅಧ್ಯಯನ<br>ಲಡಾಯಿ ಪ್ರಕಾಶನ ಗದಗ |
| 22 ಚಲಪತಿ ಆರ್. | 2010 | ಪಠ್ಯ ಪುಸ್ತಕಗಳು ಮತ್ತು ಸಾಂಸ್ಕೃತಿಕ<br>ರಾಜಕಾರಣ<br>ಪ್ರಗತಿ ಗ್ರಾಫಿಕ್ಸ್ ಬೆಂಗಳೂರು |
| 23 ಚಂದ್ರ ಪೂಜಾರಿ | 2008 | ಸಂಶೋಧನೆ ಜವಾಬ್ದಾರಿ |

ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

24 ಚಿದಾನಂದ ಮೂರ್ತಿ ಎಂ. 2002 ಭಾಷಾ ವಿಜ್ಞಾನ ಮತ್ತು ಛಂದಸ್ಸು
ಸಪ್ನ ಬುಕ್ ಹೌಸ್ ತುಂಗಾ ಕಾಂಪ್ಲೆಕ್ಸ್
ಗಾಂಧಿನಗರ ಬೆಂಗಳೂರು–09

25 ಚಿದಾನಂದ ಮೂರ್ತಿ ಎಂ. 1998 ಭಾಷಾ ವಿಜ್ಞಾನದ ಮೂಲತತ್ವಗಳು
ಡಿ.ವಿಕೆ.ಮೂರ್ತಿ ಪ್ರಕಾಶನ ಮೈಸೂರು

26 ಚಿದಂಬರ ದೀಕ್ಷಿತ್ 1999 ಕನ್ನಡ ಭಾಷೆಯ ಮೀಮಾಂಸೆ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

27 ತಲ್ವಾಡಿ ಬಿ.ಎಸ್ 2010 ಕನ್ನಡ ಭಾಷೆಗೆ ವಿದೇಶಿ ವಿದ್ವಾಂಸರ ಕೊಡುಗೆ
ಕನ್ನಡ ಅಧ್ಯಯನ ಮತ್ತು ಸಂಶೋಧನಾ
ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು

28 ತಿರುಮಲೇಶ್ ಕೆ. ವಿ. 2006 ನಮ್ಮ ಕನ್ನಡ
ಅಭಿನವ ಪ್ರಕಾಶನ ಬೆಂಗಳೂರು–40

29 ತಿರುಮಲೇಶ್ ಕೆ. ವಿ. 2011 ಇನ್ನಷ್ಟು ಕನ್ನಡ
ಅಭಿನವ ಪ್ರಕಾಶನ ಬೆಂಗಳೂರು.

30 ತೀ.ನಂ.ಶ್ರೀ. 2002 ಭಾರತೀಯ ಕಾವ್ಯ ಮೀಮಾಂಸೆ
ಪ್ರಸಾರಾಂಗ ಮೈಸೂರು
ವಿಶ್ವವಿದ್ಯಾಲಯ,ಮೈಸೂರು

31 ತೀ.ನಂ.ಶ್ರೀ. 2008 ಕನ್ನಡ ಮಧ್ಯಮ ವ್ಯಾಕರಣ
ಗೀತಾ ಬುಕ್ ಹೌಸ್ ಮೈಸೂರು

32 ತೆಕ್ಕುಂಜೆ ಗೋಪಾಲ ಕೃಷ್ಣ ಭಟ್

ಸಂ: ಡಾ. ಪಾದೇಕಲ್ಲು ವಿಷ್ಣು ಭಟ್ 1999 ಕೇಶಿರಾಜ ದರ್ಪಣ–ವ್ಯಾಖ್ಯಾನ
ರಾಷ್ಟ್ರಕವಿ ಗೋವಿಂದಪೈ
ಸಂಶೋಧನಾಕೇಂದ್ರ ಉಡುಪಿ

33. ದಂಡಪ್ಪ ಎಚ್,

ಸುಮಿತ್ರಾಬಾಯಿ ಬಿ. ಎನ್. ಸಂ: 2006 ಸುವರ್ಣ ಸಾಹಿತ್ಯ ವಿಮರ್ಶೆ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕನ್ನಡ ಭವನ ಬೆಂಗಳೂರು.

34 ನರಸಿಂಹಚಾರ್ ಡಿ. ಎಲ್ 1999 ಕೇಶಿರಾಜವಿರಚಿತ ಶಬ್ದಮಣಿದರ್ಪಣಂ
ಡಿ.ವಿ.ಕೆ. ಮೂರ್ತಿ, ಮೈಸೂರು

35. ನಾರಾಯಣ ಕೆ. ವಿ, ಸಂ
ರಾಘವೇಂದ್ರ ರಾವ್ ಎಚ್.ಎಸ್,
ಶ್ರೀನಿವಾಸ ರಾಜು ಚಿ ಸಂ.: 2001 ಗೌರವ
ಅಭಿನವ ಪ್ರಕಾಶನ ಬೆಂಗಳೂರು–40

36 ನಾರಾಯಣ ಕೆ. ವಿ. 2005 ನಮ್ಮೊಡನೆ ನಮ್ಮ ಕನ್ನಡ
ಲೋಹಿಯಾ ಪ್ರಕಾಶನ, ಬಳ್ಳಾರಿ.

37 ನಾರಾಯಣ ಕೆ. ವಿ. 2007 ಕನ್ನಡ ಜಗತ್ತು : ಅರ್ಧಶತಮಾನ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ

38 ನಾರಾಯಣ ಕೆ. ವಿ. ಸಂ: 2009 ಭಾಷೆ ಕನ್ನಡ ವಿ.ವಿ.ವಿಶ್ವಕೋಶ–1
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ

39 ನಾರಾಯಣ ಕೆ. ವಿ. 2010 ತೊಂಡುಮೇವು ಕಂತೆ–3,5,6,7,9
ಬರಹ ಪಬ್ಲಿಷಿಂಗ್ ಹೌಸ್ ಬೆಂಗಳೂರು

| | | |
|---|---|---|
| 40 ಪದ್ಮಶೇಖರ್ | 2010 | ಕನ್ನಡ ಪ್ರಾಕೃತ ಸಂಬಂಧ<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ<br>ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು |
| 41 ಪುಟ್ಟಪ್ಪ ಕೆ. ವಿ. | 2007 | ಕನ್ನಡ ಕೈಪಿಡಿ–1<br>ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ,<br>ಮೈಸೂರು |
| 42 ಪುಟ್ಟಯ್ಯ ಬಿ. ಎಂ. | 2010 | ಸಂಶೋಧನೆ ತಾತ್ವಿಕ ಆಯಾಮಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 43 ಪಾಂಡುರಂಗ ಬಾಬು ಡಿ. | 2005 | ನುಡಿನೋಟ<br>ಆಕಾಶ್ ಪ್ರಕಾಶನ ಹೊಸಪೇಟೆ |
| 44 ಪಾಂಡುರಂಗ ಬಾಬು ಡಿ. | 2010 | ನಮ್ಮ ಆಟಗಳು ನುಡಿಕಟ್ಟು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 45 ಪ್ರಸನ್ನ ಕ.ನಂ. | 2003 | ಕನ್ನಡ ವ್ಯಾಕರಣ ಪದಕೋಶ<br>ಐ.ಬಿ.ಎಚ್.ಪ್ರಕಾಶನ ಜಯನಗರ<br>ಬೆಂಗಳೂರು–11 |
| 46 ಪಾರ್ವತೀಶ | 2009 | some ಪದ<br>ಚಾರು ಪ್ರಕಾಶನ ಬೆಂಗಳೂರು |
| 47 ಪಂಜೆ ಮಂಗೇಶರಾವ್ | 2011 | ಕನ್ನಡ ಮೂಲವ್ಯಾಕರಣ<br>ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು–18 |
| 48 ಬಸವರಾಜ್ ಕಲ್ಗುಡಿ ಸಂ: | 2006 | ಸುವರ್ಣ ಸಾಹಿತ್ಯ ವಿಮರ್ಶೆ |

| | | |
|---|---|---|
| | | ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ ಭವನ ಬೆಂಗಳೂರು. |
| 49 ಬಸವರಾಜ ಕೋಡಗುಂಟಿ | 2007 | ಮಕ್ಕಳ ಭಾಷಾ ವಿಜಾನ್ಣಮತ್ತು ಇತರ ಲೇಖನಗಳು<br>ಬಂಡರ್ ಪ್ರಕಾಶನ ಮಸ್ಕಿ |
| 50 ಬಸವರಾಜ ಕೋಡುಗುಂಟಿ | 2010 | ಕನ್ನಡ ವಿಭಕ್ತಿ ರೂಪಗಳು<br>ಬಂಡಾರ್ ಪ್ರಕಾಶನ ಮಸ್ಕಿ |
| 51 ಬಸವರಾಜು ಎಲ್. ಸಂ: | 1986 | ಶಬ್ದಮಣಿದರ್ಪಣ<br>ಶ್ರೀಚಿನ್ಮೂಲಾದ್ರಿ ಬೃಹನ್ಮಠಸಂಸ್ಥಾನ<br>ಚಿತ್ರದುರ್ಗ |
| 52. ಬಸವರಾಜ ಕೋಡಗುಂಟಿ ಸಂ: (ಎಚ್.ಎಸ್.ಅನಂತನಾರಾಯಣ ಅವರ ಲೇಖನಗಳು) | 2010 | ಭಾಷಾ ವಿಶ್ಲೇಷಣೆ<br>ಬಂಡಾರ ಪ್ರಕಾಶನ ಮಸ್ಕಿ |
| 53 ಬಿಳಿಗಿರಿ ಎಚ್. ಎಸ್. | 2004 | ವರ್ಣನಾತ್ಮಕ ವ್ಯಾಕರಣ<br>ಪ್ರಸಾರಾಂಗ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು |
| 54 ಬಿಳಿಗಿರಿ ಎಚ್. ಎಸ್. | 1995 | ವರಸೆಗಳು<br>ಕನ್ನಡ ಸಂಘ ಕ್ರೈಸ್ಟ್ ಕಾಲೇಜು ಬೆಂಗಳೂರು |
| 55 ಬಿಳಿಗಿರಿ ಎಚ್. ಎಸ್. | 1996 | ಆಲೋಕ<br>ಕಾಮಧೇನು ಶೇಷಾದ್ರಿಪುರ ಬೆಂಗಳೂರು |
| 56 ಭಾಗ್ಯಲಕ್ಷ್ಮಿ ಎಂ. | 2007 | ದ್ವಿಭಾಷಿಕರು |

| | | |
|---|---|---|
| | | ಸಖಿ ಪ್ರಕಾಶನ ಹೊಸಪೇಟೆ |
| 57 ಮಂಜುಳಾಕ್ಷಿ ಎಲ್. | 2004 | ಕ್ಷೇತ್ರ ಭಾಷಾ ವಿಜ್ಞಾನ<br>ಅಭಿರುಚಿ ಪ್ರಕಾಶನ ಕೆ.ಆರ್.ವೃತ್ತ ಮೈಸೂರು |
| 58 ಮಣಿ ಪಿ. | 2010 | ಕನ್ನಡ–ತಮಿಳು ಸಂಬಂಧ<br>ಕನ್ನಡ ಅಧ್ಯಯನ ಮತ್ತು ಸಂಶೋಧನಾ<br>ವಿಭಾಗ ಕ.ರಾಮುಕ್ತ ವಿ.ವಿ. ಮೈಸೂರು |
| 59 ಮಹಾದೇವಯ್ಯ ಪಿ. | 1999 | ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 60 ಮಹಾದೇವಯ್ಯ ಪಿ. | 2000 | ಸಾಮಾಜಿಕ ಉಪಭಾಷೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 61 ಮಹಾದೇವಯ್ಯ ಪಿ. | 2009 | ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 62.ಮಲ್ಲೇಪುರಂ ಜಿ. ವೆಂಕಟೇಶ್ ಸಂ: | 2009 | ಕನ್ನಡ ಭಾಷಾ ಅಧ್ಯಯನ : ತತ್ವ ವ್ಯಾಪ್ತಿ<br>ಜಿಜ್ಞಾಸೆ<br>ಪ್ರತಿಭಾ ಪ್ರಕಾಶನ ಮೈಸೂ ರು |
| 63 ಮಾಧವ ಪೆರಾಜೆ (ಅನು) : | 2005 | ತೌಲನಿಕ ದ್ರಾವಿಡ ವ್ಯಾಕರಣ<br>ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 64 ಮುಗಳಿ ರಂ.ಶ್ರೀ. | 1997 | ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು<br>ಸಮಾಜ ಪುಸಕ್ತಾಲಯ ಧಾರವಾಡ 01 |
| 65 ಮುಗಳಿ ರಂ.ಶ್ರೀ. | 2002 | ಕನ್ನಡ ಸಾಹಿತ್ಯ ಚರಿತ್ರೆ<br>ಗೀತಾ ಬುಕ್‌ಹೌಸ್ ಮೈಸೂರು – 01 |

| | | |
|---|---|---|
| 66 ರವಿಕುಮಾರ ನ. ಸಂ: | 2001 | ನೋಮ್‌ಚಾಮ್‌ಸ್ಕಿ ಮನುಕುಲದ ಮಾತುಗಾರ ಅಭಿನವ ಪ್ರಕಾಶನ ಬೆಂಗಳೂರು-40 |
| 67 ರವೀಂದ್ರನಾಥ ಕೆ. | 2008 | ಅಧ್ಯಯನದ ವಿಧಿ ವಿಧಾನಗಳು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 68 ರಂಗನಾಥ ಕಂಟನಕುಂಟೆ | 2009 | ಜನ ಭಾಷೆ ಮತ್ತು ಪ್ರಭುತ್ವ ಭಾಷೆಗಳ ಸಂಘರ್ಷ ಕೆ.ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಕೃಷ್ಣಾಪುರ ದೊಡ್ಡಿ ಬೆಂಗಳೂರು. |
| 69 ರಹಮತ್ ತರೀಕೆರೆ | 2005 | ಇಲ್ಲಿ ಯಾರೂ ಮುಖ್ಯರಲ್ಲ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ |
| 70 ರಹಮತ್ ತರೀಕೆರೆ ಸಂ: | 2005 | ಮಾತು ತಲೆಯೆತ್ತುವ ಬಗೆ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ |
| 71 ರಹಮತ್ ತರೀಕೆರೆ ಸಂ: | 2007 | ಇಂಗ್ಲೀಷ್ ಗೀತೆಗಳು ಸಾಂಸ್ಕೃತಿಕ ಮುಖಾಮುಖಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 72 ರಹಮತ್ ತರೀಕೆರೆ ಸಂ: | 2008 | ಕವಿರಾಜಮಾರ್ಗ ಸಾಂಸ್ಕೃತಿಕ ಮುಖಾಮುಖಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ |
| 73 ರಹಮತ್ ತರೀಕೆರೆ | 2009 | ಕನ್ನಡ ಸಂಶೋಧನೆ ತಾತ್ವಿಕ ವಿಚಾರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |

| | | |
|---|---|---|
| 74 ರಾಜಪುರೋಹಿತ ನಾ ಶ್ರೀ, | 2008 | ನಾ ಶ್ರೀ ರಾಜಪುರೋಹಿತರ ಲೇಖನಗಳು<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಕನ್ನಡ<br>ಭವನ ಬೆಂಗಳೂರು – 02 |
| 75 ರಾಜಪುರೋಹಿತ ಬಿ. ಬಿ. | 2009 | ಧ್ವನಿ ವಿಜ್ಞಾನ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| 76 ರಾಜಪುರೋಹಿತ ಬಿ. ಬಿ. | 2009 | ಧ್ವನಿ ಶ್ರಾವಣ ಮತ್ತು ಚಾಕ್ಷುಷ ರೂಪ<br>ಬಂಡಾರ್ ಪ್ರಕಾಶನ ಮಸ್ಕಿ |
| 77 ರಾಜಪುರೋಹಿತ ಬಿ. ಬಿ. | 2009 | ವ್ಯಾಸಾನುಭಾವ<br>ಬಂಡಾರ್ ಪ್ರಕಾಶನ ಮಸ್ಕಿ |
| 78. ರಾಘವೇಂದ್ರ ರಾವ್ ಎಚ್.ಎಸ್. ಸಂ | 2001 | ಶತಮಾನದ ಸಾಹಿತ್ಯ ವಿಮರ್ಶೆ<br>ಕರ್ನಾಟಕ ಸಾಹಿತ್ಯ ಅಕಾಡೆಮಿ ಕನ್ನಡ ಭವನ<br>ಜೆ.ಸಿ. ರಸ್ತೆ ಬೆಂಗಳೂರು–02 |
| 79 ರಾಘವೇಂದ್ರ ರಾವ್ ಎಚ್. ಎಸ್. | 2006 | ನಮಸ್ಕಾರ<br>ಅಭಿನವ ಪ್ರಕಾಶನ ಬೆಂಗಳೂರು–40 |
| 80 ರಾಘವೇಂದ್ರ ರಾವ್ ಎಚ್. ಎಸ್. | 2011 | ಚಕ್ರವರ್ತಿಯ ಬಟ್ಟೆಗಳು<br>ಚಾಣಕ್ಯ ಪ್ರಕಾಶನ ಬಿಜಾಪೂರ |
| 81 ಲಿಂಗದೇವರು ಹಳೇಮನೆ | 2000 | ಸಂದರ್ಭ<br>ನಮ್ಮ ಪ್ರಕಾಶನ ಬಿಳಿಗೆರೆ ತಿಪಟೂರು<br>ತಾಲ್ಲೂಕು, ತುಮಕೂರು ಜಿಲ್ಲೆ ಕರ್ನಾಟಕ |
| 82 ಶ್ರೀನಿವಾಸ ಮೂರ್ತಿ ಜೆ. | 2000 | ಭಾರತೀಯ ಭಾಷಾಧ್ಯಯನ ಪರಂಪರೆ<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ |

83 ಶ್ರೀಧರ್ ಎಸ್. ಎನ್. 2009 ಇಂದಿನ ಕನ್ನಡ : ರಚನೆ ಮತ್ತು ಬಳಕೆ
ಅಭಿನವ ಪ್ರಕಾಶನ ಬೆಂಗಳೂರು–40

84 ಶೆಟ್ಟರ್ ಷ. 2007 ಶಂಗಂ ತಮಿಳಗಂ ಮತ್ತು ನಾಡು ನುಡಿ
ಅಭಿನವ ಪ್ರಕಾಶನ ಬೆಂಗಳೂರು–40

85 ಶ್ರೀವತ್ಸ ಎಸ್.ವಟಿ 2009 ಹಲ್ಮಿಡಿ ಶಾಸನ ಒಂದು ಪರಿಚಯ
ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು–18

86 ಶಂ. ಬಾ. ಜೋಶಿ 2004 ಕಂನುಡಿಯ ಹುಟ್ಟು
ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು–18

87. ಶ್ರೀಮತಿ ಎಚ್. ಎಸ್.
ಶಿವಾನಂದ ಎಸ್. ವಿರಕ್ತಮಠ,
ಕೃಷ್ಣ ಜೆ. 2007 ಹೆಣ್ಣು ಮತ್ತು ಭಾಷೆ
ಮಹಿಳಾ ಅಧ್ಯಯನ ಕೇಂದ್ರ ಕನ್ನಡ
ವಿಶ್ವವಿದ್ಯಾಲಯ,ಹಂಪಿ

88 ಶ್ರೀಮತಿ ಎಚ್. ಎಸ್. ಅನು: 2009 ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

89 ಶ್ರೀಕಂಠಯ್ಯ ಬಿ. ಎಂ. 1970 ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ
ಕಾವ್ಯಾಲಯ ಪ್ರಕಾಶನ ಮೈಸೂರು

90 ಶ್ರೀಕಂಠಯ್ಯ ಬಿ.ಎಂ. 1984 ಕನ್ನಡ ಬಾವುಟ
ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು–18

91. ಶೆಲ್ಡನ್ ಪೊಲಾಕ್ ಅನು:
ಅಕ್ಷರ ಕೆ.ವಿ. 2000 ದೇಶಭಾಷೆ ನಿರ್ಮಾಣ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

92. ಶೆಲ್ಡನ್ ಪೊಲಾಕ್ ಅನು:
ಅಕ್ಷರ ಕೆ.ವಿ. 2000 ವಿಶ್ವಾತ್ಮಕ ಭಾಷಾ ನಿರ್ಮಾಣ
ಅಕ್ಷರ ಪ್ರಕಾಶನ ಹೆಗ್ಗೋಡು

93. ಶೇಷಗಿರಿರಾವ್ ಎಲ್. ಎಸ್. ಸಂ: 1985 ಕನ್ನಡದ ಅಳಿವು ಉಳಿವು
ಕನ್ನಡ ಭಾಷಾಭಿವೃದ್ಧಿಯ ಸಮೀಕ್ಷಾ
ಪ್ರಕಾಶನ,30,ವಿಜಯನಗರ ಬೆಂಗಳೂರು–40

94. ಶೇಷಗಿರಿರಾವ್ ಎಲ್. ಎಸ್. ಸಂ: 1999 ಕನ್ನಡ–ಕನ್ನಡಿಗ–ಕರ್ನಾಟಕ
ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

95 ಶಂಕರ ಭಟ್ ಡಿ. ಎನ್. 1969 ಕನ್ನಡ ಭಾಷೆಯ ಸಂಕ್ಷಿಪ್ತ ಚರಿತೆ
ಭಾಷಾ ಪ್ರಕಾಶನ ಯರವಾಡ, ಪುಣೆ

96 ಶಂಕರ ಭಟ್ ಡಿ. ಎನ್. 2001 ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ
ಭಾಷಾ ಪ್ರಕಾಶನ ಮೈಸೂರು

97 ಶಂಕರ ಭಟ್ ಡಿ. ಎನ್. 2002 ಭಾಷೆಯ ಬಗೆಗೆ ನೀವೇನು ಬಲ್ಲಿರಿ?
ಭಾಷಾ ಪ್ರಕಾಶನ ಮೈಸೂರು

98 ಶಂಕರ ಭಟ್ ಡಿ. ಎನ್. 2002 ಕನ್ನಡ ಪದಗಳ ಒಳ ರಚನೆ
ಭಾಷಾ ಪ್ರಕಾಶನ ಮೈಸೂರು

99 ಶಂಕರ ಭಟ್ ಡಿ. ಎನ್. 2005 ನಿಜಕ್ಕೂ ಹಳಗನ್ನಡ ವ್ಯಾಕರಣ ಎಂತಹದು?
ಭಾಷಾ ಪ್ರಕಾಶನ ಮೈಸೂರು

100 ಶಂಕರ ಭಟ್ ಡಿ. ಎನ್. 2005 ಕನ್ನಡ ಬರಹವನ್ನು ಸರಿಪಡಿಸೋಣ!
ಭಾಷಾ ಪ್ರಕಾಶನ ಮೈಸೂರು

| | | |
|---|---|---|
| 101 ಶಂಕರ ಬಟ್ ಡಿ. ಎನ್. | 2006 | ಕನ್ನಡ ನುಡಿಯ ಬಗೆಗೆ ಚಿಂತನೆ<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ<br>ಕನ್ನಡ ಭವನ ಬೆಂಗಳೂರು |
| 102 ಶಂಕರ ಬಟ್ ಡಿ. ಎನ್ | 2006 | ಕನ್ನಡ ವಾಕ್ಯಗಳ ಒಳ ರಚನೆ<br>ಭಾಷಾ ಪ್ರಕಾಶನ ಮೈಸೂರು |
| 103 ಶಂಕರ ಬಟ್ ಡಿ. ಎನ್. | 2007 | ಕನ್ನಡ ನುಡಿ ನಡೆದು ಬಂದ ದಾರಿ<br>ಬಾಶಾ ಪ್ರಕಾಶನ ಹೆಗ್ಗೋಡು ಸಾಗರ |
| 104 ಶಂಕರ ಬಟ್ ಡಿ. ಎನ್. | 2008 | ಮಾತಿನ ಒಳಗುಟ್ಟು<br>ಬಾಶಾ ಪ್ರಕಾಶನ ಹೆಗ್ಗೋಡು ಸಾಗರ |
| 105 ಶಂಕರ ಬಟ್ ಡಿ. ಎನ್. | 2009 | ಕನ್ನಡ ವ್ಯಾಕರಣ ಯಾಕೆ ಬೇಕು?<br>ಬಾಶಾ ಪ್ರಕಾಶನ ಹೆಗ್ಗೋಡು ಸಾಗರ |
| 106 ಶಂಕರ ಬಟ್ ಡಿ. ಎನ್. | 2010 | ಕನ್ನಡ ಸೊಲ್ಲರಿಮೆ–1<br>ಬಾಶಾ ಪ್ರಕಾಶನ ಹೆಗ್ಗೋಡು ಸಾಗರ |
| 107 ಶಂಕರ ಬಟ್ ಡಿ. ಎನ್. | 2011 | ಕನ್ನಡ ಸೊಲ್ಲರಿಮೆ–2<br>ಬಾಶಾ ಪ್ರಕಾಶನ ಬಿಲ್ಲೇ ಶ್ವರ ಹುಂಚ |
| 108 ಶಂಕರ ಬಟ್ ಡಿ. ಎನ್. | 2011 | ಮಾತು ಮತ್ತು ಬರಹದ ನಡುವಿನ ಗೊಂದಲ<br>ಬಾಶಾ ಪ್ರಕಾಶನ,ಆರಗ, ತೀರ್ಥಹಳ್ಳಿ |
| 109 ಸಂಗಮೇಶ ಸವದತ್ತಿಮಠ | 1998 | ಕನ್ನಡ ಭಾಷಾ ವ್ಯಾಸಂಗ<br>ರೂಪದರ್ಶಿ ಪ್ರಕಾಶನ ಕಲಬುರ್ಗಿ |

110 ಸುಗತ ಶ್ರೀನಿವಾಸರಾಜು 2004 ಎಕ್ಸ್ಯೂಪೆ ಫೆಬ್ರವರಿ
ಸಂಚಯ ಪ್ರಕಾಶನ ಬೆಂಗಳೂರು

111 ಸಾಂಬಮೂರ್ತಿ 2009 ಭಾಷಾತಂತ್ರ ಜ್ಞಾನ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

112 ಸಾಂಬಮೂರ್ತಿ 2010 ಕನ್ನಡ ಕ್ರಿಯಾ ಪದಗಳು
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

113 ಸುಬ್ಬಣ್ಣ ಕೆ.ವಿ. 2007 ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು
ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ

114 ಸುವರ್ಣದೇವಿ ಬಿ. ಕೆ. 2009 ಭಾಷಾವಿಜ್ಞಾನ
ಸಾಹಿತ್ಯ ಮಾಲಿಕಾ ಪ್ರಕಾಶನ ಮೈಸೂರು

115 ಸೀತಾರಾಮಯ್ಯ ಎಂ. ವಿ. 1998 ಪ್ರಾಚೀನ ಕನ್ನಡ ವ್ಯಾಕರಣಗಳು
ಕನ್ನಡ ಅಧ್ಯಯನ ಸಂಸ್ಥೆ ಮೈಸೂರು
ವಿಶ್ವವಿದ್ಯಾಲಯ,ಮೈಸೂರು

116 ಸೀತಾರಾಮಯ್ಯ ಎಂ .ವಿ. ಸಂ: 1994 ಕವಿರಾಜಮಾರ್ಗಂ
ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ ಬೆಂಗಳೂರು

117 ಸೋಮಶೇಖರಗೌಡ 2010 ಭಾಷೆ : ರಚನೆ ಬಳಕೆ
ಕನ್ನಡ ಸಾಹಿತ್ಯಪರಿಷತ್ತು ಬೆಂಗಳೂರು–18

118 ಹಂಪಾ ನಾಗರಾಜಯ್ಯ 1968 ಭಾಷಾವಿಜ್ಞಾನ
ಡಿ.ವಿ.ಕೆ.ಮೂರ್ತಿ ಪ್ರಕಾಶನ ಮೈಸೂರು–04

# ಪರಾಮರ್ಶನ ಇಂಗ್ಲೀಷ್ ಪುಸ್ತಕಗಳು


| | | |
|---|---|---|
| 1 Ananthanarayan H.S. | 1980 | Ancient Indian Contriduction Linguistic Thery,method and analysis Calcutta university of Calcutta |
| 2 . Ananthanarayan H.S. | 1981 | Pratyaharas in paninis Astadhyayi Hyderbad,Dept.of Linguistics |
| 3 . BloomField L | 1962 | Language, Newyork holt |
| 4 Brass, paul R. | 1991 | Ethnicity and nationalism:thery and comparison Sage publication, new Delhi |
| 5 Bright William | 1964 | Sociolinguistics The hugue,paris |
| 6 De Saussur F | 1996 | Course in General Linguistics Newyork, London |
| 7 Emeneau M.B. | 1961 | Kolami:A Dravidian Language Annamalia University,Madras |
| 8 Emeneau M.B. | 1965 | India and Historical Grammar |

| | | |
|---|---|---|
| | | Annamalia University,Madras |
| 9 Emeneau M.B. | 1970 | Dravidian comparetive phonology Annamalia University,Madras |
| 10 Emeneau, Murray B. | 1962 | Dravidian and Indian Linguistics Berkeley-UUniversity of California |
| 11 Gayi G.S. | 1947 | Historical Grammar of old kannada Deccan college, Poona |
| 12 Griyarsan G.A. | 1968 | Linguistic survey of India vol IX Motilal banasari Das Rapr.Indo-Aryan Family Central Group,Delhi |
| 13 Harold Spenser | 1914 | A Kanarese Grammaer with Graduated Exercises Weslyan mission press, Mysore |
| 14 Harris Z.S | 1951 | Method in structural Linguistics University of Chicago press, Chicago |
| 15 Karlose S. | 1985 | Structural study of Tamil Kannada Bangalore university,Bengalore |
| 16 Kulli J.S. | 1976 | Keshiraj's sabdamanidarpana: A Linguistics Analysis. |

Karnataka university, Dharawad

| | | |
|---|---|---|
| 17 Lavi Strauss C. | 1963 | Structural Anthropology<br>Newyork |
| 18 Ranganath H.R. | 1994 | Mysore and Dharwad kannada:<br>A comparative Linguistic study<br>Karanataka university Dharwad |
| 19 Rebert Philipson | 1992 | Linguisti Imperialism<br>Oxford University press |
| 20 Suniti kumar chatterji | 1965 | Dravidian<br>Annamalai University, Madras |
| 21 Schiffman,Harold | 1982 | A Reference Grammar of spoken<br>kannada Seattle, university of<br>Washington press |
| 22 Shridar S.N | 1990 | Modern Kannada Grammar<br>Dehli, manohar |
| 23 Swaminathan Aiyar | 1975 | Dravidiian Theories<br>The madras law jarnal office madras |
| 24 Umarji V.R. | 1951 | The influence of Sanskrit Directly<br>through<br>prakrit on kannada Language<br>Mumbai university, Mumbai |

25 William Bright | 1990 | Language Variation in South Asia
Oxford University press

26 Ziegler F | 1953 | A Practical key to the kanarese Language
Basel mission Book Depot, Mongalore

## ಪತ್ರಿಕೆಗಳು

1. ಲಿಂಗದೇವರು ಹಳೇಮನೆ ಸಂ: ಅರುಹು ಕುರುಹು ಕನ್ನಡ ತ್ರೈಮಾಸಿಕ
ಜನವರಿ–ಮಾರ್ಚ್ 2011 ಸಂಪುಟ–2,ಸಂಚಿಕೆ–8

2 .ವಿವೇಕ ಶಾನಭಾಗ ಸಂ: ದೇಶಕಾಲ ಸಂಚಿಕೆ–14 ಜುಲೈ–ಸೆಪ್ಟೆಂಬರ್ 2008

3 .ವಿವೇಕ ಶಾನಭಾಗ ಸಂ: ದೇಶಕಾಲ ಸಂಚಿಕೆ–15 ಅಕ್ಟೋಬರ್–ಡಿಸೆಂಬರ್ 2008

4 .ಆರ್ ಚಲಪತಿ (ಸಂ.) ನುಡಿ ನಾಡಿ ಪತ್ರಿಕೆ ಮೂರು ತಿಂಗಳಿಗೊಮ್ಮೆ
ಮಾಚ್–2011 ಸಂಚಿಕೆ–3

